# ವೈವಿಧ್ಯ ಕಲಾಚಿಂತನೆಯ ಕಿಶೋರ್ ಕುಮಾರ್



ಗುಲ್ಬರ್ಗಾ ಜಿಲ್ಲೆ ಗೋಗಿ ಗ್ರಾಮದ ಕಲಾವಿದ ಕಿಶೋರ್ ಕುಮಾರ್ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಯಿಂದ ಜಿ. ಡಿ. ಆರ್ಟ್ಸ್, ಆರ್ಟ್ ಮಾಸ್ಟರ್ ವ್ಯಾಸಂಗದಲ್ಲಿ ತೇರ್ಗಡೆ ಹೊಂದಿದವರು. ತಂದೆ ಸೂರಯ್ಯ ಹಿರೇಮಠ, ತಾಯಿ ಸುಶೀಲಮ್ಮ ಅವರ ಕಲಾ ಅಕ್ಕರೆ ಹಾಗೂ ಗುರು ವಿ. ಜಿ. ಅಂದಾನಿಯವರ ತಜ್ಞ ಮಾರ್ಗದರ್ಶನದಲ್ಲಿ ಪರಿಪಕ್ವವಾಗಿ ಅರಳಿದ ಕಲಾವಿದ. ನಾಲ್ಕು ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ, ಇಪ್ಪತ್ತಾರು ಸಾಮೂಹಿಕ ಚಿತ್ರಕಲಾ ಪ್ರದರ್ಶನಗಳಲ್ಲಿ ಭಾಗಿಯಾಗಿ ಚಿತ್ರ ಸಮೂಹದವರ ಗಮನ ಸೆಳೆದಿದ್ದಾರೆ.

ಕರ್ನಾಟಕ ಲಲಿತಕಲಾ ಅಕಾಡೆಮಿ, ಅಖಿಲ ಭಾರತ ಚಿತ್ರಕಲಾ ಪ್ರದರ್ಶನಗಳಲ್ಲಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಎಲ್ಲಾ ವರ್ಣ ಮಾಧ್ಯಮಗಳನ್ನು ಮೈಗೂಡಿಸಿಕೊಂಡಿರುವ ಇವರು ಸರಣಿ ಚಿತ್ರಗಳನ್ನು ಬರೆಯುವುದರಲ್ಲಿ ವಿಶೇಷ ಗಮನ ಹರಿಸಿದ್ದಾರೆ. ಬುದ್ಧನ ಬಗೆಗಿನ ಸರಣಿ ಚಿತ್ರ ಎಲ್ಲರ ಗಮನ ಸೆಳೆದಿವೆ.

– ಪಿ. ಎಂ. ರಾಜನ್
ನಂ. ೪೩ (೪೨), ಥಿಯೋಬಾಲ್ಡ್ ರಸ್ತೆ, ನಜರ್‌ಬಾದ್, ಮೈಸೂರು-೫೭೦ ೦೧೦



ಬೆಕ್ಕಿನೊಡನೆ ಹೆಣ್ಣು (ತೈಲವರ್ಣ ಕಲಾಕೃತಿ)



ಬುದ್ಧ (ಆಕ್ರಲಿಕ್ ಕಲಾಕೃತಿ)



ಕನಸು (ತೈಲವರ್ಣ ಕಲಾಕೃತಿ)

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




**ಚಿತ್ರಗಳು :** ಸೃಜನ್, ಎನ್. ಆರ್. ಬೊಮ್ಮಳ್ಳಿ
ಶ್ರೀ ಹರಿ, ಜಿ. ಎಂ. ಬೊಮ್ಮಳ್ಳಿ

**ಮುಖಪುಟದಲ್ಲಿ:** ಲೆನಿನ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

**ಕೆ**ಲವು ಅವಿವೇಕಿಗಳ ಬಾಲಿಶ ಗಾರ್ದಭಗಾನವು ನಮ್ಮ ರಾಜ್ಯದಲ್ಲಿ ಮುಗಿಲುಮುಟ್ಟಿದೆ. ನಾವೆತ್ತ ಸಾಗುತ್ತಿದ್ದೇವೆಂಬುದರ ಬಗ್ಗೆ ಬಲವಾದ ಶಂಕೆ ಕಾಡುವ ಸನ್ನಿವೇಶ ಇದು. ಭಾರತೀಯ ಜನತಾ ಪಕ್ಷದ ನಡೆವಳಿಕೆಯನ್ನು ಕುರಿತ ವಿಮರ್ಶೆಗೆ ನಮ್ಮ ಓದುಗರು ಕೆಲವರು ತೀರಾ ಅಸಮಾಧಾನ ವ್ಯಕ್ತಪಡಿಸುತ್ತಿರುತ್ತಾರೆ. ಆ ಪಕ್ಷದ ನಾಯಕರು ಆತ್ಮಾವಲೋಕನ ಮಾಡಿ ಕೊಳ್ಳದಿದ್ದರೂ ಅವರ ಅಭಿಮಾನಿಗಳು ಅದನ್ನು ಮಾಡಿಕೊಳ್ಳಬೇಕೆಂಬ ಆಶಯ ನಮ್ಮದು. ಬುದ್ಧಿಜೀವಿಗಳು ಯಾರು ಅಥವಾ ಯಾರಲ್ಲ ಎಂಬುದರ ವಿವೇಚನೆಯೇ ಅಸಾಂಗತ್ಯದಿಂದ ಕೂಡಿರುವಾಗ ಬುದ್ಧಿಜೀವಿಗಳನ್ನೆಲ್ಲಾ ಇಡಿಯಾಗಿ ಹೀಯಾಳಿಸಿದರೆ ಅದರರ್ಥವೇನು? ಅಂದರೆ, ಭಾಜಪದ ಸಮರ್ಥಕರ ಪೈಕಿ ಬುದ್ಧಿ ಇರುವವರು ಯಾರೂ ಇಲ್ಲವೆ? ಅಥವಾ ಅಂತಹ ಸಮರ್ಥನೆ ದೊರೆಯಲಿಲ್ಲವೆಂದು ಹತಾಶರಾಗಿ ಶಾಸನ ಸಭೆಯಲ್ಲಿ ಬುದ್ಧಿಜೀವಿಗಳ ಮೇಲೆ ಹರಿಹಾಯ್ದರೆ? ಗುಜರಾತ್‌ನಲ್ಲಿ ನಡೆಸಲಾದ ನರಮೇಧವನ್ನು ವಿರೋಧಿಸಿದ್ದು, ಬಾಬಾಬುಡನ್‌ಗಿರಿಯಲ್ಲಿ ಹೊಸ ಅಸಂಬದ್ಧ ಸಂಪ್ರದಾಯಕ್ಕೆ ಒಪ್ಪಿಗೆ ಸೂಚಿಸದಿದ್ದುದು, ಕುದುರೆಮುಖ ರಾಷ್ಟ್ರೀಯ ಉದ್ಯಾನದಲ್ಲಿ ಬುಡಕಟ್ಟು ಜನರ ಪರವಾಗಿ ನಿಂತಿದ್ದು, ಚಿಕ್ಕಮಗಳೂರು ಸುತ್ತಮುತ್ತ ಕಾಫಿ ತೋಟಗಳ ಭಾರಿ ಮಾಲಿಕರು ಮಾಡಿಕೊಂಡಿರುವ ಒತ್ತುವರಿಯನ್ನು ಬಯಲುಮಾಡಿದ್ದು, ಕಾಡಿನ ಧ್ವಂಸ ಕೂಡದೆಂದು ಎಚ್ಚರಿಕೆಯ ಮಾತನಾಡಿದ್ದು, ಇತ್ತೀಚಿನ ಮುತ್ತೂರು-ಉಡುಪಿ ಘಟನೆಯನ್ನು ಖಂಡಿಸಿದ್ದು, ಇವೆಲ್ಲಾ ಭಾಜಪದ ಕಟ್ಟಾಳುಗಳಿಗೆ ಅರುಚಿಕರವಾಗಿ ಕಂಡುಬಂದರೆ ಅದರಲ್ಲಿ ವಿಸ್ಮಯವೇನೂ ಇಲ್ಲ. ಆದರೆ ಹಾಗೆ ಅವರ ಜೊತೆ ಕುಣಿಯದಿದ್ದವರನ್ನೆಲ್ಲಾ ನಕ್ಸಲೈಟರೆಂದು ಘೋಷಿಸಿ, ಅವರನ್ನು ಶೂಲಕ್ಕೇರಿಸಬೇಕೆಂದು ಅಬ್ಬರಿಸಿದರೆ ಅದು ಎಂತಹ ಸಂಸ್ಕೃತಿಯೆಂದು ಅಚ್ಚರಿ ಮೂಡುತ್ತದೆ. ಗೌರಿ, ಶ್ರೀಧರ್ ಮತ್ತು ಬಾಬಯ್ಯ ಭಾಜಪದ ಕೆಂಗಣ್ಣಿಗೆ ಬಿದ್ದಿರುವುದು ಬಾಬಾಬುಡನ್‌ಗಿರಿ ಸಂದರ್ಭದಲ್ಲಿ ಅವರು ಮಧ್ಯಪ್ರವೇಶ ಮಾಡಿದ್ದರಿಂದಲೇ ಇರಬೇಕೆಂಬ ಗುಮಾನಿ ಬರುತ್ತದೆ. ದೇಶದ ಸಾಮಾಜಿಕ-ಆರ್ಥಿಕ ಸಮಸ್ಯೆಗಳ ಬಗ್ಗೆ ನಕ್ಸಲೈಟರು ಮಾತ್ರವೇ ಕಾಳಜಿ ತೋರುತ್ತಾರೆಂಬ ಕಲ್ಪನೆಯು ಅನೂಹ್ಯ. ಆದರೆ ಭಾಜಪದ ವಕ್ತಾರರು ಎಲ್ಲೆಲ್ಲೂ ನಕ್ಸಲೈಟರನ್ನು ಕಾಣಹತ್ತಿದ್ದಾರೆಂದರೆ ಬೇರೆ ಗುಮಾನಿಗಳೂ ಬರುತ್ತವೆ. ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ಕಾಲೇಜುಗಳಲ್ಲಿ ಎಂತಹ ಬೌದ್ಧಿಕ ಚರ್ಚೆಯಾಗಬೇಕು, ವಾತಾವರಣ ಮೂಡಬೇಕು ಎಂಬುದನ್ನು ಇವರು ಹೊಸದಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಎಲ್ಲೆಡೆ ಭಾಜಪ ಹಾಗೂ ಅದರ ಪರಿವಾರದ ತತ್ತ್ವಗಳನ್ನು ಬಿತ್ತರಿಸುವುದಷ್ಟೇ ನಡೆಯಬೇಕೆಂಬ ನಿರೀಕ್ಷೆ ಇದ್ದರೆ ವಿಶ್ವವಿದ್ಯಾನಿಲಯಗಳನ್ನು ಮುಚ್ಚಿಹಾಕ ಬೇಕು, ಅಷ್ಟೆ. ಮುರಳಿ ಮನೋಹರ ಜೋಶಿಯವರಿಗಿಂತಲೂ ಹತ್ತು ಹೆಜ್ಜೆಯ ಹಿನ್ನಡೆ ಸಾಧಿಸಿ ಮಾನ್ಯ ಯಡಿಯೂರಪ್ಪನವರು ಏನು ಸಾಧಿಸಬೇಕೆಂದಿದ್ದಾರೋ ತಿಳಿಯದಾಗಿದೆ. ಬುದ್ಧಿ ಇರುವವರು ಯಾರೂ ಬಾಯಿ ಬಿಡಬಾರದೆಂಬ ಇವರ ಕಟ್ಟಾಜ್ಞೆ ಅತ್ಯಂತ ಹೇಯವಾದ್ದು, ಅಪಾಯಕಾರಿಯಾದದ್ದು. ನಕ್ಸಲೈಟರನ್ನು ಸಮರ್ಥಿಸದೆಯೂ ಅವರೆತ್ತುವ ಸಾಮಾಜಿಕ-ಆರ್ಥಿಕ-ರಾಜಕೀಯ ಪ್ರಶ್ನೆಗಳಿಗೆ ಎಲ್ಲರೂ ಪ್ರತಿಕ್ರಿಯಿಸುವ ಸಾಧ್ಯತೆ ಮತ್ತು ಅವಶ್ಯಕತೆ ಇದೆಯೆಂಬುದು ಸಾಮಾನ್ಯ ಗ್ರಹಿಕೆ. ಪ್ರತಿಯೊಬ್ಬರೂ ಪೊಲೀಸರ ಮುಂದೆ ಹಾಜರಾಗಿ ತಾವು ನಕ್ಸಲೈಟರಲ್ಲವೆಂದು ಸಾಧಿಸಿ ತೋರಿಸುವ ಪ್ರಸಂಗ ಬರಬೇಕೆಂಬ ನಿರೀಕ್ಷೆ ಅನಾಗರಿಕವಾದ್ದು, ಪ್ರಜಾಪ್ರಭುತ್ವಕ್ಕೆ ಮಸಿ ಬಳಿಯುವಂಥದು. ಶಾಸನ ಸಭೆಯಲ್ಲಿ ಕಾಂಗ್ರೆಸ್ ಮುಂದಾಳುಗಳು ಇದನ್ನು ಭಾಜಪದ ನಾಯಕರಿಗೆ ಮನದಟ್ಟು ಮಾಡಿಕೊಡದಿದ್ದುದು ಆ ಪಕ್ಷದ ಅಪಕ್ವ ಸೈದ್ಧಾಂತಿಕ ತಿಳಿವಳಿಕೆಗೆ ನಿದರ್ಶನವಾಗಿದೆ.

೧೯೫೦ರ ದಶಕದಲ್ಲಿ ಅಮೆರಿಕಾದಲ್ಲಿ ಮೆಕಾರ್ತಿ ಎಂಬೊಬ್ಬ ಘಾತುಕ ಸೆನೆಟರ್ ಇದ್ದ. ಅವನಿಗೆ ಕಮ್ಯುನಿಸ್ಟರನ್ನು ಸದೆಬಡಿಯುವ ಆಕಾಂಕ್ಷೆ ಇತ್ತು. ಸಾವಿರಾರು ಮಂದಿ 'ಬುದ್ಧಿಜೀವಿ'ಗಳನ್ನು ಅವನು ಕಮ್ಯುನಿಸ್ಟರೆಂದು ಹೆಸರಿಸಿ ಪೊಲೀಸರ ಕಾರ್ಯಾಚರಣೆಗೆ ಸ್ಫೂರ್ತಿ ತುಂಬುತ್ತಿದ್ದ. ಹವರ್ಡ್ ಫಾಸ್ಟ್‌ನ ಕಾದಂಬರಿ "ಸೈಲಾಸ್ ಟಿಂಬರ್ಮನ್" ಇದರ ಚಿತ್ರಣ ನೀಡಿದೆ. ಪೆನ್ಸಿಲ್ವೇನಿಯ ವಿಶ್ವವಿದ್ಯಾಲಯದಲ್ಲಿ ಬ್ಯಾರೋಸ್ ಡನ್‌ಹ್ಯಾಮ್ ಎಂಬ ತತ್ತ್ವಶಾಸ್ತ್ರ ಪ್ರಾಧ್ಯಾಪಕರನ್ನೂ ಲಲಿತ ಕಲಾ ಪ್ರಾಧ್ಯಾಪಕಿ ಆಲಿಸ್ ಎಂಬ ಆತನ ಪತ್ನಿಯನ್ನೂ ಹಿಂಸಿಸಿ ಅಧ್ಯಾಪಕ ವೃತ್ತಿಯಿಂದ ಹೊರದೂಡಲಾಗಿತ್ತು. ಆಲ್ಬರ್ಟ್ ಐನ್‌ಸ್ಟೈನ್ ಅವರು ಡನ್‌ಹ್ಯಾಮ್ ಪರವಾಗಿ ಅಚಲವಾಗಿ ನಿಂತರು. ಅರ್ಥಶಾಸ್ತ್ರ ಪ್ರಾಧ್ಯಾಪಕ ಪಾಲ್ ಸ್ವೀಜಿಯನ್ನೂ ದಂಡಿಸಲಾಗಿತ್ತು. ಈಗ ನಮ್ಮ ರಾಜ್ಯದಲ್ಲಿ ಮೆಕಾರ್ತಿ ಯುಗ ಆರಂಭವಾಗುತ್ತಿದೆಯೆ? ಇನ್ನು ಕೆಲ ಕಾಲಾನಂತರ ಕೋಮುವಾದವನ್ನು ವಿರೋಧಿಸುವವರನ್ನೆಲ್ಲಾ ನಕ್ಸಲೈಟರೆಂದು ಪರಿಗಣಿಸುತ್ತಾರೇನು?

*೫ನೇ ಪುಟಕ್ಕೆ...*



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ-೯ ಏಪ್ರಿಲ್ ೨೦೦೫

*ಸಂಪಾದಕ*

ಜಿ. ರಾಮಕೃಷ್ಣ

*ಸಹಸಂಪಾದಕರು*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

*ವ್ಯವಸ್ಥಾಪಕ*

ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೩೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**



# 2005-06ರ ಕೇಂದ್ರ ಬಜೆಟ್ - ವಾಸ್ತವವನ್ನು ಮರೆಮಾಚುವ ವ್ಯರ್ಥ ಪ್ರಯತ್ನ

**ಬ**ಜೆಟ್ 'ಆದಾಯ-ವೆಚ್ಚದ ಅಂದಾಜು ಲೆಕ್ಕಪತ್ರ'ವಷ್ಟೆ, ಅದು ಸರ್ಕಾರದ ನೀತಿನಿರೂಪಣೆಯ ಮಂಡನೆ ಅಲ್ಲ ಎಂದು ಚಿದಂಬರಂ ಅಪ್ಪಣೆ ಕೊಡಿಸಿದ್ದಾರೆ. ಅದು ನೀತಿ ನಿರೂಪಣೆಯ ಸಂದರ್ಭ ಎಂಬ ಅಭಿಪ್ರಾಯ ಅವರಮಟ್ಟಿಗೆ ಯೋಜಿತ ಅರ್ಥವ್ಯವಸ್ಥೆಯ ಹಾಗೂ ಸಾರ್ವಜನಿಕ ಹಣಕಾಸು ಎಂಬ ಅರ್ಥಶಾಸ್ತ್ರ ಪರಿಕಲ್ಪನೆಯ ಪಳೆಯುಳಿಕೆ. ಸಾಧ್ಯವಾದರೆ ಅವರು ಬಜೆಟನ್ನು ಆದಾಯ-ವೆಚ್ಚದ, ಮುಂಗಡದ ಪರಿಪತ್ರವಾಗಿಸಿಬಿಡಲು ನಿರ್ಧರಿಸಿದ್ದಾರೆ. ಚಿದಂಬರಂ ಅವರ ಅರ್ಥಶಾಸ್ತ್ರದಲ್ಲಿ ಅಭಿವೃದ್ಧಿಯ ಎಲ್ಲ ಆಯಾಮಗಳೂ ಮಾರುಕಟ್ಟೆಯಲ್ಲಿ ಖಾಸಗಿ ಕ್ಷೇತ್ರದಲ್ಲಿ ಸಮರ್ಥವಾಗಿ ತಂತಾನೆ ನಿರ್ವಹಿಸಿಕೊಳ್ಳಬೇಕಾಗಿದ್ದು, ಸರ್ಕಾರಿ ಬಜೆಟ್‌ನಲ್ಲಿ ಈ ಕುರಿತ ಚರ್ಚೆ ಅನವಶ್ಯಕ. ಸಾಮಾಜಿಕ ಹೊಣೆಗಾರಿಕೆಗಳ ವಿಷಯವನ್ನು ಪರಿಗಣಿಸಬೇಡವೇ ಎಂದರೆ ಸರ್ಕಾರದ ಆದಾಯ-ವೆಚ್ಚದ ಚೌಕಟ್ಟಿನಲ್ಲಿ ಇವುಗಳನ್ನು ರಾಜಕೀಯ ಒತ್ತಾಯದ ಮೇರೆಗೆ ಆದಷ್ಟು ಗಮನಿಸಲಾಗುವುದು. 'ಆದಷ್ಟು' ಏಕೆಂದರೆ ಸರ್ಕಾರದ ಆದಾಯ ಮಿತಿಯುಳ್ಳದ್ದು ಹಾಗೂ ಅದಕ್ಕೆ ಪೊಲೀಸ್-ಮಿಲಿಟರಿ ಮುಂತಾದ ಕ್ಷೇತ್ರಗಳು ಪ್ರಥಮ ಆದ್ಯತೆಯವು. ಅವರ ಪರಿಕಲ್ಪನೆಯಲ್ಲಿ ಖಾಸಗಿ ಕ್ಷೇತ್ರ ಸಂಪೂರ್ಣ ಮುಕ್ತ ವಾತಾವರಣದಲ್ಲಿ ಅಪರಿಮಿತವಾಗಿ ವಿಸ್ತರಿಸುತ್ತಾ , ಅಲ್ಪಪ್ರಮಾಣದ ತೆರಿಗೆಯಲ್ಲಿ ಸರ್ಕಾರಕ್ಕೆ ಹೆಚ್ಚು ಆದಾಯವನ್ನು ತರುತ್ತಾ ಹೋಗುತ್ತದೆ ಹಾಗೂ ಆರೋಗ್ಯ, ಶಿಕ್ಷಣ, ಉದ್ಯೋಗ, ಮುಂತಾದ ಕ್ಷೇತ್ರದ ಸಮಸ್ಯೆಯನ್ನು ಮಾರುಕಟ್ಟೆಯ ನಿಯಮಾನುಸಾರ ಸಮರ್ಥವಾಗಿ ನಿರ್ವಹಿಸಿಬಿಡುತ್ತದೆ. ಸರ್ಕಾರಕ್ಕೆ ವಾಸ್ತವದಲ್ಲಿ ಏನೂ ಕೆಲಸವಿರುವುದಿಲ್ಲ! ಕಳೆದ ಎರಡು ಬಜೆಟ್‌ಗಳಲ್ಲಿ ಇವರ ಈ ನೀತಿ ಬೆಳೆಯುತ್ತಿದೆ. ಯಾರು ಒಪ್ಪಲಿ ಒಪ್ಪದಿರಲಿ, ಷೇರುಪೇಟೆ ಮಾತ್ರ ಅತ್ಯಂತ ಹೆಚ್ಚಿನ ಸೂಚ್ಯಂಕ ತಲುಪಿ ಅವರಿಗೆ 'ಜಯ' 'ಜಯ' ಎಂದಿದೆ !

ರಾಷ್ಟ್ರೀಯ ಕನಿಷ್ಠ ಕಾರ್ಯಕ್ರಮದಲ್ಲಿ ಅಡಕವಾಗಿರುವ ಕೆಲವು ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಗಮನಿಸುವುದು ಒಂದು ರಾಜಕೀಯ ಅಗತ್ಯವೇ ವಿನಾ, ಆ ಕಾರ್ಯಕ್ರಮಗಳು ಆರ್ಥಿಕವಾಗಿಯೂ ಸಮರ್ಥನೀಯವೆಂದು ಅವರಿಗೆ ತೋರುವುದಿಲ್ಲ. ಸಾಧ್ಯವಿದ್ದರೆ ಆದಷ್ಟು ಬೇಗೆ ಈ ಕುರಿತು ಎಡಪಕ್ಷಗಳ ಒತ್ತಡದಿಂದ ಬಿಡಿಸಿಕೊಳ್ಳಲು ಅವರು ಪ್ರಯತ್ನಪಟ್ಟಾರು. ಉದಾರೀಕರಣ, ಖಾಸಗೀಕರಣ, ಜಾಗತೀಕರಣ, ತತ್ಸಂಬಂಧಿತ ಸುಧಾರಣೆಗಳ ವೇಗದ ಬೇಗೆಗೆ ತತ್ತರಿಸಿ ಕೆಳಗೆ ಬೀಳುವ ಸಮಾಜದಂಚಿನ ಪ್ರಜಾವರ್ಗಕ್ಕೆ ಸಾಮಾಜಿಕ ರಕ್ಷಣೆಯನ್ನು ನೀಡುವ ಬಗೆಯೊಂದನ್ನು ಸರ್ಕಾರ ರಚಿಸಬೇಕೆಂದು ರಾಷ್ಟ್ರೀಯ ಕನಿಷ್ಠ ಕಾರ್ಯಕ್ರಮದಲ್ಲಿ ಅಡಕವಾಗಿರುವ ಗ್ರಾಮೀಣ ಮತ್ತು ಸಾಮಾಜಿಕ ಒತ್ತುಗಳು ಇವೆ. ಅವು ಬೆಳವಣಿಗೆಗೆ ಸಹಕಾರಿಯಾದರೂ ಅವಕ್ಕೆ ಕೇವಲ ನಾಮ ಮಾತ್ರ ಗೌರವ ನೀಡುವ ಚಿದಂಬರಂರವರದು ಭಟ್ಟಿಯಿಳಿಸಿದ ಬಂಡವಾಳಶಾಹಿ ಮನೋಧರ್ಮ. ಅವರ ೨೦೦೫-೦೬ರ ಕೇಂದ್ರ ಬಜೆಟ್ ಇದನ್ನು ಸ್ಪಷ್ಟಪಡಿಸುತ್ತದೆ. ಅರ್ಥಶಾಸ್ತ್ರದ ಗಹನ ವಿಷಯಗಳು ಶಾಸನಸಭೆಯ ಸದಸ್ಯರಿಗೇನು ತಿಳಿಯುತ್ತದೆ, ''ಕತ್ತೆ ಬಲ್ಲದೆ ಭತ್ತದ ಗುಣವ !'' ಎಂಬ ''ಪಂಡಿತಂಮನ್ಯ'' ಸ್ವರೂಪದ್ದು ಅವರ ಧೋರಣೆ. ಎನ್‌ಡಿಎ ಸರ್ಕಾರ ಹೋದರೂ ಅವರ ಆರ್ಥಿಕ ಧೋರಣೆ ಬದಲಾಗದಂತೆ ಚಿದಂಬರಂ ಕಾವಲಿದ್ದಾರೆ ಎಂದು ಎರಡನೆ ಬಾರಿ ಪ್ರಕಟವಾಗಿದೆ.

ಬಜೆಟ್ ಲೋಕಸಭೆಯಲ್ಲಿ ಮಂಡಿಸುತ್ತಿದ್ದಂತೆಯೇ ಷೇರುಪೇಟೆ ಕಳೆದ ವರ್ಷದಲ್ಲಿ ಆದಂತೆ ಆಗದೆ ಚಾರಿತ್ರಿಕ ಹಂತಕ್ಕೆ ಏರಿದ್ದು ಬಜೆಟ್ ಬಗೆಗಿನ ಒಂದು ವಿಮರ್ಶೆಯಾಗುತ್ತದೆ. ಮೊದಲ ನೋಟಕ್ಕೆ, ಎಡಪಂಥೀಯರೂ ಸೇರಿದಂತೆ, 'ಎಲ್ಲರಿಗೂ ಮೆಚ್ಚುಗೆಯಾಗುವಂತೆ ಇರುವುದಲ್ಲ' ಎಂದು ನೇರವಾಗಿ ಟೀಕೆ ಮಾಡಲಾರದೆ ಎಲ್ಲರೂ ಪೇಚಿಗೆ ಒಳಗಾಗಿದ್ದರು. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಅಡಕವಾಗಿರುವ ಗ್ರಾಮೀಣ ಮತ್ತು ಕೃಷಿ ಕ್ಷೇತ್ರಕ್ಕೆ ಹಾಗೂ ಉದ್ಯೋಗ ಭರವಸೆಗೆ ಎಲ್ಲ ರೀತಿಯ ಒತ್ತು ಸಿಕ್ಕಿಬಿಟ್ಟಿರುವಂತೆ ಕಂಡಿತು. ಶಿಕ್ಷಣ ಮತ್ತು ಆರೋಗ್ಯವೂ ಸೇರಿದಂತೆ ಈ ಕ್ಷೇತ್ರಕ್ಕೆ ಕನಿಷ್ಠ ೪೦-೫೦ ಸಾವಿರ ಕೋಟಿ ರೂಪಾಯಿಗಳನ್ನು ನಿಗದಿಪಡಿಸಬೇಕೆಂದು ಕೇಳಿದ್ದವರಿಗೆ ಈ ಬಜೆಟ್‌ನಲ್ಲಿ ಸುಮಾರು ೨೫,೦೦೦ ಕೋಟಿ ರೂಗಳನ್ನು ನೀಡಿರುವಂತೆ ಭಾಸವಾಗಿತ್ತು. ಆದಾಯ ತೆರಿಗೆಯಲ್ಲಿ ಕೆಳಸ್ತರದ ವೃದ್ಧರು - ಮಹಿಳೆಯರಿಗೆ, ಒಂದಿಷ್ಟು ಪರಿಹಾರ ನಿರೀಕ್ಷಿಸಿದ್ದವರಿಗೆ, ಅತಿ ಶ್ರೀಮಂತರನ್ನೂ ಸೇರಿಸಿ ಸಾಕಷ್ಟು ರಿಯಾಯ್ತಿ ನೀಡಿರುವಂತೆ ಕಂಡು ಆಶ್ಚರ್ಯವಾಯಿತು. ಅಂಥ ಭಯಪಡಿಸುವ ಹೆಚ್ಚಿನ ಹೊಸ ತೆರಿಗೆಗಳೂ ಇಲ್ಲದೆ, ಹೊಸ ತೆರಿಗೆಗಳಿಂದ ಸುಮಾರು ೬,೦೦೦ ಕೋಟಿ ರೂಗಳ ಸಂಗ್ರಹದ ಇಂಗಿತವಿದೆ. ತೆರಿಗೆಯ ಅಂದಾಜಿನಲ್ಲಿ ಶೇ ೩೦ಕ್ಕೂ ಹೆಚ್ಚಿದ ಹೆಚ್ಚಳದ ಊಹೆ ಒಂದು ಕಡೆ; ಆದಾಯ-ವೆಚ್ಚ ಸರಿದೂಗಿಸಲು ಉಪಯೋಗಿಸುವ ಹಣದ ಕೊರತೆಯ ಗಮನಾರ್ಹ ಇಳುವರಿ ಇನ್ನೊಂದು ಕಡೆ. ಯೋಜನಾ ವೆಚ್ಚದಲ್ಲಿ ಸಾಕಷ್ಟು ಹೆಚ್ಚಳ ! ಇವೆಲ್ಲಾ ಒಂದಕ್ಕೊಂದು ಹೊಂದದ ಸಾಧನೆಗಳು. ಆದರೂ ಎಲ್ಲರಿಗೂ ಎಲ್ಲವನ್ನೂ ನೀಡಿದಂತೆ ಕಂಡ ಈ ಬಜೆಟ್, ಅರ್ಥಶಾಸ್ತ್ರಜ್ಞರ ತೀವ್ರ ತಪಾಸಣೆಗೆ ಒಳಗಾಗಿ, ಆಗಲೇ ಅದರ ಬಗ್ಗೆ ಭ್ರಮನಿರಸನವಾಗಿ, ಇದು ವಾಸ್ತವವನ್ನು ಮರೆಮಾಚುವ ಕಿಲಾಡಿತನದ ಬಜೆಟ್ ಎಂದು ಮಾಧ್ಯಮಗಳಲ್ಲಿ ತೀರ್ಮಾನವಾಗಿಬಿಟ್ಟಿದೆ. ಇದರ ಬಗ್ಗೆ ಇನ್ನೂ ಸಂತೋಷ ವ್ಯಕ್ತಪಡಿಸುತ್ತಿರುವವರು ಕೇವಲ ವಾಣಿಜ್ಯಲೋಕದವರು.

ಆದಾಯ ತೆರಿಗೆ ಇಲ್ಲವಾಗಲು ೨ ಲಕ್ಷರೂಪಾಯಿಗಳ ಆದಾಯವಿರುವವರು ಒಂದು ಲಕ್ಷವನ್ನು ಉಳಿತಾಯ ಮಾಡುವುದು ಹೇಗೆ ಸಾಧ್ಯ ? ವೃದ್ಧರು ಬಹುಕಾಲೀನ ಉಳಿತಾಯವನ್ನು ಹೇಗೆ ಮಾಡಿಯಾರು ? ಉಳಿತಾಯದ ಅವಧಿಯ ಅಂತ್ಯದಲ್ಲಿ ಆ ಹಣ ಮತ್ತೆ ಆದಾಯ ತೆರಿಗೆಗೆ ಒಳಗಾಗುವುದಾದರೆ ಅದೆಂಥ ವಿನಾಯಿತಿ ? ಶ್ರೀಮಂತ ವರ್ಗಕ್ಕೆ ಈ ತೆರಿಗೆಯ ವಿನಾಯ್ತಿಯ ಅಗತ್ಯವೇನು ? ಉದ್ದಿಮೆಗಳ ಲಾಭದ ಮೇಲಿನ ತೆರಿಗೆಯಲ್ಲಿ ಕಡಿತವೇಕೆ ? ಸತತ ಬೆಳೆಯುತ್ತಿರುವ ಅಪಾರ ಲಾಭ ಗಳಿಸುತ್ತಿರುವ ಅವರಿಗೆ ಇದರಿಂದ ಏನು ಪ್ರಯೋಜನ ? ಈ ಆದಾಯಗಳು ಸರ್ಕಾರಕ್ಕೆ ಬೇಕಿರಲಿಲ್ಲವೆ ? ಉದ್ಯೋಗ ಭರವಸೆಯ ಕ್ಷೇತ್ರಕ್ಕೆ ೪೦,೦೦೦ ಕೋಟಿ ರೂಗಳನ್ನು ಬೇಡಲಾಗಿತ್ತು. ಅದನ್ನು ಕೇವಲ ಗ್ರಾಮೀಣವಲ್ಲದೆ,

ನಗರ ಪ್ರದೇಶದ ಬಡವರಿಗೂ ವಿಸ್ತರಿಸಬೇಕೆಂಬ ಒತ್ತಾಯವಿತ್ತು. ಈ ಕ್ಷೇತ್ರಕ್ಕೆ ನಿಗದಿ ಮಾಡಿರುವ ೧೧ ಸಾವಿರ ಕೋಟಿ ರೂಪಾಯಿಗಳು ವಾಸ್ತವದಲ್ಲಿ ಈಗಾಗಲೇ ಜವಹರ್ ರೋಜಗಾರ್, ಪ್ರಧಾನಮಂತ್ರಿ ರೋಜ್‌ಗಾರ್, ಕೂಲಿಗಾಗಿ ಕಾಳು – ಹೀಗೆಲ್ಲಾ ಕರೆಸಿಕೊಳ್ಳುತ್ತಿದ್ದ ಯೋಜನೆಗಳನ್ನು ಒಟ್ಟಾರೆ ಸೇರಿಸಿದ್ದು ಹಾಗೂ ಇದಕ್ಕಾಗಿ ನೀಡುವ ೫೦ ಲಕ್ಷ ಟನ್ ದವಸದ ಬೆಲೆಯನ್ನೂ ರೂಪಾಯಿ ಮೌಲ್ಯದ ನಿಗದಿಯಂತೆ ತೋರಿಸಿ, ಹೆಚ್ಚುವರಿ ಹಣ ನೀಡಿದಂತೆ ತೋರಿಸಲಾಗಿದೆ. ಯೋಜನಾ ವೆಚ್ಚವನ್ನು ಹಾಗೂ ಬಂಡವಾಳ ಜಮೆ ಖಾತೆಯ ವೆಚ್ಚವನ್ನು ೨೫,೦೦೦ ಕೋಟಿಯಷ್ಟು ಕಡಿತ ಮಾಡಿರುವುದು ಕಂಡುಬರುತ್ತದೆ. ಆದಾಯದ ನಿರೀಕ್ಷೆಯಲ್ಲಿ ಅವಾಸ್ತವವೆನಿಸುವಷ್ಟು ಹೆಚ್ಚಳ ತೋರಿಸಿದ್ದು, ವರ್ಷದ ಮಧ್ಯದಲ್ಲೇ ಮತ್ತೊಮ್ಮೆ ಹೊಸ ತೆರಿಗೆಗಳನ್ನು ವಿಧಿಸುವಂತಾಗಬಹುದು ಅಥವಾ ಅದಕ್ಕಿಂತ ಸುಲಭದ ದಾರಿಯೆಂದು ಸಮಾಜ ಕಲ್ಯಾಣದ ಕ್ಷೇತ್ರದ ವೆಚ್ಚದಲ್ಲಿ ಕಡಿತ ಮಾಡಿಬಿಡಬಹುದು. ಏತನ್ಮಧ್ಯೆ ಹನ್ನೆರಡನೇ ಹಣಕಾಸು ಆಯೋಗದ ಆದೇಶದ ಮೇರೆಗೆ ರಾಜ್ಯಗಳಿಗೆ ಹಿಂದಿಗಿಂತ ಹೆಚ್ಚು ಹಣ ನೀಡಬೇಕಾಗುವುದು. ಮೌಲ್ಯಾಧಾರಿತ ತೆರಿಗೆಯನ್ನು ಜಾರಿಗೊಳಿಸುವ ರಾಜ್ಯಸರ್ಕಾರಗಳಿಗೆ ನೂರಕ್ಕೆ ನೂರು ಪ್ರಥಮ ವರ್ಷದ ನಷ್ಟವನ್ನು ಕಟ್ಟಿಕೊಡಬೇಕಾಗುವುದು. ಇದಕ್ಕೆಲ್ಲಾ ಎಲ್ಲಿದೆ ಹಣ ? 'ಭಾರತ್ ನಿರ್ಮಾಣ' ಹೆಸರಿನ ಮೂಲಭೂತ ಸೌಕರ್ಯಗಳ ಸೃಷ್ಟಿಗೆ ಅಪಾರ ಹಣ ಬೇಕು. ಆದರೆ ಅದರ ಖಾತೆಗೆ ಬಜೆಟ್‌ನಲ್ಲಿ ಒಂದು ರೂಪಾಯಿಯನ್ನೂ ನೀಡಿಲ್ಲ. ಎನ್‌ಡಿಎ ಸರ್ಕಾರದವರೂ ಹೀಗೆಯೇ ಕನಸಿನ ಯೋಜನೆಗಳನ್ನು ಜನತೆಯ ಮುಂದೆ ಇಟ್ಟು ಮೋಸಗೊಳಿಸಿದ್ದರು. ಯಾವುದೇ ನೀತಿನಿರೂಪಣೆಯ ವಿಷಯಗಳನ್ನು ಬಜೆಟ್‌ನಿಂದ ಹೊರತು ಪಡಿಸುವುದರ ಹಿಂದಿನ ಸಂಚು ಇದರಲ್ಲಿ ಅಡಗಿದೆ. ಬಂಡವಾಳ ಹಿಂತೆಗೆದುಕೊಳ್ಳುವ, ಸಾರ್ವಜನಿಕ ಕ್ಷೇತ್ರವನ್ನು ಮಾರುವ ನೀತಿಯನ್ನು ಬಜೆಟ್‌ನಲ್ಲಿ ಪ್ರಸ್ತಾಪಿಸದೆ ಪ್ರತ್ಯೇಕವಾಗಿ ತೆಗೆದುಕೊಂಡರೆ ಆಗ ಎಡಪಕ್ಷಗಳ ವಿರೋಧವನ್ನು ನಿಭಾಯಿಸಬಹುದು ಎಂಬ ಲೆಕ್ಕವಿದ್ದಂತೆ ತೋರುತ್ತದೆ. ಕೃಷಿಕ್ಷೇತ್ರ ಮೂರು ವರ್ಷದ ಬರಗಾಲದಿಂದ, ಹಲವಾರು ವರ್ಷಗಳಲ್ಲಿ ಹೂಡಿಕೆಯ ಕೊರತೆಯಿಂದ ಸೊರಗಿದ್ದು ಎಲ್ಲ ರೀತಿಯ ನೆರವು ಬೇಡುತ್ತಿರುವಾಗ, ಕೃಷಿ ಸಂಬಂಧಿತ ಅನೇಕ ಆಮದು ಸುಂಕಗಳನ್ನು ಕಡಿಮೆ ಮಾಡಲಾಗಿದೆ ! ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ಯಮಗಳನ್ನು ಉದ್ಯೋಗ ಸೃಷ್ಟಿಯ ದೃಷ್ಟಿಯಿಂದಲಾದರೂ ಊರ್ಜಿತಗೊಳಿಸಬೇಕೆಂದು ಹೇಳುತ್ತಲೇ, ಆ ಕ್ಷೇತ್ರಕ್ಕೆ ಮೀಸಲಾಗಿದ್ದ ನೂರಾರು ಸರಕುಗಳನ್ನು ಮುಕ್ತವಾಗಿಸಲಾಗಿದೆ. ಇಂತಹ ಹಲವಾರು ವಿರೋದಾಭಾಸಗಳು ಈ ಬಜೆಟ್ಟಿನ ತುಂಬ ತುಂಬಿವೆ.

ಇದೇಕೆ ಹೀಗೆ ನಿಗದಿತ ಕಾರ್ಯಕ್ರಮಗಳಿಗೆ ತಗಲುವಷ್ಟು ಹಣ ನೀಡದೆ ಅನೇಕ ಬಿರುಕುಗಳನ್ನು ಬಜೆಟ್‌ನಲ್ಲಿ ಉಳಿಸಿಕೊಂಡಿದ್ದಾರೆ ? ಇದಕ್ಕೆ ಒಂದೆರಡು ಕಾರಣಗಳನ್ನು ಊಹಿಸಬಹುದು. ಒಂದು, ಉದಾರನೀತಿಯ ವಿಶ್ವ ಹಣಕಾಸು ಸಂಸ್ಥೆ ಬಯಸುವ ಕೊರತೆಯಿಲ್ಲದ ಬಜೆಟ್ಟನ್ನು ತಯಾರಿಸುವ ಬಯಕೆ. ಮತ್ತೊಂದು, ಹಣಕಾಸು ಜವಾಬ್ದಾರಿ ಕಾನೂನನ್ನು ಬದ್ಧತೆಯಿಂದ ಅನುಸರಿಸುವ ಬಯಕೆ. ಇವೆರಡೂ ಒಂದೇ ವಿಷಯ : ಎಷ್ಟು ಆದಾಯವಿದೆಯೋ ಅಷ್ಟೇ ವೆಚ್ಚ ಮಾಡಬೇಕು ಎಂಬ ನಿಯಮ. ಈ ನಿಯಮವನ್ನು ಪಾಲಿಸುವುದಕ್ಕೆಂದು ಕೊರತೆ ಉಂಟುಮಾಡುವ ಎಲ್ಲ ವಹಿವಾಟುಗಳನ್ನೂ ರಾಜ್ಯದ ಲೆಕ್ಕಗಳು, ಸರ್ಕಾರೇತರ ಲೆಕ್ಕಗಳಿಗೆ ತಳ್ಳಿಬಿಡುವುದು ! ರಾಜ್ಯದ ಪರವಾಗಿ ಕೇಂದ್ರ ಸಾಲ ತೆಗೆಯುವುದು ನಿಲ್ಲುವುದು ಸರಿಯೇ. ಆದರೆ ಪರಿಣಾಮ? ಕೊರತೆ ವಿಪರೀತವಾಗಿ ರಾಜ್ಯಗಳ ಬಜೆಟ್‌ನಲ್ಲಿ ತಲೆಹಾಕುವುದು. ಅವುಗಳನ್ನು ಬಜೆಟ್‌ನಲ್ಲಿ ತೋರಿಸದೆ ಅದೇ ಸಮಯ ಅತಿಹೆಚ್ಚಿನ ವರಮಾನವನ್ನು ನಿರೀಕ್ಷಿಸಿಬಿಡುವುದು! ಈ ಜಾಣ್ಮೆ ಸದ್ಯಕ್ಕೆ ಮೊದಲ ದಿನ ಎಲ್ಲರಿಂದ ಚಪ್ಪಾಳೆ ಪಡೆಯಲು ಸಹಾಯವಾಯ್ತು ಅಷ್ಟೆ. ವರ್ಷದ ಕೊನೆಯಲ್ಲಿ ಇದು ತೀವ್ರ ಕೊರತೆಯಾಗಿ ತನ್ನದೇ ಉದ್ದೇಶದಲ್ಲೂ ವಿಫಲವಾಗುವುದು ಅನಿವಾರ್ಯವೆನಿಸುತ್ತದೆ. ಬಂಡವಾಳಶಾಹಿ ಮಾರ್ಗವನ್ನು ಅನುಸರಿಸುತ್ತಿರುವ ಸರ್ಕಾರದ ಬಜೆಟ್ಟನ್ನು ಸಮಾಜವಾದದ ದೃಷ್ಟಿಯಿಂದ ವಿಮರ್ಶಿಸುವುದರಿಂದ ಏನೂ ಪ್ರಯೋಜನವಿಲ್ಲ. ಆದರೆ ಈ ಬಜೆಟ್ ಆ ಮಾರ್ಗದ ಪ್ರತಿಪಾದಕರಿಗೇ ಸಮಾಧಾನ ನೀಡಿಲ್ಲ. ಕೇವಲ ಷೇರುಪೇಟೆಯ ದಳ್ಳಾಳಿಗಳಿಗೆ ತಕ್ಷಣಕ್ಕೆ ಒಂದಿಷ್ಟು ಲಾಭ ತಂದುಕೊಟ್ಟಿದೆಯಷ್ಟೆ. ಷೇರುಪೇಟೆಯೂ ಕೆಲವೇ ತಿಂಗಳಲ್ಲಿ ಅಪಾರ ಕುಸಿತಕ್ಕೊಳಗಾದರೆ ಆಶ್ಚರ್ಯವಿಲ್ಲ. ಪ್ರಜಾಪ್ರಭುತ್ವಾತ್ಮಕ ವ್ಯವಸ್ಥೆಯಲ್ಲಿ ಬಂಡವಾಳಶಾಹಿ ಮಾರ್ಗದಲ್ಲೂ ಸಮಾಜ ಕಲ್ಯಾಣದ ಉದ್ದೇಶವು ಆರ್ಥಿಕ ಅಭಿವೃದ್ಧಿಯ ಒಂದು ಅವಿಭಾಜ್ಯ ಅಂಗ ಎಂದು ಪರಿಗಣಿಸಲಾಗಿದೆ. ಚಿದಂಬರಂರವರಿಂದ ಅದನ್ನು ನಿರೀಕ್ಷಿಸುವಂತಿಲ್ಲ.

---

*೩ನೇ ಪುಟದಿಂದ... ಈ ತಿಂಗಳು*

ನಮ್ಮ ರಾಜ್ಯ ಸರ್ಕಾರ ಮಹಾ ಶಂಭುಲಿಂಗನಂತೆ ಅನಾಸಕ್ತಿ ತೋರಿಸುತ್ತಾ ಕುಳಿತಿರುವುದು ವಾತಾವರಣವು ಇನ್ನೂ ಹದಗೆಡಲು ಕಾರಣವಾಗುತ್ತದೆ. ಗುಜರಾತ್ ಬಿಡಿ, ಭುವನೇಶ್ವರದಲ್ಲಿ ಶಾಸನಸಭೆಗೆ ನುಗ್ಗಿ ಭಾಜಪದ ಪರಿವಾರದವರು ದಾಂಧಲೆ ನಡೆಸಿದ್ದರು. ಯಾರು ನಡೆಸಿದ್ದೆಂದು ತಿಳಿದೂ ಸರ್ಕಾರ ನಿದ್ದೆಹೋಯಿತು. ನಮ್ಮ ರಾಜ್ಯದಲ್ಲೂ ಅದೇ ನಡೆದಿದೆ. ಆ ಎವಾಂಜಲಿಸ್ಟ್ ಬಂದಾಗ ಸಾರ್ವಜನಿಕ ಆಸ್ತಿಗೆ ಹಾನಿ ಮಾಡಿದ್ದು ಯಾರೆಂದು ಶ್ರೀ ಧರಂಸಿಂಗ್ ಅವರಿಗೆ ತಿಳಿಯದೆ ? ಬೆಂಗಳೂರಿನ ವಿಜಯ ಕಾಲೇಜಿನಲ್ಲಿ ಶ್ರೀ ಶ್ರೀಧರ್ ಅವರ ಮೇಲೆ ಹಲ್ಲೆ ನಡೆಸಿದ್ದು ಯಾರೆಂದು ಅವರಿಗೆ ಗೊತ್ತಿಲ್ಲವೇ ? ಇಂತಹ ನೂರು ಘಟನೆಗಳನ್ನು ಹೆಸರಿಸಬಹುದು. ಆಗೆಲ್ಲಾ ಹಲ್ಲೆ ಮಾಡಿದವರ ಮೇಲೆ ಏನೂ ಕ್ರಮ ಕೈಗೊಳ್ಳಲಿಲ್ಲ. "ಹೀಗೇ ಮಾಡುತ್ತಿರಿ, ಚಿಂತೆಯಿಲ್ಲ" ಎಂದು ಸರ್ಕಾರ ಅವರಿಗೆ ಹೇಳಿರುವಂತಿದೆ. ಆದ್ದರಿಂದಲೇ ಈಗ ಭಾಜಪ ಬುದ್ಧಿಜೀವಿಗಳ ಜೀವ ಹಿಂಡಲು ಹಾತೊರೆಯುತ್ತಿದೆ. ಹಾಗೆಂದು ಹೇಳುವುದು ನಕ್ಸಲೀಯರ ಸಮರ್ಥನೆಯಲ್ಲ; ಆದರೆ ಬುದ್ಧಿಜೀವಿಗಳು ಅವರನ್ನು ಸಮರ್ಥಿಸಿದರೆ ಅವರನ್ನೆಲ್ಲಾ ಬೇಗ ಬಗ್ಗು ಬಡಿಯಬಹುದಲ್ಲಾ ಎಂಬ ಹುನ್ನಾರ ಭಾಜಪದ ನಾಯಕತ್ವದ್ದು ಎನಿಸುತ್ತದೆ. ಮಾನ್ಯ ಧರಂಸಿಂಗ್ ಅವರು ಮುಖ್ಯಮಂತ್ರಿಗಳಾಗಿರುವುದು ಫ್ಯಾಸಿಸ್ಟ್ ಪ್ರವೃತ್ತಿಯನ್ನು ಬೆಳೆಸುವುದಕ್ಕಾಗಿ ಅಲ್ಲವೆಂಬುದನ್ನು ಕ್ರಿಯೆಯಲ್ಲಿ ಮಾಡಿ ತೋರಿಸಬೇಕೆಂಬ ಅಪೇಕ್ಷೆ ಸಾಧಾರವಾಗಿದೆ.

* * * *೭ನೇ ಪುಟಕ್ಕೆ...*

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಡಾ|| ಎಚ್ಚೆನ್**

**ಡಾ||** ಎಚ್ಚೆನ್‌ರವರ ನೆನಪಿನ ಮಾರ್ಚ್ 'ಹೊಸತು' ಸಂಚಿಕೆ ಬಹಳ ಚೆನ್ನಾಗಿ ಹೊರಬಂದಿದೆ. ಅವರಿಗೆ ನಿಕಟವಾಗಿದ್ದ ಅನೇಕ ಘನ ವಿದ್ವಾಂಸರು ಬರೆದಿರುವ ಲೇಖನಗಳೂ ಒಳರಕ್ಷಾಪುಟದ ಚಿತ್ರಗಳೂ ಡಾ|| ಎಚ್ಚೆನ್‌ರವರ ವಿಶಿಷ್ಟ ವ್ಯಕ್ತಿತ್ವದ ವಿವಿಧ ಸ್ವರೂಪಗಳನ್ನು ಮನೋಜ್ಞವಾಗಿ ಬಿಂಬಿಸಿವೆ.

ಡಾ|| ಎಚ್ಚೆನ್‌ರವರು 'ನವಕರ್ನಾಟಕ ಪ್ರಕಾಶನ'ದ ಬಗೆಗೆ ಅಪಾರ ಅಭಿಮಾನ ಇರಿಸಿಕೊಂಡಿದ್ದರು. ನಾನು ದಿ. ಪ್ರೊ. ಎಂ. ಎ. ಸೇತುರಾವ್‌ರೊಂದಿಗೊಡಗೂಡಿ ನವಕರ್ನಾಟಕದ 'ಜ್ಞಾನ-ವಿಜ್ಞಾನ ಕೋಶ'ದ ಸಂಪಾದನಾ ಕಾರ್ಯದಲ್ಲಿ ತೊಡಗಿದ್ದಾಗ ಡಾ|| ಎಚ್ಚೆನ್‌ರವರನ್ನು ಅನೇಕ ಬಾರಿ ಸಂಧಿಸಿದ್ದೆ. ಅವರು ನಮ್ಮ ಈ ಕಾರ್ಯದಲ್ಲಿ ವಿಶೇಷ ಆಸಕ್ತಿ ತೋರಿದ್ದರು. ಕನ್ನಡ ಗ್ರಂಥ ಪ್ರಕಾಶನ ಕ್ಷೇತ್ರದಲ್ಲೇ ಅನನ್ಯವೆನಿಸಿಕೊಂಡ ಈ ನಾಲ್ಕು ಸಂಪುಟಗಳ ಬೃಹತ್ ವಿಶ್ವಕೋಶ ಪ್ರಕಟವಾದಾಗ ಡಾ|| ಎಚ್ಚೆನ್ ಬಹುವಾಗಿ ಸಂತೋಷಪಟ್ಟರು. ''ಇದನ್ನು ನೀವು ಇಂಗ್ಲಿಷಿನಲ್ಲೂ ಪ್ರಕಟಿಸಬೇಕಪ್ಪ, ಇದರಲ್ಲಿ ಭಾರತದ, ವಿಶೇಷವಾಗಿ ಕರ್ನಾಟಕದ, ಬಗೆಗೆ ಇರುವ ಹಾಗೂ ಸಾಮಾನ್ಯವಾಗಿ ಇಂಗ್ಲಿಷ್ ವಿಶ್ವಕೋಶಗಳಲ್ಲಿ ಕಾಣಬರದ, ಅನೇಕ ಅತ್ಯುಪಯುಕ್ತ ಮಾಹಿತಿಗಳು ಇಂಗ್ಲಿಷ್ ಓದುಗರಿಗೂ ತಿಳಿಯುವಂತಾಗಬೇಕು'' ಎಂದು ಕಂಡಾಗಲೆಲ್ಲ ಒತ್ತಾಯಿಸಿ ಹೇಳುತ್ತಿದ್ದರು.

ನಾನೊಮ್ಮೆ ಮಾಸ್ಕೋದಿಂದ ಬೆಂಗಳೂರಿಗೆ ರಜೆಯ ಮೇಲೆ ಬಂದಿದ್ದಾಗ ನನ್ನ ಗುರುವರ್ಯ ಡಾ|| ಎಚ್ಚೆನ್‌ರವರನ್ನು ನನ್ನ ಮಕ್ಕಳಿಗೆ ಪರಿಚಯಿಸಲೆಂದು ಅವರನ್ನು ನ್ಯಾಷನಲ್ ಕಾಲೇಜಿಗೆ ಕರೆದೊಯ್ದಿದ್ದೆ. ಕಾರ್ಯಾಲಯದ ನಾನಾ ಕಾರ್ಯಗಳಲ್ಲಿ ಮಗ್ನರಾಗಿದ್ದರೂ ಡಾ|| ಎಚ್ಚೆನ್ ಹತ್ತು ನಿಮಿಷ ಕಾಲ ಬಿಡುವು ಮಾಡಿಕೊಂಡು ನನ್ನ ಮಕ್ಕಳೊಂದಿಗೆ ಆತ್ಮೀಯವಾಗಿ ಮಾತುಕತೆ ನಡೆಸಿದರು. ಮಾಸ್ಕೋದಲ್ಲೇ ಓದುಬರೆಹ ನಡೆಸುತ್ತಿದ್ದ ನನ್ನ ಮಕ್ಕಳಿಗೆ ಸೋವಿಯತ್ ಶಿಕ್ಷಣ ಪದ್ಧತಿಯ ಬಗೆಗೆ ನಾನಾ ಪ್ರಶ್ನೆಗಳನ್ನು ಕೇಳಿದರು.

ತಮ್ಮ ಎದುರಿಗೆ ಗೋಡೆಯ ಮೇಲೆ ನೇತು ಹಾಕಿದ್ದ ಪ್ರಶ್ನಾರ್ಥಕ ಚಿಹ್ನೆ ಇದ್ದ ಪಟವನ್ನು ತೋರಿಸುತ್ತ ಡಾ|| ಎಚ್ಚೆನ್ ನನ್ನ ಮಕ್ಕಳಿಗೆ, ''ನೋಡಿ, ಯಾವುದನ್ನೂ ನೀವು ಪ್ರಶ್ನಿಸದೆ ಒಪ್ಪಬಾರದು. ನಾನು ಎಲ್ಲರಿಗೂ ಹೇಳುವುದು ಇದನ್ನೇ. ಅದಕ್ಕಾಗಿಯೇ ನೋಡಿ, ಈ ಪ್ರಶ್ನಾರ್ಥಕ ಚಿಹ್ನೆ ಇರುವ ಪಟ'' ಎಂದು ಹೇಳಿದರು. ಅವರ ಈ ಮಾತು ನನ್ನ ಮಕ್ಕಳಿಗೆ ತುಂಬ ಇಷ್ಟವಾಯಿತು.

ಹೀಗೆ ಎಲ್ಲರಿಗೂ ಪ್ರಶ್ನಿಸಲು ಉತ್ತೇಜಿಸುತ್ತಿದ್ದ ಡಾ|| ಎಚ್ಚೆನ್ ಇದೀಗ ಪ್ರಶ್ನಾತೀತರಾಗಿ ನಮ್ಮನ್ನು ಬಿಟ್ಟು ಹೊರಟುಹೋಗಿದ್ದಾರೆ.

*ಬೆಂಗಳೂರು* **ಕೆ. ಎಲ್. ಗೋಪಾಲಕೃಷ್ಣರಾವ್**

ನಿಷ್ಕಲ್ಮಷ ನಗುವಿನ ಡಾ|| ಎಚ್. ಎನ್. ಭಾವಚಿತ್ರದೊಂದಿಗೆ ಹೊರಬಂದಿರುವ 'ಹೊಸತು' ಸಂಗ್ರಹಯೋಗ್ಯ ಸಂಚಿಕೆ. ಅಲ್ಲಿಯ ಲೇಖನಗಳನ್ನು ಓದಿದ ನಂತರವೂ ಎಚ್.ಎನ್.ರ ತೆರೆದ ಮನವನ್ನು ಸೂತ್ರೀಕರಿಸಲು ಸಾಧ್ಯವಾಗುತ್ತಿಲ್ಲ. ಏನೇ ಆದರೂ ಮೊದಲು ಮಾನವನಾಗು ಎಂಬ ಕುವೆಂಪು ವಾಣಿಯಂತೆ ಎಚ್. ಎನ್. ಹೆಚ್ಚಾಗಿ ಮಾನವೀಯತೆಯ ಸಾಕಾರ ಮೂರ್ತಿಯಾಗಿದ್ದರು. ಅವರ ನಿಧನದಿಂದ ವಿಜ್ಞಾನ, ವೈಚಾರಿಕ, ಶಿಕ್ಷಣ, ಮಾನವ ಪ್ರೀತಿಗಳು ನಿಜ ಅರ್ಥದಲ್ಲಿ ಬಡವಾಗಿವೆ. ಆದರೂ ಅವರು ನಡೆದ ದಾರಿ ಮಾತ್ರ ನಮಗೆ ಮಾರ್ಗದರ್ಶನವಾಗಬೇಕು.

*ಬೆಂಗಳೂರು* **ವೀರೇಶ್ ಬಳ್ಳಾರಿ**




ಮಾರ್ಚ್ ೨೦೦೫ರ ಡಾ|| ಎಚ್ಚೆನ್‌ರವರ ಮುಖಪುಟ ಹೊತ್ತ ''ಹೊಸತು'' ನೋಡಿದಾಗ ಎಚ್ಚೆನ್‌ರವರು ಇನ್ನೂ ಇದ್ದಾರೆಂಬ ಭಾವನೆ ಮೂಡಿತು. ಅವರ ನೆನಪುಗಳ ಮಾಲೆಯಲ್ಲಿ ಸುಮಾರು ಇಪ್ಪತ್ತು ಜನ ಉತ್ತಮ ಲೇಖಕರ ವಿಭಿನ್ನ ರೀತಿಯ ಬರೆಹಗಳಲ್ಲಿ ಅವರ ಜೀವನ ಚರಿತ್ರೆಯನ್ನೇ ಓದಿದಂತೆ ಆಯಿತು. ಮೈಸೂರಿನಲ್ಲಿ ಲ್ಯಾಂಡ್ಸ್ ಡೌನ್ ಕಟ್ಟಡದ ಕಡೆ ಹೋದಾಗಲೆಲ್ಲ ''ತಾತಯ್ಯ''ನವರ ಮೂರ್ತಿಯನ್ನು ನೋಡುತ್ತಿದ್ದೆವು. ಆದರೆ ಅವರ ಸಾಧನೆ ಏನು ಎಂಬುದು ''ವೆಂಕಟಕೃಷ್ಣಯ್ಯ : ಕನ್ನಡ ಪತ್ರಿಕೋದ್ಯಮದ ಪಿತಾಮಹ'' ಎಂಬ ಲೇಖನ ನೋಡಿ ತಿಳಿಯಿತು. 'ಮಾನವ ಧರ್ಮ ಬಹಳ ಅರ್ಥಗರ್ಭಿತವಾಗಿತ್ತು.'

*ಪಾಂಡವಪುರ* **ಅ. ಮೃತ್ಯುಂಜಯ**

ಮಾರ್ಚ್ ತಿಂಗಳ ''ಹೊಸತು'' ತುಂಬಾ ಸೊಗಸಾಗಿ ಮೂಡಿಬಂದಿದೆ. ಯಾವುದು ಓದುವುದು, ಯಾವುದು ಬಿಡುವುದು ಅನ್ನಿಸುವಷ್ಟು ಚೆನ್ನಾಗಿದೆ. ಗೀತಾ ನಾಗಭೂಷಣ ಅವರ ಬಗೆಗಿನ ಲೇಖನ ಓದಿ ತುಂಬಾ ಸಂತೋಷವಾಯಿತು.

*ಮಂಗಳೂರು* **ಮಧುಕರ**

ಕಪ್ಪು ಬಣ್ಣದ ಹಿನ್ನೆಲೆಯಲ್ಲಿ ಸ್ವಚ್ಛ ಬಿಳಿಯುಡುಗೆಯಲ್ಲಿ ಶುಭ್ರ ನಗೆ ಬೀರುತ್ತಿರುವ ಎಚ್ಚೆನ್ ತಾತನ ಮುಖಪುಟ ಅವರು ಬಾಳಿ ಬದುಕಿದ ಇಡೀ ಬದುಕಿಗೆ ಸಂಕೇತದಂತಿತ್ತು. ಅವರ ಕುರಿತಾದ ಹಲವಾರು ಬರೆಹಗಳು ಅವರ ನಿಲುವನ್ನು ಕಟ್ಟಿಕೊಡಲು ಯತ್ನಿಸಿದವು. ಎಚ್ಚೆನ್ ಯಾವುದೇ ಸೋಗುಗಾರಿಕೆ, ತೋರಿಕೆಯ ಮುಖವಾಡವಿಲ್ಲದೆ ತಮ್ಮ ನಿಲುವಿಗೆ ಪ್ರಾಮಾಣಿಕವಾಗಿ ಬದ್ಧರಾದುದರಿಂದಲೇ ಅನೇಕರಿಗೆ ದ್ವಂದ್ವಗಳನ್ನು ಹುಟ್ಟುಹಾಕಿದ್ದಾರೆನಿಸಿತು.

ಗೀತಕ್ಕನ ಸಂದರ್ಶನ ಆಪ್ತವಾಗಿ ಮೂಡಿಬಂದಿದೆ. ಖುದ್ದು ಬಡತನ ಅನುಭವಿಸಿ, ಹಿಂದುಳಿದ ವರ್ಗದಿಂದ ಬಂದಂತಹ ಗೀತಕ್ಕ 'ಸ್ವಂತ ವೈಚಾರಿಕ ಜಾಗೃತಿಯಿಂದ ಮಾತ್ರ ಪ್ರಗತಿ ಸಾಧ್ಯ' ಎಂಬ ಅವರ ಕೊನೆಯ ಮಾತು ಸಾಮಾಜಿಕ ನಿಲುವನ್ನು ಪ್ರಸ್ತುತಪಡಿಸುತ್ತದೆ. ಅವರ ದೇಶಿ ಸೊಗಡಿನ ಸಾಹಿತ್ಯ ಕನ್ನಡದಲ್ಲಿ ಹೊಸ ಸಂಚಲನ ಮೂಡಿಸಿದ್ದು ಖರೆ.

*ಗಳತಗಾ* **ಗಾಯತ್ರೀನಂದನ**

ಡಾ|| ಎಚ್ಚೆನ್‌ರವರ ಹೋರಾಟದ ಬದುಕಿನ ವಿವಿಧ ಸ್ತರಗಳ ಜೀವನ ವಿಧಾನಗಳ ಹಳೆಯ-ಹೊಸತು ಮೌಲ್ಯಗಳ ಕೊಂಡಿಯಾಗಿ, ಸಮಾಜದ ಉದ್ಧಾರಕ್ಕಾಗಿ ತಮ್ಮನ್ನೇ ತಾವು ಮುಡುಪಾಗಿಟ್ಟು, ಧರ್ಮದ ಬಗ್ಗೆ ಕಟಿಬದ್ಧವಾದ, ವೈಚಾರಿಕ ನೆಲೆಗಟ್ಟು, ಯಾವುದೇ ವಿಷಯವನ್ನು ಭಾವನಾತ್ಮಕವಾಗಿ ಸ್ವೀಕರಿಸದೆ, ವೈಚಾರಿಕವಾದ ಹಿನ್ನೆಲೆಯಲ್ಲಿ ಆಸ್ವಾದಿಸಿ, ಇಡೀ ಮಾನವ ಕುಲಕ್ಕೆ ಆಸ್ತಿಯಾಗಿ, ಸಮಾಜಕ್ಕೆ ತಮ್ಮದೇ ಆದ ವಿಶಿಷ್ಟ ವಿಚಾರಗಳನ್ನು ಕೊಟ್ಟಿದ್ದಕ್ಕಾಗಿ, ಅದನ್ನು ತಾವು ಈ ಸಂಚಿಕೆಯಲ್ಲಿ ಪ್ರಸ್ತುತಪಡಿಸಿದ್ದಕ್ಕಾಗಿ ಧನ್ಯವಾದಗಳು ಸಲ್ಲಬೇಕಾಗಿದೆ.

*ರಾಯಚೂರು* **ಗೋವರ್ಧನ ರೆಡ್ಡಿ**

ಮುಖಪುಟದಲ್ಲಿ ಡಾ|| ಎಚ್ಚೆನ್ ಅವರ ನಗುಮುಖದ ಚಿತ್ರ ಕಂಡು ಅವರು ಪಂಚಭೂತಗಳಲ್ಲಿ ಲೀನವಾಗಿದ್ದರೂ ನಮ್ಮ ಕಣ್ಮುಂದೆ ಇದ್ದಾರೆ ಎಂದೆನಿಸಿತು. ಮುಖಪುಟ ತಿರುವಿದೊಡನೆ ಅವರ ಹೆಜ್ಜೆಗುರುತುಗಳು; ಸಂಪಾದಕೀಯದಲ್ಲೂ ಎಚ್ಚೆನ್ ಅವರಿಗೇ ಮೊದಲ ಆದ್ಯತೆ. ಪುಟ ತಿರುವಿದೊಡನೆ ''ಎಚ್. ಎನ್. – ನೆನಪುಗಳು'' ಈ ಶೀರ್ಷಿಕೆಯಡಿಯಲ್ಲಿ ಅವರನ್ನು ಹತ್ತಿರದಿಂದ ಕಂಡ ಗೆಳೆಯರು, ಲೇಖಕರು ಅವರ ವ್ಯಕ್ತಿತ್ವವನ್ನು ಎಳೆಎಳೆಯಾಗಿ ತೆರೆದಿಟ್ಟಿದ್ದಾರೆ. ಒಟ್ಟಿನಲ್ಲಿ, ಹೊಸತು ಶ್ರೇಷ್ಠ ಶ್ರದ್ಧಾಂಜಲಿಯನ್ನು ಸಲ್ಲಿಸಿದೆ. ''ಗೀತಾ ನಾಗಭೂಷಣ, ಬದುಕು ತೆರೆದಿಟ್ಟ ಬರಹಗಾರ್ತಿ, ಬಗ್ಗೆ ಪರಿಚಯ (ಎನ್. ಗಾಯತ್ರಿ), ಬಸವಣ್ಣ ಮತ್ತು ಶ್ರಮಜೀವಿ ಚಳುವಳಿ – ಒಂದು ಮರು ಓದು (ವೈ. ಗ. ಜಗದೀಶ) ಹೀಗೆ ಲೇಖನ ಒಂದೇ ಎರಡೇ ಸಾಹಿತ್ಯಪ್ರಿಯನಾದ ನನಗೆ ಒಂದಲ್ಲಾ ಒಂದು ರೀತಿಯಲ್ಲಿ ''ಹೊಸತು'' ನೆರವಾಗುತ್ತಿದೆ. ಹೆಸರಿಗೆ ತಕ್ಕಂತೆ ಸದಾ ಹೊಸತನ್ನೇ ಉಣಬಡಿಸುತ್ತಿರುವ ಹೊಸತು ಸಂಪಾದಕ ಬಳಗದವರಿಗೆಲ್ಲಾ ಲೇಖಕರುಗಳಿಗೆಲ್ಲಾ ಶುಭಕಾಮನೆಗಳು.

*ಮೈಸೂರು* **ಕಾಳೀಹುಂಡಿ. ಕೆ. ವಿ. ಶಿವಕುಮಾರ್**

ಮಾರ್ಚ್ ೨೦೦೫ರ ''ಹೊಸತು''ನಲ್ಲಿ ''ಎಚ್. ಎನ್. ನೆನಪುಗಳು'' ಉತ್ತಮ ಬರೆಹ ಮೂಡಿಬಂದಿತು. ಗಣ್ಯವ್ಯಕ್ತಿಗಳ ಗಮನದಲ್ಲಿ ಡಾ|| ಎಚ್. ನರಸಿಂಹಯ್ಯ ಅವರ ವ್ಯಕ್ತಿತ್ವ ಬರೆಹ ದೇಶಪ್ರೇಮ, ಸರಳ ಜೀವನ ಎಲ್ಲವೂ ಓದಿ ತುಂಬಾ ಖುಷಿ ಆಯಿತು. ಎಚ್. ಎನ್. ಅವರ ನೆನಪುಗಳು ಎಲ್ಲ ಕನ್ನಡಿಗರ ಹೃದಯದಲ್ಲಿ ಆಳವಾಗಿ ಬೇರೂರಿವೆ. 'ಗಾಂಧೀವಾದಿ ಎಚ್. ಎನ್.

ನೆನಪುಗಳು' ಒಂದು ಸುಂದರ ಕವನ.

'ಹೊಸತು'ವಿನ ಕೊನೆಪುಟದಲ್ಲಿ 'ತಿಳಿವು'ನಲ್ಲಿ ಡಾ॥ ಎಚ್. ನರಸಿಂಹಯ್ಯ ಅವರ 'ಮಾನವಧರ್ಮ' ತೆರೆದ ಮನದಿಂದ ಪ್ರಕಟಿತವಾದ ಮಾನವಧರ್ಮದ ಅರ್ಥ, ಧರ್ಮದ ಆಚರಣೆ ಹೇಗೆ ಎಂಬ ನುಡಿಮುತ್ತು ದಿವ್ಯಜ್ಯೋತಿ ತುಂಬಾ ಅದ್ಭುತವಾಗಿತ್ತು. ಎಚ್. ಎನ್. ಮಾಸ್ತರಿಗೆ ನನ್ನ ನಮಸ್ಕಾರಗಳು.

''ಬದುಕು ತೆರೆದಿಟ್ಟ ಬರಹಗಾರ್ತಿ'' ಗೀತಾ ನಾಗಭೂಷಣ ಅವರ ಸಂದರ್ಶನ ತುಂಬಾ ಉತ್ತಮ ವಾಗಿತ್ತು. ಡಾ॥ ಎನ್. ಗಾಯತ್ರಿ ಅವರು ಉತ್ತಮವಾಗಿ ಸಂದರ್ಶನ ಮಾಡಿದ್ದಾರೆ. ಗೀತಾ ನಾಗಭೂಷಣ ಅವರ 'ಬದುಕು' ಕಾದಂಬರಿಗೆ ಶ್ರೇಷ್ಠ ಪುಸ್ತಕ ಬಹುಮಾನ ಬಂದ ಸಂದರ್ಭದಲ್ಲಿ ಗೀತಾ ನಾಗಭೂಷಣ ಅವರ ಮನದಾಳದ ಮಾತುಗಳು ತುಂಬಾ ಇಷ್ಟವಾಯಿತು. ಡಾ॥ ಬಸವರಾಜ ಸಬರದ ಅವರ ''ಶಿಕ್ಷಣ ಮತ್ತು ಮಹಿಳಾ ಸಬಲೀಕರಣ'' ತುಂಬಾ ಇಷ್ಟವಾಯಿತು.

*ಶಿವಮೊಗ್ಗ* **ಪಿ. ಗೋವಿಂದರಾಜ್**

**ಬಸವಣ್ಣ ಮತ್ತು ಶ್ರಮಜೀವಿ**

ಮಾರ್ಚ್ ೨೦೦೫ ಹೊಸತುವಿನಲ್ಲಿಯ 'ಬದುಕು ತೆರೆದಿಟ್ಟ ಬರಹಗಾರ್ತಿ' ಮತ್ತು 'ಬಸವಣ್ಣ ಮತ್ತು ಶ್ರಮಜೀವಿ : ಒಂದು ಮರು ಓದು' ಲೇಖನಗಳ ಧ್ವನಿ ಒಂದೇ ಆದರೂ ಮೊದಲನೆಯದರಲ್ಲಿ ಯಾವುದೇ ಜಾತಿಯ ಹೆಸರು ಉಲ್ಲೇಖಿಸಿ ಗೀತಾ ನಾಗಭೂಷಣ ಅವರ ಸಾಧನೆ ಸಿದ್ಧಿಗಳ ಹಿರಿಮೆಯನ್ನು ಮರುಕದ ದೃಷ್ಟಿಯಿಂದ ಗಮನಿಸುವತ್ತ ಓದುಗರ ಗಮನ ಸೆಳೆದಿಲ್ಲ. ಇದು ಧನಾತ್ಮಕ ಚಿಂತನೆಗೆ ನಿದರ್ಶನ, ವರ್ತಮಾನದಲ್ಲಿ ಪ್ರಸ್ತುತ ಕೂಡ. ಎರಡನೆಯದರಲ್ಲಿ ವಿನಾಕಾರಣ ನಿರ್ದಿಷ್ಟ ಜಾತಿ ಹೆಸರನ್ನು ಪದೇ ಪದೇ ಪ್ರಸ್ತಾವಿಸುತ್ತ ಬಸವಣ್ಣನವರ (ವ್ಯಾಪಕವಾಗಿ ಶಿವಶರಣರ) ಸಾಧನೆ ಸಂದೇಶಗಳ ಗರಿಮೆಯನ್ನು ಕಾಣಿಸಲಾಗಿದೆ. ಒಂದು ಯುಗದ ಸಾಮಾಜಿಕ ವರ್ತನೆಗಳನ್ನು ಇನ್ನೊಂದು ಯುಗದಲ್ಲಿಯ ಸಿದ್ಧ ಮೌಲ್ಯಗಳಿಂದ ಅಳೆದು ತೀರ್ಮಾನ ನೀಡುವುದು ಸರಿಯಲ್ಲ – ''ಕಾವ್ಯ ಸತ್ತೆಯನನ್ಯ ಸತ್ತಾ ಪ್ರಮಾಣದಿಂ ಪರಿಕಿಸಲ್ ಮಿಥ್ಯೆಯಲ್ಲದೆ ತನಗೆ ತಾಂ ಮಿಥ್ಯೆಯೇಂ?'' (ಕುವೆಂಪು). ಒಂದು ಕಾಲದ ತತ್ತ್ವ ಬೋಧನೆಗಳು ವರ್ತಮಾನದ ಆಚರಣೆಯಲ್ಲಿ ಹೇಗಿರುತ್ತವೆ ಎನ್ನುವುದೇ ಪ್ರಧಾನ ಲಕ್ಷ್ಯವಾಗಬೇಕು. ನಮ್ಮ ವೈಚಾರಿಕ ದೃಷ್ಟಿ ಸದಾ ಮಾನವೀಯತೆ – ನೈತಿಕತೆಗಳ ಸಂಗಮವಾಗಿರಬೇಕು.

*ಮೈಸೂರು* **ಜಿ. ಟಿ. ನಾರಾಯಣರಾವ್**

ಮಾನ್ಯ ಶ್ರೀ ಎಲ್. ಗುಂಡಪ್ಪ (೧೯೦೩-೧೯೮೫) ಅವರನ್ನು ಕುರಿತಾದ ಸ್ಮರಣ ಸಂಪುಟವನ್ನು ಹೊರತರುವ ಯೋಜನೆ ಇದೆ. ನಿಮ್ಮ ಬಳಿ ಇರುವ ಅವರ ಯಾವುದೇ ಬರಹದ ಹಸ್ತಪ್ರತಿ, ಅಪರೂಪದ ದಾಖಲೆಗಳು, ಚಿತ್ರ, ಪತ್ರಗಳು ಇತ್ಯಾದಿ ಇದ್ದಲ್ಲಿ ದಯಮಾಡಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಿ. ಅಂತೆಯೇ, ಪುಸ್ತಕಗಳ ಪ್ರತಿ ಇದ್ದಲ್ಲಿ ತಮ್ಮ ವಿಳಾಸದೊಂದಿಗೆ ತಿಳಿಸಿದರೆ ತರಿಸಿಕೊಳ್ಳುವ ವ್ಯವಸ್ಥೆ ಮಾಡಿಕೊಳ್ಳಲಾಗುತ್ತದೆ.

*ನೀವು ಸಂಪರ್ಕಿಸಬೇಕಾದ ವಿಳಾಸ*

**ಶ್ರೀ ಎಲ್. ಜಿ. ಜ್ಯೋತೀಶ್ವರ**
**ನಂ ೪೩, ೭ನೇ ಕ್ರಾಸ್, ೭ನೇ ಮೈನ್, ಬಿ.ಡಿ.ಎ. ಲೇಔಟ್**
**ಆವಲಹಳ್ಳಿ ವಿಸ್ತರಣೆ, ಬನಶಂಕರಿ ೩ನೇ ಹಂತ,**
**ಬೆಂಗಳೂರು-೫೬೦ ೦೮೫ ಫೋನ್ : ೯೮೪೫೩೧೭೦೪೧**
**ಇ.ಮೇಲ್ : lgjyothishwara@vsnl.net**

**ಪರಿಸರ ಮತ್ತು ಜೀವ ಸಂಕುಲ**

''ಪರಿಸರ ಮತ್ತು ಜೀವ ಸಂಕುಲವನ್ನು ಲಗೋರಿ ಆಟದ ಬಿಲ್ಲೆಗಳಂತೆ ಪ್ರಕೃತಿಯು ವ್ಯವಸ್ಥಿತವಾಗಿ ಜೋಡಿಸಿದೆ'' ಎಂಬ ಪರಿಕಲ್ಪನೆ ಮತ್ತು 'ಈ ವ್ಯವಸ್ಥೆಯ ತುತ್ತುದಿಯಲ್ಲಿರುವ ಮಾನವ ಅಮಾಯಕವಾಗಿ ವ್ಯವಸ್ಥೆಗೆ ಮಧ್ಯಪ್ರವೇಶ ಮಾಡಿ ಅದನ್ನು ಕೆಡವಿ ಕೆಟ್ಟು ಹೋಗುತ್ತಿದ್ದಾನೆ' ಎಂಬ ವಿಚಾರಸರಣಿ ವಿ. ಚಂದ್ರ ಶೇಖರ ನಂಗಲಿಯವರ ಸಂಬಂಧಿತ ಲೇಖನದಲ್ಲಿ ಪ್ರಜ್ಞಾವಂತರನ್ನು ದಂಗುಬಡಿಸಿದಂತಾಗಿದೆ ಅಥವಾ ಅವರನ್ನು ಯೋಚನಾಪರರನ್ನಾಗಿಸಿದೆ. ಮಾನವನು ಅನುಸರಿಸುತ್ತಿರುವ ಅವನತಿಯ ದಾರಿಯನ್ನು ಮಾರ್ಮಿಕ ವಾಗಿ ಬಣ್ಣಿಸಿದ ಲೇಖನವು ಉತ್ತಮ ಗುಣಮಟ್ಟದ್ದು ಮತ್ತು ಸಾಹಿತ್ಯಿಕವೂ ಆಗಿದ್ದು ಸಂಗ್ರಾಹ್ಯವಾಗಿದೆ.

ರತ್ನಹಳ್ಳಿಯಲ್ಲಿ ೧೯೬೦ರಲ್ಲಿ ಅಕ್ರಮವಾಗಿ ನಡೆಯಿಸಲಾಗುತ್ತಿದ್ದ ಯುರೇನಿಯಮ್ ಸಂಸ್ಕರಣ ಪತ್ತೆ ಹಚ್ಚಿ ಬಯಲು ಮಾಡಿದವನು ಸಾಕೇತ್ ರಾಜನ್ ಎಂಬುದು ಎಷ್ಟು ಮಂದಿಗೆ ತಿಳಿದಿರಬಹುದು?

*ಸುರತ್ಕಲ್* **ಟಿ. ಸಿ. ಶ್ರೀಯಾನ್**

'ಪರಿಸರ ಮತ್ತು ಜೀವ ಸಂಕುಲ' ಲೇಖನ ದಿಕ್ಕು ತಪ್ಪಿರುವ ಜೀವನಕ್ರಮದಿಂದಾಗಿ ಉಂಟಾಗಿರುವ ಪರಿಣಾಮಗಳ ಬಗ್ಗೆ ಮತ್ತು ಭೂಮಿಯನ್ನು ಉಳಿಸುವಲ್ಲಿ ನಮ್ಮ ಜವಾಬ್ದಾರಿಯ ಬಗ್ಗೆ ಎಚ್ಚರಿಸಿ ಚಿಂತನೆಗೆ ಹಚ್ಚಿರುವ ಸಕಾಲಿಕ ಲೇಖನ. ಪ್ರಕೃತಿಯ ಅಂಶವಾದ ಮಾನವ ಅಭಿವೃದ್ಧಿ, ಬೆಳವಣಿಗೆ ಹಾಗೂ ವಿಜ್ಞಾನದ ಆವಿಷ್ಕಾರಗಳು ಎಂಬ ಹೊಸ ಹೊಸ ಹೆಸರುಗಳಲ್ಲಿ ಅದರಿಂದ ಪ್ರತ್ಯೇಕವಾಗುತ್ತಾ ಅದರ ನಾಶದಲ್ಲಿ ತೊಡಗಿ ಕೊಂಡಿರುವುದು ಎಂತಹ ವಿಪರ್ಯಾಸ! 'ಪ್ರತಿ ಯೊಬ್ಬರ ಬೇಕುಗಳನ್ನು ಪೂರೈಸಲು ಪ್ರಕೃತಿ ಶ್ರೀಮಂತವಾಗಿದೆಯೇ ಹೊರತು ಅವರ ಅತಿ ಆಸೆಗಳನ್ನಲ್ಲ' ಎಂದಿದ್ದರು ಮಹಾತ್ಮಾ ಗಾಂಧೀಜಿ. ಆದರೆ ಇಂದು ನಾವು ಪ್ರಕೃತಿಯ ನಾಳ ಮತ್ತು ಶೋಷಣೆಗಳಿಗೆ ಶೋಧನೆ ಹಾಗೂ ಸಂಶೋಧನೆ ಎಂಬ ಪಟ್ಟಕಟ್ಟಿ ಕಾಡು, ನೀರು ಮತ್ತು ಗಾಳಿ, ಭೂಮಿಯಿಂದ ಮರೆ ಮಾಡುವಲ್ಲಿ ಸತತ ಪ್ರಯೋಗಗಳಲ್ಲಿ ನಿರತರಾಗಿದ್ದೇವೆ. ಭೂಮಿಯ ಉಳಿವಿಗೆ ಮಾನವನ ಹೊರತಾಗಿ ಎಲ್ಲಾ ಜೀವಸಂಕುಲಗಳು ಅವಶ್ಯಕ ಎಂಬ ಅತ್ಯಂತ ಸರಳ ವಿಚಾರ ಮಾನವನ ಅತ್ಯಂತ ಶ್ರೇಷ್ಠ ಮಿದುಳಿಗೆ ಅರಿವಿಲ್ಲದೇ ಇರುವುದರಿಂದ ಈ ಸುಂದರವಾದ ಗ್ರಹ ಕಣ್ಮರೆಯಾದರೆ ಯಾರೂ ಯಾವ ವಿಸ್ಮಯಗೊಳ್ಳಬೇಕಿಲ್ಲ.

*ಬೆಂಗಳೂರು* **ನರೇಂದ್ರ ಸಿರಕಜೆ**

ಅರ್ಹತೆಗಳು, ಗುಣಮಟ್ಟ ಮಾನದಂಡಗಳು ಬೇಡ ಎನ್ನುವುದು ನ್ಯಾಯವಲ್ಲ ಎನ್ನುವುದನ್ನು ಉದಾರವಾದಿ ಒಪ್ಪಿಕೊಳ್ಳಬೇಕು.

*ಮಂಗಳೂರು* **ಎಸ್. ಕೆ. ಸಿದ್ಧಾರ್ಥ**

---

*೫ನೇ ಪುಟದಿಂದ... ಈ ತಿಂಗಳು*

ಜಾರ್ಖಂಡ್‌ನ ರಾಜಕಾರಣವು ಇತ್ತೀಚಿನ ದಿನಗಳಲ್ಲಿ ಅಸಹ್ಯಕರವಾದ ರೀತಿಯಲ್ಲಿ ಪ್ರಕಟಗೊಂಡಿತು. ರಾಜಕೀಯ ಪಕ್ಷಗಳು, 'ಸ್ವತಂತ್ರ' ಶಾಸಕರು, ರಾಜ್ಯಪಾಲರು, ಎಲ್ಲಾ ಒಂದೇ ಛಾಪಿನವರು! ಸರ್ವೋಚ್ಚ ನ್ಯಾಯಾಲಯವು ತಲೆಹಾಕಿ ಸನ್ನಿವೇಶವನ್ನು ತಿಳಿಗೊಳಿಸಲಿಲ್ಲವೆಂಬುದು ಸರ್ವವಿದಿತ. ತನ್ನ ಎಲ್ಲೆಯನ್ನು ಮೀರಲು ನ್ಯಾಯಾಲಯಕ್ಕೆ ಮಾತ್ರ ಹಕ್ಕಿದೆಯೇ ಎಂಬ ಪ್ರಶ್ನೆಯನ್ನು ತೇಲಿಸಬಾರದು. ಸಂವಿಧಾನ ರಕ್ಷಣೆಗೆ ಮಾರ್ಗ ಇದಲ್ಲ. ಇಂದು ಶಾಸನಸಭೆಯ ನಡಾವಳಿಯನ್ನು ನಿರ್ಧರಿಸಿ, ನಾಳೆ ಇಂತಹ ವ್ಯಕ್ತಿಗೆ ಅಥವಾ ಪಕ್ಷಕ್ಕೆ ಇಂತಿಂಥವರ ಬೆಂಬಲವಿದೆಯೆಂದು ತಾನೇ ಘೋಷಿಸಲು ಮುಂದಾದರೆ ಏನಾದೀತು? ಮೂಲತಃ ನಮ್ಮ ರಾಜಕಾರಣದಲ್ಲಿರುವ ದೊಡ್ಡ ನ್ಯೂನತೆಯೆಂದರೆ ವ್ಯಕ್ತಿಗತ ನಿಷ್ಠೆ ಮತ್ತು ಆಕಾಂಕ್ಷೆಗಳು ಮಹತ್ವದ ಸ್ಥಾನ ಪಡೆದಿರುವುದು, ಅದು ಲಾಲುಪ್ರಸಾದ್, ನಿತೀಶ್ ಕುಮಾರ್, ಪಾಸ್ವಾನ್, ದೇವೇಗೌಡ, ಸೋನಿಯಾ, ಮುಲಾಯಂ, ಮಾಯಾವತಿ, ಜಯಲಲಿತಾ, ಕರುಣಾನಿಧಿ, ಕರುಣಾಕರನ್ ಮುಂತಾದವರೆಲ್ಲರ ಅವಲಕ್ಷಣವಾಗಿದೆ. ಸಿದ್ಧಾಂತಕ್ಕೆ ಬದ್ಧತೆ, ಅಭಿವೃದ್ಧಿ ಕಾರ್ಯಕ್ರಮಕ್ಕೆ ನಿಷ್ಠೆ, ಇತ್ಯಾದಿ ಯಾವುದೂ ಬೇಡ. ಜೊತೆಗೆ, ಯಾರು ಯಾವ ಕಡೆಗೆ ಹೋಗಬಹುದೆಂಬುದಕ್ಕೆ ನಿರ್ಧಾರಕ ಅಂಶಗಳೂ ಇಲ್ಲ. ದಿಕ್ಕುತಪ್ಪಿದ ರಾಜಕೀಯ ದೃಷ್ಟಿಕೋನ ನಮ್ಮನ್ನು ಪ್ರಪಾತಕ್ಕೆ ತಳ್ಳುತ್ತದೆ. ಯಾರ ಜೊತೆ ಹೊಂದಾಣಿಕೆ ಮತ್ತು ಏಕೆ ಎಂಬುದರಲ್ಲಿ ವಿಶ್ವಾಸವಿಲ್ಲದ ರಾಜಕಾರಣವು ಬೇಜವಾಬ್ದಾರಿಯ ರಾಜಕಾರಣ. ಅದನ್ನು ಚಿವುಟಿಹಾಕದಿದ್ದರೆ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯು ಎಷ್ಟು ದಿನ ಉಳಿದೀತೆಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಎಡಪಕ್ಷಗಳು, ಭಾಜಪ ಮತ್ತು ಕಾಂಗ್ರೆಸ್ ಇದರ ಬಗ್ಗೆ ದೂರದೃಷ್ಟಿಯ ಸ್ಪಷ್ಟ ನಿಲುವನ್ನು ತಾಳುವ ಅಗತ್ಯವಿದೆ. ಯಾವಾಗ ಯಾರ ಕಡೆಗೆ ವಾಲಬೇಕೆಂಬ ಸಮಯಸ್ಫೂರ್ತಿಯ ತೀರ್ಮಾನಗಳು ನಮ್ಮ ಪ್ರಜಾಪ್ರಭುತ್ವವನ್ನು ಹೊಲಸು ಮಾಡುತ್ತವೆಂಬ ಎಚ್ಚರವಿರಬೇಕು.

* * *

ನರಮೇಧೇಂದ್ರ ಮೋದಿಯವರಿಗೆ ಅಮೆರಿಕಾ ಸರ್ಕಾರವು ರಾಜತಾಂತ್ರಿಕ ವೀಸಾ ನೀಡುವುದಿಲ್ಲವೆಂದು ಹೇಳಿ ಅವರ ಬಳಿ ಇದ್ದ ಪ್ರವಾಸಿ – ವ್ಯವಹಾರ ವೀಸಾವನ್ನು ರದ್ದುಮಾಡಿದೆಯೆಂಬ ವರದಿ ಬಂದಿದೆ. ಈ ಉದ್ಧಟತನವನ್ನು ಖಂಡಿಸುತ್ತಾ ಮೋದಿ ಒಂದು ಪ್ರಶ್ನೆ ಹಾಕಿದ್ದಾರೆ: ''ಇರಾಕ್ ಮೇಲೆ ಆಕ್ರಮಣ ನಡೆಸಿರುವುದರಿಂದ ಅಮೆರಿಕಾದ ಮಿಲಿಟರಿ ದಂಡನಾಯಕನಿಗೆ ಭಾರತವು ವೀಸಾ ನಿರಾಕರಿಸಬೇಕೆ?'' ಉತ್ತರ ಸರಳ: ''ಹೌದು.'' ಮೋದಿ ಪಕ್ಷ ಹಾಗೆಂದು ಹೇಳಲು ಸಿದ್ಧವಿದೆಯೆ? ಅಲ್ಲದೆ, ಪಾತಕಿ ಅಮೆರಿಕಾ ಸೈನ್ಯಕ್ಕೆ ಭಾರತದಲ್ಲಿ ಪ್ರವೇಶ ನೀಡಿ ಉಪಚರಿಸಿದ್ದು ಮೋದಿಯವರ ಪಕ್ಷ, ಅಂತಹ ಅಕ್ಷಮ್ಯ ಅಪರಾಧಕ್ಕೆ ಏನು ದಂಡ ತೆರುತ್ತಾರೆ?



# ದೇವರ ಜಾಡ್ಯ ನಿನಗೂ ಹಿಡಿಯಿತೆ ?



**– ವ್ಲಾದಿಮೀರ್ ಇಲ್ಯಿಚ್ ಲೆನಿನ್**

೧೮೭೦ರ ಏಪ್ರಿಲ್ ೨೨ರಂದು ಜನಿಸಿದ ವಿ. ಉಲ್ಯಾನೋವ್ ಕ್ರಾಂತಿಕಾರಿ ನಾಯಕನಾಗಿ ಪ್ರಸಿದ್ಧನಾಗಿರುವುದು ಲೆನಿನ್ ಎಂಬ ಹೆಸರಿನಲ್ಲಿ. ಆಗ್ಗೆ ಇಟಲಿಯ ಕಾಪ್ರಿಯಲ್ಲಿ ತಂಗಿದ್ದ ಮ್ಯಾಕ್ಸಿಂ ಗೋರ್ಕಿಗೆ ಲೆನಿನ್ ಕ್ರಾಕೋದಿಂದ ೧೯೧೩ರ ನವಂಬರ್ ೧೩ರಂದು ಒಂದು ಪತ್ರ ಬರೆದು ದೇವರ ಕಲ್ಪನೆಯ ಬಗ್ಗೆ ಗೋರ್ಕಿ ತಾಳಿದ್ದ ನಿಲುವನ್ನು ವಿಮರ್ಶಿಸಿದ್ದರು. ಒಂದು ವಾರದ ನಂತರ ಅದೇ ವಿಷಯ ಕುರಿತು ಮತ್ತೊಂದು ಪತ್ರವನ್ನೂ ಬರೆದರು. ಅವೆರಡರಲ್ಲಿ ಮೊದಲನೆಯದನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

ಪ್ರೀತಿಯ ಎ.ಎಂ.,

ಇದೇನು ನೀನು ಮಾಡುತ್ತಿರುವುದು? ನಿಜಕ್ಕೂ ಇದು ದಾರುಣವೆನಿಸುತ್ತದೆ! ದಸ್ತೋಯೆವ್ಸ್ಕಿಯ 'ದಿ ಪೊಸೆಸ್ಡ್' ಕಾದಂಬರಿಯ ನಾಟಕ ರೂಪಾಂತರದ ಬಗ್ಗೆ 'ಕರಮಜೋವ್ ಪ್ರವೃತ್ತಿ' ಎಂಬ ಶೀರ್ಷಿಕೆಯಲ್ಲಿ ನೀನು ಲೇಖನ ಪ್ರಕಟಿಸಿದ್ದೀಯೆ. ಕೆಲವು ಪತ್ರಿಕೆಗಳು ನಾಟಕವನ್ನು ಪ್ರಶಂಸಿಸಿದ ನಂತರ ನೀನು ಇನ್ನೊಂದು ಲೇಖನ ಸಹ ಬರೆದಿದ್ದೀಯೆ. ನಾನವನ್ನು ಓದಿ ಹರ್ಷಗೊಳ್ಳುವುದರಲ್ಲಿದ್ದೆ. ಆದರೆ ಅವುಗಳಲ್ಲಿ ಬಿಟ್ಟುಹೋಗಿದ್ದ ಭಾಗವನ್ನು ಇಂದಿನ 'ನೋವಯ ರಬೋಚಯ ಗಜ್ಯೇತ' (ನವ ದುಡಿಮೆಗಾರರ ಪತ್ರಿಕೆ) ಅಚ್ಚುಮಾಡಿದೆ. ಅದರಲ್ಲಿ ನೀನು ಹೇಳಿರುವುದಿದು:

"ದೇವರನ್ನು ಅರಸುವ ಉಪಕ್ರಮವನ್ನು ಸದ್ಯಕ್ಕೆ ದೂರವಿಡಬೇಕು (ಸದ್ಯಕ್ಕೆ ಮಾತ್ರವೇ ಏನು?). ಅದೊಂದು ವ್ಯರ್ಥ ಕಾಲಕ್ಷೇಪ. ಏನನ್ನೂ ಅರಸಲು ಸಾಧ್ಯವಿಲ್ಲದೆಡೆ ಏನನ್ನೋ ಅರಸಿಕೊಂಡು ಹೋಗುವುದು ವ್ಯರ್ಥವಲ್ಲದೆ ಮತ್ತೇನು! ಬಿತ್ತನೆ ಮಾಡದೆಯೇ ಕುಯ್ಲು ಮಾಡಲಾದೀತೆ? ದೇವರಿಲ್ಲ, ಅವನನ್ನಿನ್ನೂ (ಇನ್ನೂ!) ನೀವು ಸೃಷ್ಟಿಸಿಲ್ಲ. ದೇವರನ್ನು ಅರಸುವುದಲ್ಲ, ಅವನನ್ನು ಸೃಷ್ಟಿಸಲಾಗುತ್ತದೆ; ಜೀವನವನ್ನು ಜನ ಶೋಧನೆ ಮಾಡಿ ಕಂಡುಹಿಡಿಯುವುದಿಲ್ಲ, ಅದನ್ನು ಸೃಷ್ಟಿಮಾಡುತ್ತಾರೆ."

ಅಂದರೆ, ದೇವರನ್ನು ಅರಸುವ ಉಪಕ್ರಮವನ್ನು ಸದ್ಯಕ್ಕೆ ಮಾತ್ರ ಮುಂದೂಡಬೇಕೆಂದು ನಿನ್ನ ಅಭಿಪ್ರಾಯವೆ? ದೇವರನ್ನು ಅರಸುವುದು ನಿನಗೆ ಬೇಕಿಲ್ಲ; ಅವನನ್ನು ಕಟ್ಟಿಕೊಳ್ಳಬೇಕು, ಎಂಬುದು ನಿನ್ನ ಪರ್ಯಾಯ!

ಇಂತಹ ಮಾತುಗಳು ನಿನ್ನ ಲೇಖನದಲ್ಲಿ ಬರುವುದೆಂದರೆ ಅದು ಘೋರವಲ್ಲವೆ? ದೇವರನ್ನು ಅರಸುವುದು ಎಂಬುದು ಅವನನ್ನು ಕಟ್ಟಿಕೊಳ್ಳುವುದು ಅಥವಾ ಸೃಷ್ಟಿಸಿಕೊಳ್ಳುವುದು ಎಂಬುದಕ್ಕಿಂತ ಎಷ್ಟು ಭಿನ್ನ? ಹಳದಿ ಸೈತಾನ ಮತ್ತು ನೀಲಿ ಸೈತಾನರುಗಳ ನಡುವಣ ಭೇದಕ್ಕಿಂತ ಇದು ಬೇರೆಯಲ್ಲ. ಎಲ್ಲ ಸೈತಾನರು ಹಾಗೂ ದೇವರುಗಳ ವಿರುದ್ಧ ಸೊಲ್ಲೆತ್ತುವುದರ ಬದಲು ದೇವರ ಅರಸುವಿಕೆಯ ಮಾತಾಡಿದರೆ ಅದರರ್ಥವೇನು? ನೀನದೆಷ್ಟೇ ಶುದ್ಧವಾಗಿ, ಆದರ್ಶಪೂರ್ವಕವಾಗಿ ದೇವತೆಯನ್ನು ಆರಾಧಿಸಿದರೂ ಅದು ಕೇವಲ ದೇವತಾರಾಧನೆಯೇ ಆಗುತ್ತದೆ. ಅದು ಅರಸಿಕೊಂಡ ದೇವತೆ ಇರಬಹುದು, ಇಲ್ಲವೇ ಕಟ್ಟಿಕೊಂಡ ದೇವತೆ ಇರಬಹುದು, ಅಂತಹ ವ್ಯತ್ಯಾಸವೇನೂ ಇಲ್ಲ. ಹಳದಿ ಸೈತಾನನಿಗಿಂತಲೂ ನೀಲಿ ಸೈತಾನ ಉತ್ತಮವೆಂದು ಹೇಳುವುದು ಏನೂ ಹೇಳದಿರುವುದಕ್ಕಿಂತಲೂ ಖಂಡಿತ ಕೀಳಾದದ್ದು.

'ಸ್ವತಂತ್ರ ದೇಶಗಳು' ಎಂದು ಹೇಳುತ್ತಾರಲ್ಲ, ಅಮೆರಿಕಾ- ಸ್ವಿಟ್ಜರ್‌ಲೆಂಡ್ ಇತ್ಯಾದಿ, ಅಲ್ಲೆಲ್ಲಾ ಪ್ರಜಾಪ್ರಭುತ್ವ, ಜನತೆ, ಜನಮನ, ವಿಜ್ಞಾನ ಮುಂತಾದವುಗಳ ಹೆಸರಿನಲ್ಲಿ ಕೆಲವು ಸಂಗತಿಗಳನ್ನು ಮುಂದುಮಾಡುವುದು ಕುಹಕವೆಂದು ನಿನಗೂ ತಿಳಿದಿದೆ. ಜನತೆ ಮತ್ತು ದುಡಿಯುವವರನ್ನು ತಣಿಸಲು ಅಲ್ಲೆಲ್ಲಾ ಈ ಶುದ್ಧ, ಆದರ್ಶಯುತ, ದೇವರನ್ನು ಸೃಷ್ಟಿಸಿ, ಅವನಲ್ಲಿರಿಸುವ ಶ್ರದ್ಧೆಯನ್ನು ಕೊಂಡಾಡುವ ಪರಿಪಾಠವಿದೆ. ಮತಧರ್ಮದ ಭಾವನೆ, ದೇವರ ಕಲ್ಪನೆ ಅಥವಾ ದೇವರೊಡನೆ ಚಕ್ಕಂದವಾಡುವುದು, ಇವೆಲ್ಲಾ ಪ್ರಜಾಪ್ರಭುತ್ವವಾದಿಯೆಂದು ಕರೆದುಕೊಳ್ಳುವ ಬಂಡವಾಳಶಾಹಿಗೆ ಅಂಟಿರುವ ಒಂದು ಅಸಾಧ್ಯ ಕೊಳಕು. ತಮ್ಮದೇ ಆದ ಕಾರಣಕ್ಕೆ ಆ ಭಾವನೆಗೆ ಅವರು ಸೊಪ್ಪುಹಾಕುತ್ತಾರೆ. ಅದರಿಂದಲೇ ಅದು ಅಪಾಯಕಾರಿ ಕೊಳಕು, ನಾಚಿಕೆಗೇಡಿನ ಸಂಪರ್ಕದೋಷ ಎಂದು ನನಗನ್ನಿಸುತ್ತದೆ. ಭೌತಿಕವಾದ ಒಂದು ಲಕ್ಷ ಪಾಪಗಳು, ಕಲುಷಿತ ಪಾತಕಗಳು, ಹಿಂಸಾ ಕ್ರಿಯೆಗಳು, ಸಂಪರ್ಕದೋಷಗಳು, ಇರಲಿ; ಅವನ್ನು ಜನಸಾಮಾನ್ಯರು ಥಟ್ಟನೆ ಗುರುತಿಸಿಬಿಡುತ್ತಾರೆ; ಆದ್ದರಿಂದ ಅವುಗಳಿಂದ ಉಂಟಾಗುವ ಅಪಾಯ ಕಡಿಮೆ. ಅದೇ, ಈ ಸೂಕ್ಷ್ಮವಾದ ವಿಷಯಗಳಿವೆಯಲ್ಲಾ, ಅವುಗಳನ್ನವರು ಸುಲಭವಾಗಿ ತಿಳಿಯಲಾರರು; ದೇವರ ಅಧ್ಯಾತ್ಮ ಭಾವ ಅದಕ್ಕೊಂದು ಉದಾಹರಣೆ. ಅದಕ್ಕೆ ಕಂಗೊಳಿಸುವ 'ಸೈದ್ಧಾಂತಿಕ' ದಿರಿಸು ತೊಡಿಸಿದರಂತೂ ಮುಗಿದೇಹೋಯಿತು! ಇತ್ತೀಚೆಗೆ ಪತ್ರಿಕೆಯಲ್ಲಿ ಓದಿದೆ; ಜರ್ಮನಿಯಲ್ಲಿ ಯಾವನೋ ಕ್ಯಾಥೊಲಿಕ್ ಪಾದ್ರಿ ಹುಡುಗಿಯರನ್ನು ಅನಾಚಾರಕ್ಕೆ ಎಳೆಯುತ್ತಿದ್ದಾನಂತೆ. ಅದೆಂತಹ ಕ್ಷುದ್ರ ಕೃತ್ಯ! ಆದರೆ ಅವನಿಂದ 'ಪ್ರಜಾಪ್ರಭುತ್ವ'ಕ್ಕೆ ಅಷ್ಟೊಂದು ಅಪಾಯವಿಲ್ಲ. ಅದೇ, ಪಾದ್ರಿಯ ದಿರಿಸಿಲ್ಲದಿರುವವನು, ಮತಧರ್ಮದ ಜಡ್ಡುತನವನ್ನು ಆತುಕೊಂಡಿಲ್ಲದಿರುವವನು, ಸೈದ್ಧಾಂತಿಕವಾಗಿ ಸಾಯುಧನಾಗಿರುವವನು, ಒಬ್ಬ ನಿಜವಾದ ಪ್ರಜಾಪ್ರಭುತ್ವವಾದಿ ಪಾದ್ರಿಯೇನಾದರೂ ವಿಶ್ವ ಸೃಷ್ಟಿ ಮತ್ತು ದೇವರ ಸಂಶೋಧನೆ ಕುರಿತು ಹೇಳಲಾರಂಭಿಸಿದರೆ ಆಗೇನು ಮಾಡುವುದು? ಸಾಂಪ್ರದಾಯಿಕ ಪಾದ್ರಿಯನ್ನು ಖಂಡಿಸಿ, ಹೊರದೂಡಿ, ಬಹಿರಂಗಗೊಳಿಸುವುದು ಸುಲಭ; ಆದರೆ ಈ ಹೊಸ ರೀತಿಯ ಪಾದ್ರಿ ಇದ್ದಾನಲ್ಲ, ಅವನನ್ನು ಹೊರದೂಡುವುದು ಅಷ್ಟು ಸರಳವಲ್ಲ, ಅವನನ್ನು ಬಹಿರಂಗಗೊಳಿಸುವುದು ಸಾವಿರ ಪಟ್ಟು ಹೆಚ್ಚು ಕಷ್ಟದ ಕೆಲಸ. ಅವನನ್ನು ಖಂಡಿಸಲು ಯಾವ ಅಲ್ಪಮತಿಯೂ ಮುಂದಾಗುವುದಿಲ್ಲ: ಅವನೆಷ್ಟೇ ಚಂಚಲ ಬುದ್ಧಿಯವನಾಗಿದ್ದರೂ ಸಹ.

ಹೀಗಿದ್ದೂ ರಷ್ಯದ (ರಷ್ಯದ ಏಕೆ, ಇಟಲಿಯವರೇನೂ ಸ್ಥಿರಚಿತ್ತರಲ್ಲವಲ್ಲ!) ಚಂಚಲ ಸ್ವಭಾವದ, ಪುಷ್ಟಿಯುತವಾಗಿ ಬೆಳೆಯದಿರದ, ಜನಸಾಮಾನ್ಯರ ಬುದ್ಧಿಗೆ ಗೊಂದಲ ಹುಟ್ಟಿಹಾಕುತ್ತಿದ್ದೀಯಲ್ಲಾ ನೀನು, ಸರಿಯೆ? ಸಿಹಿಯಾದ ವಿಷವನ್ನವರಿಗೆ

ಉಣಿಸುವುದು ಉಚಿತವೆ? ಆ ವಿಷವನ್ನು ವರ್ಣರಂಜಿತ ಬತ್ತಾಸು ಎಂದು ಅವರಿಗೆ ತಿನಿಸಲು ನಿನಗೆ ಮನಸ್ಸು ಹೇಗೆ ಬಂತು? ಅಯ್ಯೋ, ಇದು ತೀರ ಘೋರ.

ನೀನು ಹೇಳುತ್ತೀಯೆ: "ಸ್ವ-ವಿಮರ್ಶೆಗೆ ಬದಲಾಗಿ ನಾವು ಆತುಕೊಂಡಿರುವ ಸ್ವ-ಅವಮಾನದ ಭಾವವನ್ನು ಇನ್ನು ಬಿಟ್ಟುಬಿಡೋಣ", ಎಂದು.

ಆದರೆ ನೀನು ಹೇಳುವ, ದೇವರನ್ನು ಕಟ್ಟಿಕೊಳ್ಳುವ ಪ್ರವೃತ್ತಿಗಿಂತಲೂ ಹೆಚ್ಚು ಸ್ವ-ಅವಮಾನದ ಕ್ರಿಯೆ ಬೇರಿನ್ನೇನು ಬೇಕು? ದೇವರನ್ನು ಕಲ್ಪನೆ ಮಾಡಿಕೊಳ್ಳುವುದಾಗಲಿ, ಹಾಗೆ ಕಲ್ಪನೆ ಮಾಡಿಕೊಳ್ಳುವುದನ್ನು ಸಹಿಸುವುದಾಗಲಿ ತನ್ನನ್ನು ತಾನು ಅವಮಾನಕ್ಕೆ ಗುರಿಮಾಡಿಕೊಂಡ ಹಾಗೆಯೇ ಸರಿ. ಏಕೆಂದರೆ, ಅಂತಹ ಸಂದರ್ಭದಲ್ಲಿ ವ್ಯಕ್ತಿಯು ಕ್ರಿಯೆಯಲ್ಲಿ ತೊಡಗುವ ಬದಲು ಸ್ವ-ಚಿಂತೆ, ಸ್ವ-ಮೆಚ್ಚಿಗೆ, ಇದರಲ್ಲೇ ತೊಡಗಿದಂತಾಗುತ್ತದೆ. ದೇವರನ್ನು ಕಟ್ಟಿಕೊಳ್ಳುವ ಹೆಸರಿನಲ್ಲಿ 'ಅಹಂ' ಎಂಬುದನ್ನು ಬಹಳ ಕೆಳಮಟ್ಟದ ರೀತಿಯಲ್ಲಿ ಆ ವ್ಯಕ್ತಿಯು ವಿಜೃಂಭಿಸಿಕೊಳ್ಳುತ್ತಿರುತ್ತಾನೆ. ವ್ಯಕ್ತಿಯ ಮಟ್ಟದಲ್ಲಿ ಹೇಗೇ ಇರಲಿ, ಸಮಾಜದ ದೃಷ್ಟಿಯಿಂದ ನೋಡಿದರೆ ದೇವರನ್ನು ಸೃಷ್ಟಿಸಿಕೊಳ್ಳುವ ಎಲ್ಲ ಪ್ರಕ್ರಿಯೆಗಳೂ ಮಂದಬುದ್ಧಿಯ ಅಸಂಸ್ಕೃತನೊಬ್ಬನ ಮೋಹದ ಸ್ವ-ಚಿಂತೆಯ ಸ್ವರೂಪದ್ದೇ ಆಗಿರುತ್ತದೆ. ಬಂಡವಳಿಗ ಸಂಪ್ರದಾಯದ ಲಕ್ಷಣ ಇದು. ಅದು ಯೆಹೂದಿ, ಇಟಲಿಯವನು, ಇಂಗ್ಲಿಷಿನವನು, ರಷ್ಯದವನು, ಎಂಬ ಭೇದವಿಲ್ಲದೆ ಎಲ್ಲರಿಗೂ ಅನ್ವಯವಾಗುವ ಲಕ್ಷಣ.

ನಿನ್ನ ಲೇಖನ ಪದೇ ಪದೇ ಓದಿದಾಗ ನೀನೆಲ್ಲಿ ಎಡವಿದೆಯೆಂಬುದನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ. ಇದಾವ ರೀತಿಯ ಪಾಪನಿವೇದನೆ? ಅದನ್ನು ಸ್ವತಃ ನೀನೇ ಮಾನ್ಯ ಮಾಡುತ್ತಿರಲಿಲ್ಲವಲ್ಲ! ಅಥವಾ ಅದು ಬೇರೇನೋ ಇರಬಹುದೆ? ದುಡಿಯುವ ಜನರ ದೃಷ್ಟಿಕೋನವನ್ನು ಕೈಬಿಟ್ಟು ನೀನೇನಾದರೂ ಸಾಮಾನ್ಯಾರ್ಥದ 'ಪ್ರಜಾಪ್ರಭುತ್ವ'ಕ್ಕೆ ಮಾರುಹೋಗಿ ಅದಕ್ಕೆ ಒಗ್ಗಿಕೊಳ್ಳಲು ಹೀಗೇನಾದರೂ ವಕ್ರತೆಯನ್ನು ಅಂಗೀಕರಿಸಿರುವೆಯಾ? ಇದೇ ನಿನ್ನ ಜನಪ್ರಿಯ ಮಾದರಿಯ ವಿಶ್ಲೇಷಣೆ ಎನ್ನಬಹುದೆ? ಅಂದರೆ, ಸದ್ಯದಲ್ಲಿ ನೀನು ಆ ಮಂದಮತಿಗಳ ಪೂರ್ವಗ್ರಹ ಪೀಡೆಗಳನ್ನು ನಿನ್ನದಾಗಿಸಿ ಕೊಂಡಿರುವೆ ಎಂದರ್ಥವೆ? ಹಾಗಿದ್ದರೆ ಅದು ಸರ್ವಥಾ ತಪ್ಪು ದೃಷ್ಟಿಕೋನ. ತಥಾಕಥಿತ ಪ್ರಜಾಪ್ರಭುತ್ವ ದೇಶಗಳ ಸಂದರ್ಭದಲ್ಲಿ ಸಹ ಅದು ಅಗ್ರಾಹ್ಯವೆಂದು ಹಿಂದೆಯೇ ಹೇಳಿದ್ದೇನೆ. ಅದೂ ದುಡಿಯುವ ಜನರ ಪರವಾಗಿರುವ ನಿನ್ನಂತಹ ಸಾಹಿತಿಯಿಂದ ಅದನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಇನ್ನು ರಷ್ಯದ ಮಟ್ಟಿಗೆ ಹೇಳುವುದಾದರೆ ಆ ರೀತಿಯ ವಿಶ್ಲೇಷಣೆಯು ಪ್ರಮಾದಕ್ಕೆ ಎಡೆಮಾಡಿಕೊಡುತ್ತದೆ. ಅತ್ಯಂತ ತೀವ್ರ ಪ್ರತಿಗಾಮಿಗಳು ಕೂಡ ನಿನ್ನ ನಿಲುವನ್ನು ಹುರುಪಿನಿಂದ ಸಮರ್ಥಿಸಿಯಾರು. ಬಂಡವಳಿಗರ ಆಶಯ ಮತ್ತು ದುಡಿಯುವ ಜನರ ಆಶಯ, ಎರಡೂ ಒಂದೇ ಎಂಬ ಭ್ರಮೆಯನ್ನೇಕೆ ನೀನು ಪೋಷಿಸಹೊರಟಿದ್ದೀಯೆ? ಬಂಡವಳಿಗರ ಪ್ರಜಾಪ್ರಭುತ್ವ ಮತ್ತು ದುಡಿಯುವ ಜನರ ಪ್ರಜಾಪ್ರಭುತ್ವ, ಇವೆರಡರ ನಡುವೆ ಅಗಾಧ ವ್ಯತ್ಯಾಸಗಳಿವೆಯೆಂಬುದನ್ನು ಮರೆಮಾಚುವುದು ನಿನಗೆ ಶೋಭಿಸುವುದಿಲ್ಲ.

ಅದೆಲ್ಲಾ ಹಾಗಿರಲಿ, ನಿನ್ನ ಆರೋಗ್ಯವನ್ನು ಚೆನ್ನಾಗಿ ನೋಡಿಕೋ. ಲಭ್ಯವಿರುವ ಅತ್ಯಂತ ಉತ್ತಮವಾದ ವೈದ್ಯಕೀಯ ತಪಾಸಣೆಯನ್ನು ದಯವಿಟ್ಟು ಪಡೆ. ನೆಗಡಿ, ಶೀತ, ಇಂತಹ ಬಾಧೆಗಳಿಲ್ಲದೆ ಚಳಿಗಾಲದಲ್ಲಿ ಪ್ರಯಾಣ ಬೆಳೆಸಲು ನಿನ್ನ ಆರೋಗ್ಯ ಉತ್ತಮವಾಗಿರಬೇಕಲ್ಲವೆ?

ನಿನ್ನವ,
ವಿ. ಉಲ್ಯಾನೋವ್

# ಯಜ್ಞ

ದೇವಂಗಳದ ಹಾಸುಗಲ್ಲ ಮೇಲೆ
ಎಷ್ಟೊಂದು ಹೆಜ್ಜೆಗಳು.

ಆ ಗೋಡೆಗಳ ಮೇಲೆ
ಮೆರೆವ ಚಿತ್ರಗಳಲ್ಲಿ
ಅವಳ ಕೌಮಾರ್ಯದ ನೆನಪು.

ಆ ಗುಲಾಬಿ ಕೈಗಳು
ಹೆಣೆವ ಹೂಮಾಲೆಗಳಲ್ಲಿ
ಅವಳ ಕನಸುಗಳದೇ ಪರಿಮಳ.

ಮೊಳಗಿ ಕರಗುವ ಶಂಖ ಜಾಗಟೆಗಳ
ನಾದ ವರ್ತುಲದಲ್ಲಿ
ಅವಳ ಬಯಕೆಗಳದೇ ಸದ್ದು.

ನೆರೆವ ಭಕ್ತರ ಬೊಗಸೆಸಂದಿಯಲ್ಲಿ
ಹರಿದು ಹೋದ ತೀರ್ಥದಲ್ಲಿ
ಅವಳ ಕಣ್ಣೀರಿನ ಕಡಲು.

ಉರಿವ ದೀಪದ ಸುರುಸುರುಳಿ
ಕರಿಧೂಪದಲ್ಲಿ, ಅವಳ
ಕಮರಿಹೋದ ಬದುಕಿನದೇ ಚಿತ್ರ.

ದಿನಾ ದಿನಾ ಚಿತೆ ಸೇರುವ
ಅವಳ ಹಸಿಹಸಿರು ಬಯಕೆಗಳು
ಅಪರಿಚಿತರ ಕೈಯೊಳಗೆ ನಲುಗಿದ
ಅವಳ ಬದುಕಿನ ಅಧ್ಯಾಯಗಳು.



ಉಡಿಲೊಳಗೆ ನೂರೆಂಟು ಆಸೆಕೆಂಡ
ಧಗಧಗಿಸಿ ಉರಿಯದೇ...
ತನ್ನುಡಿಲನ್ನೇ ಸುಟ್ಟು ಬೂದಿಯಾಗಿಸಿದೆ.

ತುಂಬಿ ನಿಂತ ಗಂಗೆ, ತುಂಗೆ, ಯಮುನೆಯರ
ಮಡಿಲಿನಲ್ಲಿ; ಮಲಿನ ಮೌಲ್ಯಗಳಾಗಿ
ಸಂಪ್ರದಾಯದ ಕಟಕಟೆಯಲ್ಲಿ ನಡೆವ
ಅಪವಿತ್ರ ಯಜ್ಞಕ್ಕೆ ಸಾಕ್ಷಿ ನುಡಿಯುತ್ತವೆ.

ಹೇಮಾ ವೆಂಕಟ್, ಹವ್ಯಾಸಿ ಪತ್ರಕರ್ತೆ, ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೯

ಕಳೆದ ಐದು ಶತಮಾನಗಳಲ್ಲಿ ಜಗತ್ತಿನ ಎಲ್ಲ ಲೌಕಿಕ ಕ್ಷೇತ್ರಗಳಲ್ಲೂ ಎಂದರೆ ಭೂಮಿ, ಆಕಾಶ, ಗ್ರಹ, ನಕ್ಷತ್ರ, ವಿಶ್ವ, ಔಷಧಿ, ರೋಗಗಳು, ವಿಜ್ಞಾನ-ಜನನ ಮರಣ-ಜೀವಶಾಸ್ತ್ರ – ಎಲ್ಲ ಕ್ಷೇತ್ರಗಳಲ್ಲೂ ತಿಳುವಳಿಕೆ ತೀವ್ರವಾಗಿ ಬೆಳೆದಿದೆ. ಇದರಿಂದಾಗಿ ಭೂಮಿ, ಪ್ರಾಣಿ, ಮಾನವನ ಉತ್ಪತ್ತಿ, ಭೂಮಿಯ ಆಕಾರ, ಗ್ರಹಗತಿ, ವಿಕಾಸ – ಈ ವಿಷಯಗಳಲ್ಲಿ ಧರ್ಮಗ್ರಂಥಗಳು ಹೇಳಿದ್ದು ತಪ್ಪೆಂದು ಸಾಬೀತಾಗಿದೆ.

# ಕೆಲವು ಪ್ರಶ್ನೆಗಳು

ಪಿ. ಎಲ್. ರಾವ್

ಅವನೊಬ್ಬ ಕಾಲೇಜು ಪದವೀಧರ. ಬಾಲ್ಯದಲ್ಲಿ ಸಮಾಜದಲ್ಲಿನ ಧರ್ಮ, ನಂಬಿಕೆ, ಆಚಾರ-ವಿಚಾರ, ಪೂಜೆ-ಆರಾಧನೆಗಳನ್ನು ಸಾಕಷ್ಟು ಕಂಡವನು, ಪ್ರಶ್ನಿಸದೆ ಅವುಗಳಲ್ಲಿ ಭಾಗವಹಿಸಿದವನು. ಮುಂದಕ್ಕೂ ನಾವೆಲ್ಲರೂ ಮಾಡುತ್ತಿರುವಂತೆ ಸ್ವಬುದ್ಧಿ ಯಾ ಮೆದುಳನ್ನು ಅನಾವಶ್ಯಕವಾಗಿ ವ್ಯಯಿಸದೆ, ಯಾವುದನ್ನೂ ಪ್ರಶ್ನಿಸದೆ ಜೀವಿಸುತ್ತಾ ಸುತ್ತಲಿನ ಸಮಾಜದಲ್ಲಿ ಒಂದಾಗಿಬಿಡುತ್ತಿದ್ದನು. ಆದರೆ ಬಾಲ್ಯದ ಕೆಲ ವರ್ಷಗಳ ಕ್ರಿಶ್ಚಿಯನ್ ಶಾಲೆಯಲ್ಲಿನ ಓದು, ಮಧ್ವ ಮಠ ಮತ್ತು ರಾಮಕೃಷ್ಣ ಮಠದಲ್ಲಿ ವಸತಿ, ಹಿಮಾಲಯದಲ್ಲಿ ವಿವಿಧ ಪಂಥಗಳ ದೇವಾಲಯಗಳ ಪ್ರವಾಸ, ಕೆಲ ತತ್ತ್ವವಾದಿಗಳೊಂದಿಗೆ ನಿಕಟ ಸಂಪರ್ಕ – ಇವುಗಳೆಲ್ಲದರ ಮಿಶ್ರಿತ ಪ್ರತಿಕ್ರಿಯೆಯಿಂದಾಗಿ ಅವನ ಮನಃಸ್ಥಿತಿ ಮೆಲ್ಲ ಮೆಲ್ಲನೆ ಬದಲಾಗುತ್ತಾ ಬಂತು. ಪರಿಣಾಮವಾಗಿ ಲೌಕಿಕ ಮತ್ತು ಧಾರ್ಮಿಕ ಪರಿಸರದಲ್ಲಿ ಪರರೆಂದ ಯಾವ ಮಾತು, ಬರಹ ಮತ್ತು ವಚನವನ್ನು ತನ್ನ ವಿವೇಚನಾ ಶಕ್ತಿ ಒಪ್ಪದಿದ್ದಲ್ಲಿ ನಿರಾಕರಿಸಲಾರಂಭಿಸಿದನು. ಅರ್ಥವಾಗದ (ಅವ್ಯಕ್ತವಾದ)ಯಾವ ವಿಷಯಕ್ಕೂ ತಲೆಹಾಕನು, ಬೆಲೆಕೊಡನು. ಗಾಢವಾದ ವಿಚಾರಗಳಿಂದೊಳಗೂಡಿದ ಧಾರ್ಮಿಕ ಗ್ರಂಥಗಳು, ಮತಾಚರಣೆಗಳು, ಗುರುಗಳ ಪ್ರವಚನಗಳು, ಸಂಸಾರದ ಸಮಸ್ಯೆಗಳನ್ನು ಕ್ಷಣ ಮಾತ್ರದಲ್ಲಿ ಪರಿಹರಿಸುವವೆನ್ನುವ ವಾದಗಳು ಅವನಿಗಾಗವು. ಹಿತಾಕಾಂಕ್ಷಿಗಳು ಕೆಲವರನ್ನು ನಂಬಲೆತ್ನಿಸಿದರೂ ಏನೊಂದೂ ಕಪಟವಿಲ್ಲದೆ ಬರೇ ಸೀದಾ ಸ್ವಭಾವದವನಾದ ಅವನಿಂದದು ಸಾಧ್ಯವಾಗದು. "ಅವ್ಯಕ್ತ ಶಕ್ತಿಯಲ್ಲಿ ನಂಬಿಕೆ, ವಿಶ್ವಾಸ" ಇಂತಹ ಶಬ್ದಗಳು ಇತರರಲ್ಲಿ ಬೀರುವಂತೆ ಅವನ ಮೇಲೆ ಪ್ರಭಾವ ಬೀರಲೊಲ್ಲವು. ಕೆಲ ಗುರು, ಸಾಧುಗಳಿಗೆ ತನ್ನ ಪ್ರಶ್ನೆಗಳನ್ನೊಡ್ಡಿದಾಗ ಉತ್ತರಿಸುವ ಬದಲಾಗಿ ಅವರು ಅವನಿಂದ ಮುಖ ತಿರುವಿದರು. ಇವೆಲ್ಲದರ ಪರಿಣಾಮವಾಗಿ ಎಲ್ಲ ಸನ್ನಿವೇಶಗಳಲ್ಲೂ ತನ್ನದೇ ಆದ ವಿಚಾರಧಾರೆಯನ್ನಾಗಿಸಿಕೊಂಡನು. ವಿಚಿತ್ರವೆಂದು ಕಾಣಬಹುದಾದ ಅವನ ಕೆಲ ಪ್ರಶ್ನೆಗಳನ್ನು ನೀವೂ ಸ್ವಲ್ಪ ವಿಚಾರಿಸುವಿರಾ ? – ನಾವೆಲ್ಲ ಒಪ್ಪುವಂತೆ, ಸೂರ್ಯಮಂಡಲ ಮತ್ತು ಭೂಮಿಯ ಪ್ರಾಯ ೪೮೦೦ ಮಿಲಿಯನ್ ವರ್ಷ (MY). ಮೊತ್ತಮೊದಲ ಜೀವಿಗಳು ೮೦೦ರಿಂದ ೯೦೦ MYಯಲ್ಲಿ ಹುಟ್ಟಿದವು. ೩೦ MY ಹಿಂದೆಯಷ್ಟೆ ಕೈ, ಕಣ್ಣು, ಕಿವಿಯನ್ನು ಉಪಯೋಗಿಸುವ ಜಾತಿಗಳು (higher primates) ಬಂದವು. ನಂತರ ಎರಡು ಕಾಲಲ್ಲಿ ನಡೆಯುವ ಜೀವಿಗಳು (huminids). – ಇವು ಗುಣಮಟ್ಟದಲ್ಲಿ ಸುಧಾರಿಸುತ್ತಾ ಆದಿಮಾನವ (IMY), ಅವನ ಮೆದುಳಿನ ಗಾತ್ರ, ಎತ್ತರ ಬೆಳೆದಂತೆ ಇಂದಿನ ಯೋಚಿಸಬಲ್ಲ ಮಾನವ (thinking man) ಎಂದರೆ ನಮ್ಮ ಜಾತಿಯ ಉದಯ (೫೦೦೦೦-೩೦೦೦೦ YMS). ನಂತರದ ವರ್ಷಗಳಲ್ಲಿ ತನ್ನ ಉಳಿವಿಗಾಗಿ ಹೆಣಗಾಡುತ್ತಿದ್ದರೂ ಈ ವಂಶವು ಬೆಳೆಯಿತು – ಅಷ್ಟೇ ಅಲ್ಲ, ವಿಕಾಸವಾದದ ಸಮರದಲ್ಲಿ ಕೆಲ ಜೀವಜಾತಿಗಳು ಅಲೆಯುತ್ತಿರುವಾಗ ಮಾನವನ ಮೆದುಳು ಹಿರಿದಾಗುತ್ತಾ ಈ ದಿನ, ಇವನು ಜಗತ್ತನ್ನು ಹಾಳುಮಾಡುತ್ತಾ, ಇಚ್ಛಿಸಿದಲ್ಲಿ ಪೂರ್ತಿ ನಾಶಪಡಿಸುವಷ್ಟು ಶಕ್ತಿ ಹೊಂದಿದ್ದಾನೆ. ಇದು ಬರೇ ಕಲ್ಪನೆಯಲ್ಲ – ಕಳೆದ ಐದು ವರ್ಷಗಳಲ್ಲಿ ಇರಾಕ್, ಅಮೇರಿಕಾ, ಪಾಕಿಸ್ತಾನದ ಅಧ್ಯಕ್ಷರು ಕೇವಲ ಒಂದು ಗುಂಡಿಯನ್ನು ಒತ್ತಿ ಹೀಗೆ ಮಾಡಬಹುದಾದ ಕ್ಷಣವು ತುಂಬಾ ದೂರವಿರಲಿಲ್ಲ. ಇದಕ್ಕೆ ಕಾರಣವೇನು ?

ವಿಕಾಸದ ಈ ಹಂತದಲ್ಲಿ ನಡೆದ ಒಂದು ವಿಪರ್ಯಾಸವೆಂದರೆ ತನ್ನ ಈ ಸುಧಾರಿತ ಮೆದುಳನ್ನು ಜಗತ್ತಿನ ಒಳಿತಿಗಾಗಿ ಉಪಯೋಗಿಸುವ ಬದಲಿಗೆ ಅವನು ಮಾಡಿದ ಮೊದಲ ಕೆಲಸ: ಭಯ, ರೋಗ, ಶತ್ರು, ಆಕ್ರಮಣ, ಮರಣ, ನೈಸರ್ಗಿಕವಾಗಿ ಉಂಟಾಗುವ ನೆರೆ, ಬರ, ಭೂಕಂಪ, ಬಿರುಗಾಳಿ – ಇವುಗಳಿಂದ ರಕ್ಷಣೆ ಮತ್ತೆ ತನ್ನ ಏಳಿಗೆಗಾಗಿ ಕೆಲ ಅದೃಶ್ಯ ಶಕ್ತಿಗಳನ್ನು ಕಲ್ಪಿಸಿ, ಪೂಜಾಕ್ರಮಗಳನ್ನು ವಿಧಿಸಿ ಅವನ್ನು ಆರಾಧಿಸಲಾರಂಭಿಸಿದುದು. ಗ್ರೀಕ್, ರೋಮನ್, ಶಿಂಟೋಯಿಸಂ, ಜೋಡಾಯಿಸಂ ಮತ್ತು ಹಿಂದೂ ಧರ್ಮಗಳೆಲ್ಲವೂ ಮನುಷ್ಯನ ಈ ಅವಶ್ಯಕತೆಗಳನ್ನು ಪೂರೈಸಲು ರೂಪಿತವಾಗಿದ್ದವು. ಸಮಾಜವು ಶ್ರಮಬದ್ಧವಾಗುತ್ತಾ ಬಂದು, ಶತ್ರುಭಯ, ದಿನನಿತ್ಯ ಆಹಾರಕ್ಕೋಸ್ಕರ ಓಡಾಟ ಎಲ್ಲ ಕಡಿಮೆಯಾದಂತೆ, ಸಂಸ್ಕೃತಿ ಬೆಳೆದಂತೆ ಅವನು ಈ ಶಕ್ತಿಗಳಿಗೆ ಹೆಸರು, ಗುಣ, ರೂಪಗಳನ್ನು ಕಲ್ಪಿಸಿ ಇವುಗಳ ಸುತ್ತ ವಿವಿಧ ತತ್ತ್ವ, ನೀತಿಕಥೆಗಳನ್ನು ಪ್ರತಿಪಾದಿಸಲಾರಂಭಿಸುತ್ತಾ ತಾನೇ ಹೆಣೆದ ಈ ನಂಬಿಕೆಗಳ ಬಲೆಗೆ ಬಿದ್ದುದಲ್ಲದೆ, 'ಧಾರ್ಮಿಕ'ವೆಂದೆನ್ನುವ ತನ್ನ ಭಾವನೆಗಳನ್ನು ತಾನು ಗೆದ್ದವರ, ತನಗಿಂತ ಬಲಹೀನರ ಮೇಲೆ ಹೇರಲಾರಂಭಿಸಿದನು. ಈ ಧೋರಣೆ ಈಗ ಎಷ್ಟರಮಟ್ಟಿಗೆ ಬೆಳೆದಿದೆ ಎಂದರೆ ಧರ್ಮಕ್ಕಾಗಿ ತನ್ನ ಜೀವವನ್ನೂ ಸಹ ಬಲಿಕೊಡುವನು. ಈ ಕಾಲದ ಯುದ್ಧಗಳು, ಕಲಹಗಳು (ಉದಾ: ಅಮೇರಿಕ × ಇರಾಕ್, ಆಫ್ಘಾನಿಸ್ತಾನ್; ಅರಬ್ × ಯಹೂದ್ಯ; ಇಂಡಿಯಾ × ಪಾಕಿಸ್ತಾನ್; ಅಮೇರಿಕಾ × ಕ್ಯೂಬಾ) ಪ್ರದೇಶ, ಗಡಿ ವಿವಾದ ಅಥವಾ ಹಸಿವು ಪರಿಹಾರಕ್ಕಾಗಿಯಲ್ಲ – 'ಧರ್ಮ' ರಕ್ಷಣೆಗಾಗಿ ನಡೆಯುತ್ತವೆ. ಚರಿತ್ರೆಯಲ್ಲಿ ತಮ್ಮ ದೇವರನ್ನು ಉಳಿಸುವುದಕ್ಕಾಗಿ ಬಲಿಯಾದಷ್ಟು ಜನರು ಬೇರಾವ ಕಾರಣಕ್ಕೂ ಆಗಿಲ್ಲ. ಜೀವ ಉತ್ಪತ್ತಿ ಆದಂದಿನಿಂದ (೮೦೦-೯೦೦ MY) ಜಗತ್ತಲ್ಲಿ ಸಾವಿರಾರು ಜೀವಜಾತಿಗಳು ಒಂದು ಅದೃಶ್ಯ ಶಕ್ತಿಯ ಆಧಾರ ಇಲ್ಲದೆ ತಮ್ಮದೇ ಆದ ಜೀವನಶೈಲಿಯಲ್ಲಿ ಸ್ವತಂತ್ರವಾಗಿ ಬದುಕಿದವು. ಶ್ರೇಷ್ಠಜಾತಿಯ ಮಾನವನು ಕಳೆದ ೧೦೦೦೦ ವರ್ಷಗಳಲ್ಲಿ ಇವುಗಳಿಂದ ಕಲಿಯುವುದನ್ನು ಬಿಟ್ಟು ತನ್ನನ್ನು ಒಮ್ಮೆಲೇ ಧಾರ್ಮಿಕ ಶಕ್ತಿಗಳಿಗೆ ಅಧೀನನಾಗಿಸಿಕೊಳ್ಳಲು ಕಾರಣವೇನು ? ಯೋಚನಾಶಕ್ತಿಯ ಬೆಳವಣಿಗೆಗೂ, ಮಾನಸಿಕ ಗುಲಾಮಗಿರಿ, ಅಚಲವಾದ ಅಪರಿಪಕ್ವ ಭಾವನೆಗಳು ಮತ್ತೆ ಪರಮತಗಳ ಅಸಹನೆ – ಇವೆಲ್ಲ ಜಾಸ್ತಿ ಆಗುವುದಕ್ಕೂ ಸಂಬಂಧ ಇದೆಯೆ ?

ಒಬ್ಬ ಹಿಂದೂ ತನ್ನ ಮುಕ್ತಿಗಾಗಿ ಒಂದು ಮಾರ್ಗವನ್ನರಸಿದರೆ, ನೆರೆಮನೆಯ ಮುಸ್ಲಿಂ ಯಾ ಕ್ರಿಶ್ಚಿಯನ್ ಬೇರೆಯೇ ದಾರಿ ಹಿಡಿಯುವನು. ರಷ್ಯಾ, ಚೈನಾದ ಕಮ್ಯುನಿಸ್ಟ್ ಜನರು ಮತ್ತೆ ನಾಸ್ತಿಕವಾದಿಗಳು (ಎಲ್ಲ ಸೇರಿ ಜಗತ್ತಿನ ಶೇಕಡ ೩೦ ಅಂಶ) ಎಲ್ಲ ಮಾರ್ಗಗಳನ್ನೂ ಅಲ್ಲಗಳೆದು ಕೂಡ ಮೇಲೆ ಬರುತ್ತಿದ್ದಾರೆ. ನಮ್ಮ ಅತಿ ನಿಕಟವರ್ತಿಗಳಾದ ಗೊರಿಲ್ಲಾ, ಕೋತಿ, ಕಪಿ, ಚಿಂಪಾಂಜಿಗಳು ಯಾವೊಂದೂ ಆಶ್ರಯವಿಲ್ಲದೆ ಇನ್ನೂ ನಮ್ಮೆದುರಲ್ಲಿ ಜೀವಿಸುತ್ತಿರುವಾಗ ಮಾನವನಿಗೇಕೆ ಬೇಕು ನಂಬಿಕೆ ಎಂಬ ಕವಚ ? ಇಲ್ಲಿಯೂ ಒಬ್ಬ ಹಿಂದೂವಿಗೆ ೬ ಪಟ್ಟು ಜನರು ಬೇರೆ ತೆರನಾದ ನಂಬಿಕೆಯೊಂದಿಗೆ ಮತ್ತೆ ೩೦ ಕೋಟಿ ಜನರು ಇವೆಲ್ಲವುಗಳಿಂದ ಹೊರಗಿದ್ದೂ ಜೀವಿಸುತ್ತಿರುವಾಗ ಹಿಂದೂ ಯಾ ಮುಸ್ಲಿಂ ಸತ್ಯ, ಮೋಕ್ಷಕ್ಕೆ ತನ್ನದೇ ಸರಿಯಾದ ರಸ್ತೆ ಎಂದು ಸಾಧಿಸುವುದು ಎಷ್ಟು ಸರಿ ?

ತಮ್ಮ ಮಹಾಶಕ್ತಿಯೇ ಅನಂತಾನಂತ, ಸರ್ವವ್ಯಾಪಿ ಎಂದು ಎಲ್ಲ ಮತಸ್ಥರೂ ವಾದಿಸುತ್ತಾರೆ. ಅಂತಹುದೇನಾದರೂ ಇದೆಯೋ, ಜಗತ್ತು ತಾನಾಗಿ ನಡೆಯುತ್ತಿದೆಯೋ – ಅದರ ಬಗ್ಗೆ ವಿವಾದಗಳಿವೆ. ಆದರೆ ಈ ಮಾನವನು ಭೂಮಿಯ, ವಿಶ್ವದ, ಬ್ರಹ್ಮಾಂಡದ ಎಷ್ಟು ತುಚ್ಛ ಅಂಗವೆಂದರಿತರೆ, ಅಂತೆಯೇ ನಮ್ಮ ಹಿಮಾಲಯ, ಅಮೇರಿಕಾದ ಗ್ರ್ಯಾಂಡ್ ಕ್ಯಾನಿಯನ್ ಕಣಿವೆ ಪರ್ವತ

ಪ್ರದೇಶಗಳು ಎಷ್ಟು ಪ್ರಳಯ, ಭೂಕಂಪಗಳನ್ನು ಕಂಡಿವೆ ಎಂಬಂತಹ ವಿಷಯಗಳನ್ನವಲೋಕಿಸಿದರೆ ವಿಶ್ವವು ಯಾವುದೇ ಕಾನೂನಿಗೊಳಪಡದೆ ತನ್ನದೇ ಆದ ಧಾಟಿಯಲ್ಲಿ ನಡೆಯುತ್ತಿರುವಂತೆ ಕಾಣುತ್ತಿದೆ. ಒಂದು ವೇಳೆ ಅಂತಹ ಶಕ್ತಿ ಇದೆ ಎಂದರೂ ಅದು ಅನೇಕವಾಗಿರಲು ಸಾಧ್ಯವಿಲ್ಲ. ಹಾಗಾದರೆ ಈ ಶಕ್ತಿ ಶಿವನೋ, ಬ್ರಹ್ಮನೋ, ಕ್ರಿಸ್ತನೋ, ಅಲ್ಲಾನೋ, ಬೇರಿನ್ನಾರೋ ? ಮುಂದಿನ ಪ್ರಶ್ನೆ: ಹಿಂದೂ, ಗ್ರೀಕ್ ಮತ್ತೆ ರೋಮನ್ ಮತಗಳಲ್ಲಿ ಪ್ರಚಲಿತವಾಗಿರುವ ಬಹುದೇವತೆಗಳ ಅರ್ಥವೇನು ? ಇವೆಲ್ಲ ಬರೇ ಕಾಲ್ಪನಿಕ ಭಾವನೆಗಳೆಂದು ಒಪ್ಪುವುದಾದರೆ ಈ ಹೆಸರಲ್ಲಿ ನಡೆದ ಯುದ್ಧ,ನಾಶಗಳಿಗೆ ಹೊಣೆ ಯಾರು ?

ಈ ಚಿಂತನೆ ಮುಂದುವರಿದಂತೆ ಅವ್ಯಕ್ತದಲ್ಲಿ ನಂಬಿಕೆ, ವಿಶ್ವಾಸ ಮತ್ತು ಪ್ರಾರ್ಥನೆ – ಇವೆಲ್ಲ ತಮ್ಮ ಪರಿಚಿತ ಅರ್ಥವನ್ನು ಕಳಕೊಳ್ಳುತ್ತವೆ. ಯಾಕೆಂದರೆ ನಮ್ಮ ಅರಿವಿಗೆ ಹೊರತಾದ ಯಾವುದರೊಂದಿಗಾದರೂ ಜೀವನ ಮುಡಿಪಾಗಿಡುವ ಮಟ್ಟದ ನಂಬಿಕೆ ಸಾಧ್ಯವೆ? ಸಣ್ಣ ಹುಡುಗಿಯ ಬಾಯಿಯಿಂದ "ದೇವರಲ್ಲಿ ನಂಬಿಕೆ ಇದೆ" ಎನ್ನಿಸುವಾಗ ಇದು ಅವಳ ನಾಲಗೆಯ ತುದಿಯಿಂದ ಬಂದ ಶಬ್ದವೋ, ಹಿರಿಯರ ಗಿಳಿಪಾಠದ ಫಲ ಎನ್ನೋಣವೇ ? ಅದು ಬಿಡಿ; ೬೦ ವರ್ಷದ ವಿದ್ಯಾವಂತನಾದರೂ ನಂಬಿಕೆ ವಿಶ್ವಾಸ ಎಂದರೆ ಏನು ಎಂದು ತಿಳಿದಿದ್ದಾನೋ ? ಚರಿತ್ರೆಯಲ್ಲಿ ನಾವು ಕೇಳಿರುವ ಮೀರ (ಕೃಷ್ಣ), ಭದ್ರಾಚಲ ರಾಮದಾಸ, ತುಳಸೀದಾಸ ಮತ್ತು ತ್ಯಾಗರಾಜರು (ಎಲ್ಲರೂ ರಾಮಭಕ್ತರು) ಮತ್ತು ರಾಮಕೃಷ್ಣ (ದೇವಿ ಕಾಳಿ)ರ ದೃಷ್ಟಾಂತಗಳು ಎಲ್ಲಾ ಒಂದು ತೆರನಾದ ಮನೋವಿಕಲ್ಪದ ಪರಮಾವಧಿಯೇ ಹೊರತು ಬೇರೇನಿಲ್ಲ. ಲೌಕಿಕ ಸಂಬಂಧದಲ್ಲಾದರೋ ಪರಮ ಮಿತ್ರ, ಪತಿ, ಪತ್ನಿ ಮತ್ತೆ ತಾಯಿಯೊಂದಿಗೆ ಪ್ರೀತಿ, ವಿಶ್ವಾಸ ಸಾಧ್ಯ. ಪಾರಮಾರ್ಥಿಕದಲ್ಲಿ ಇದಕ್ಕೆ ಅರ್ಥವಿಲ್ಲ. ಹಾಗಿರುವಾಗ ಜಗನ್ನಿಯಾಮಕಶಕ್ತಿ (ಒಂದಿದ್ದಲ್ಲಿ)ಯೊಂದಿಗೆ ಯಾವುದೇ ತೆರನಾದ ಫಲಾಪೇಕ್ಷಿತ (ಲೋಕಶಾಂತಿ, ಮುಕ್ತಿ, ಸತ್ಯಾನುಭವ ಇಂತಹ ಪಾರಮಾರ್ಥಿಕ ಆಸೆಗಳು ಕೂಡ ಇಲ್ಲಿ ಸೇರಿವೆ) ಸಂಬಂಧ ಹೇಗೆ ಸಾಧ್ಯ ? ಮತ್ತೆ ಯಾವ ಶಕ್ತಿಗೂ, ಸ್ಥೂಲಮಟ್ಟದ ಮತ್ತು ಅತಿ ಸೂಕ್ಷ್ಮಮಟ್ಟದ ಆಡಳಿತ – ಎರಡೂ ಒಟ್ಟಿಗೆ ಎಂದೂ ಸಾಧ್ಯವಿಲ್ಲ. ಯಾಕೆಂದರೆ ಅಂತಹ ಶಕ್ತಿಗೆ ಎಲ್ಲ ಜೀವನಿರ್ಜೀವ ವಸ್ತುಗಳೆಲ್ಲ ಒಂದೇ ಸಮ. ಅಲ್ಲದೆ, ಸೃಷ್ಟಿಯ ಒಂದಂಶವಾದ ಮಾನವನ ಸ್ವಾರ್ಥಾಪೇಕ್ಷಿತ ಆಕಾಂಕ್ಷೆಗಳು ತನ್ನ ನೆರೆಮನೆಯವನಿಂದ ವಿರುದ್ಧವಾಗಿರುತ್ತವೆ. ಹಾಗಾದರೆ ಈ ಉದ್ದೇಶಗಳಿಗಾಗಿ ಪ್ರಾರ್ಥನೆ, ಜಪ ತಪ, ಯಜ್ಞ ಹೋಮಗಳೆಲ್ಲ ಅರ್ಥವಿಹೀನವಲ್ಲವೆ? ಅಮೂಲ್ಯವಾದ ಮಾನವಶಕ್ತಿಯ ದುರುಪಯೋಗವಲ್ಲವೆ? ಎಲ್ಲದಕ್ಕೂ ದೇವರಿಗೆ ಮೊರೆ ಹೋಗುವುದಾದರೆ ಅವನಿಗೆ ಮೆದುಳನ್ನಾದರೂ ಯಾಕಿತ್ತನು ?

ಮಹಾಶಕ್ತಿ ಅಥವಾ ಸತ್ಯ ಎಂಬುದು ಒಂದಿದ್ದಲ್ಲಿ ಅದು ಕರ್ಮ ಮತ್ತು ಕರ್ಮಫಲ, ಕ್ರಿಯೆ ಮತ್ತದರ ಪರಿಣಾಮ, ಸ್ತುತಿಸಿದರೆ ಉಬ್ಬುವುದು – ಇಂತಹ ಭಾವನೆಗಳಿಂದ ಹೊರತಾದುದು, ಅತ್ಯಮೂಲ್ಯವಾದುದು. ಇದನ್ನು ತನ್ನ ಮಟ್ಟಕ್ಕೆ ಎಳೆಯಲೆಳಸಿದ ಮಾನವ ಜಾತಿಯ ಕಲ್ಪಿತ ಶಬ್ದಗಳಾದ ಜೀವಾತ್ಮ, ಪುನರ್ಜನ್ಮ, ಸ್ವರ್ಗ-ನರಕ, ಶ್ರಾದ್ಧ, ಪಿತೃಸಂತರ್ಪಣೆ – ಇವುಗಳಿಗೇನಾದರೂ ಅರ್ಥ ಇದೆಯೋ, ಇವು ಅವನು ವಿವೇಚನೆಯಿಂದ ಪರಾಮರ್ಶಿಸಿದ ಬಳಿಕ ಹುಟ್ಟಿದ ಶಬ್ದಗಳೋ ಅಥವಾ ಮರಣ ಭಯದಿಂದ ಹಿರಿಯರಂದುದನ್ನು ಅವನು ಮರುಕಳಿಸುತ್ತಿದ್ದಾನೋ ? ದುಷ್ಟರು – ಶಿಷ್ಟರೆಂದು ನಿರ್ಧರಿಸಲು ಯಾರು ಯೋಗ್ಯರು ? ಮಹಾಶಕ್ತಿ (?)ಯ ಸೃಷ್ಟಿ ಆಗಿದ್ದಲ್ಲಿ ಜಗತ್ತಿನ ಜೀವಜಾತಿಗಳಲ್ಲಿ ತಾರತಮ್ಯ ಸಾಧ್ಯವೆ ? ತನ್ನದೇ ಅಂಶವಾದ ದುಷ್ಟರನ್ನು ಅಳಿಸಲು ಭಗವಂತನೇ ಅಪತಾರ ತಾಳುವುದರಲ್ಲಿ ಅರ್ಥ ಇದೆಯೇ ? ದೇವಪುತ್ರನು ಮತ ಸ್ಥಾಪಿಸಿದ ಸಾವಿರ ವರ್ಷದ ಬಳಿಕ ಅದರ ಎರಡು ಅಂಗಗಳು ಕಾದಾಡಿ ಒಬ್ಬರನ್ನೊಬ್ಬರು ನಶಿಸುವುದಾದಲ್ಲಿ ಇಂತಹ ನೀಚ ಪರಿಣಾಮಕ್ಕೆ ದೇವಪುತ್ರನ ಅವತಾರದ ಅವಶ್ಯ ಏನಿತ್ತು ?

ಕಳೆದ ಐದು ಶತಮಾನಗಳಲ್ಲಿ ಜಗತ್ತಿನ ಎಲ್ಲ ಲೌಕಿಕ ಕ್ಷೇತ್ರಗಳಲ್ಲೂ ಎಂದರೆ ಭೂಮಿ, ಆಕಾಶ, ಗ್ರಹ, ನಕ್ಷತ್ರ, ವಿಶ್ವ, ಔಷಧಿ, ರೋಗಗಳು, ವಿಜ್ಞಾನ-ಜನನ ಮರಣ-ಜೀವಶಾಸ್ತ್ರ – ಎಲ್ಲ ಕ್ಷೇತ್ರಗಳಲ್ಲೂ ತಿಳುವಳಿಕೆ




ತೀವ್ರವಾಗಿ ಬೆಳೆದಿದೆ. ಇದರಿಂದಾಗಿ ಭೂಮಿ, ಪ್ರಾಣಿ, ಮಾನವನ ಉತ್ಪತ್ತಿ, ಭೂಮಿಯ ಆಕಾರ, ಗ್ರಹಗತಿ, ವಿಕಾಸ – ಈ ವಿಷಯಗಳಲ್ಲಿ ಧರ್ಮಗ್ರಂಥಗಳು ಹೇಳಿದ್ದು ತಪ್ಪೆಂದು ಸಾಬೀತಾಗಿದೆ. ಹಾಗಿರುವಾಗ ನಾಗರಿಕತೆ, ಪರಿಸರ ಪರಿಸ್ಥಿತಿ, ಕೌಟುಂಬಿಕ ಜೀವನಕ್ರಮ, ಮಾನವನ ದೃಷ್ಟಿಕೋನ – ಎಲ್ಲ ಬದಲಾಗಿರುವ ಇಂದಿನ ದಿನದಲ್ಲಿ ಇಂತಹ ಗೌಣಮಟ್ಟದ ಧರ್ಮಗ್ರಂಥಗಳ ಜ್ಞಾನವನ್ನು ಊರುಗೋಲಾಗಿಸಿಕೊಂಡ ಜೀವನ ಸಾಧ್ಯವೆ ?

ಜಗತ್ತಲ್ಲಿ ಭಯಾನಕ ಗಾತ್ರದಲ್ಲಿ ಪಸರಿಸಿರುವ ದುಃಖ, ಕ್ರೌರ್ಯ, ದುರಾಚಾರ, ಅಮಾನುಷತ್ವ, ಭ್ರಷ್ಟಾಚಾರ, ದೈಹಿಕ ಮತ್ತು ಮಾನಸಿಕ ಶೋಷಣೆ, ಇವನ್ನೆಲ್ಲಾ ನೋಡಿಯೂ ಮಾನವನು ಯಾಕೆ ಉದ್ವೇಗಿತನಾಗುವುದಿಲ್ಲ? ಬದಲಾಗಿ ತಾನೇ ಯಾಕೆ ಇಂತಹ ದುಷ್ಪವೃತ್ತಿಗಳಲ್ಲಿ ಭಾಗಿಯಾಗುತ್ತಾನೆ ? ಇತರ ಜೀವರಾಶಿಗಳನ್ನೂ ವಾತಾವರಣವನ್ನೂ ಆಳುವ ಭೂಮಿಯನ್ನು ಹಂಚಿಕೊಳ್ಳುವ ಅಧಿಕಾರವನ್ನವನಿಗಾರು ಇತ್ತರು ? ಇಷ್ಟೆಲ್ಲ ಹಾನಿ ಮಾಡಿಯೂ ತಾನು ಶ್ರೇಷ್ಠ ಜಾತಿ ಎಂದು ಬೆನ್ನು ತಟ್ಟಿಕೊಳ್ಳುತ್ತಿದ್ದಾನೆ. ಮಿತಿ ಇಲ್ಲದ ಅವನ ದುರಹಂಕಾರದ ಸ್ಪಷ್ಟ ನಿದರ್ಶನವೆಂದರೆ ಸಾವಿರಾರು ಜೀವಜಾತಿ, ಸಸ್ಯ ಮತ್ತು ಜಗತ್ತನ್ನಾಳುವುದೆಂದೆನಿಸುವ ಮಹಾಶಕ್ತಿಗೆ ಎಲ್ಲ ಮತಗಳಲ್ಲೂ ತನ್ನ ರೂಪಗುಣ ರುಚಿಗಳನ್ನಿತ್ತಿದ್ದಾನೆ. ಇದಕ್ಕಿಂತ ದೊಡ್ಡ ಕುಟಿಲತೆ ಬೇರುಂಟೆ ? "ದೇವರು ಮನುಷ್ಯನನ್ನು ತನ್ನ ರೂಪದಲ್ಲಿ ಸೃಷ್ಟಿಸಿದನು" ಅಥವಾ "ಮನುಷ್ಯನು ಭಗವಂತನನ್ನು ತನ್ನಂತೆಯೇ ಕಲ್ಪಿಸಿ ರೂಪಿಸಿದನು" : ಈ ವಾಕ್ಯಗಳಲ್ಲಿ ಯಾವುದು ಸತ್ಯ ?

ಸಾಮಾನ್ಯ ಮನುಷ್ಯನು ಅವಿದ್ಯಾವಂತನಾಗಿದ್ದು ಜೀವನದ ಸಮಸ್ಯೆಗಳಿಂದ ಜರ್ಜರಿತನಾಗಿ ಮೂಲ ವಿಷಯಗಳನ್ನು ವಿಚಾರಿಸಲು ಅಶಕ್ತನೆಂದೊಪ್ಪಿದರೆ, ವಿಜ್ಞಾನಿಗಳು, ವಿದ್ವಾಂಸರು, ತತ್ತ್ವಶಾಸ್ತ್ರಜ್ಞರು ಎಲ್ಲರೂ ತಮ್ಮ ಮೆದುಳ ಕವಾಟವನ್ನು ಮುಚ್ಚಿಕೊಂಡು ಸಂಪ್ರದಾಯಕತ್ವದ, ಅಂಧ ವಿಶ್ವಾಸದ ಮಾರ್ಗದಲ್ಲೇ ಮುಂದರಿಯುವುದೇಕೆ ?

ಭಗವಂತನನ್ನರಿತರೆ ಮಾತ್ರ ಸ್ವರ್ಗ, ಮುಕ್ತಿ ಸಾಧ್ಯ, ತನ್ಮೂಲಕವೇ ಜೀವನ ಸಾರ್ಥಕವೆಂದು ಎಲ್ಲ ಮತಗಳೂ ವಾದಿಸುತ್ತವೆ. ಪ್ರವಾದಿಗಳು, ಗುರುಗಳು ಇದರ ಮೇಲೆ ವಿಸ್ತಾರವಾದ ಭಾಷ್ಯ, ಪ್ರಬಂಧ, ವಿಶ್ಲೇಷಣೆಗಳನ್ನು ಬರೆದು ಇದನ್ನೇ ಸಮಾಜದ ಪ್ರಧಾನ ಅಂಗವಾಗಿಸಿದ್ದಾರೆ. ಎಷ್ಟರಮಟ್ಟಿಗೆ ಎಂದರೆ ಇತರರಿಂದ ಈ ಜ್ಞಾನದ ಅರಿವಿಲ್ಲದಿದ್ದಲ್ಲಿ, ಬರೇ ತನ್ನ ನೇರ ದೃಷ್ಟಿಕೋಣ, ವಿಮರ್ಶಾತ್ಮಕ ಪ್ರವೃತ್ತಿಯಿಂದ ಜೀವನವೇ ಸಾಧ್ಯವಿಲ್ಲವೆಂದಾಗಿದೆ. ಹಾಗಾದರೆ ಒಬ್ಬ ಅನಕ್ಷರಸ್ಥ ಹಳ್ಳಿ ಹೆಂಗಸಿಗೆ ಸಾರ್ಥಕತೆಯೇ ಇಲ್ಲವೆ ? ಈ ವಾದವನ್ನು ಯಾರಾದರೂ ಒಪ್ಪಿಯಾರೆ ? ಸಾರ್ಥಕತೆ ಎಲ್ಲಿದೆ – ತನ್ನೋರ್ವನ ಸ್ವರ್ಗಾಪೇಕ್ಷೆಯಿಂದ ಅಂತ್ಯದವರೆಗೂ ಹೆಣಗಾಡಿ ಇತರರೆಲ್ಲರಿಗೂ ಕಷ್ಟಕೊಡುವುದರಲ್ಲಿದೆಯೋ ಅಥವಾ ಕೊನೆಯವರೆಗೂ ಪರರ ಕಷ್ಟಗಳಲ್ಲಿ ಭಾಗಿಗಳಾಗಿ ತನ್ನದನ್ನು ಆದಷ್ಟು ನುಂಗಿ ಸಹಿಸುತ್ತಾ ಶಾಂತವಾಗಿ ತೊಲಗುವುದರಲ್ಲಿದೆಯೋ ? ನಾವು ನೋಡಲಾಗದ, ಅರಿಯಲಾಗದ ನಮ್ಮ ಅನುಭವಕ್ಕೆ ಹೊರಗಾದವುಗಳ ಬಗ್ಗೆ ನಮಗೇಕೆ ಕಾಳಜಿ ?

ಈಗ ಮೂಲಭೂತವಾದ ಪ್ರಶ್ನೆ – ಮನುಷ್ಯನು ತನ್ನ ಅಮೂಲ್ಯವಾದ ಮೆದುಳನ್ನು ಬರೇ ತುಲನೆ, ಸ್ಪರ್ಧೆ, ಬೆಲೆಕಟ್ಟುವುದು, ಸಂಗ್ರಹಣ ಮತ್ತೆ ನೆನಪಿಸುವುದಕ್ಕಾಗಿ ಮಾತ್ರ ಯಾಕೆ ಉಪಯೋಗಿಸುತ್ತಾನೆ ? ನೇರವಾಗಿ, ತನ್ನ ನೆನಪಿನ ಅಡೆತಡೆ ಇಲ್ಲದೆ, ಸಂಸ್ಕೃತಿಯ ಹಿನ್ನೆಲೆಯ ಪ್ರಭಾವವಿಲ್ಲದೆ, ಸ್ವತಂತ್ರವಾಗಿ ಯೋಚಿಸುತ್ತಾ ಪ್ರತಿಕ್ಷಣವನ್ನೂ ಸದಾ ಹೊಸತೆಂದು ಯಾಕೆ ಜೀವಿಸುತ್ತಿಲ್ಲ? ಮೇಲಿನ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾ ತವಕಪಡುತ್ತಿದ್ದಲ್ಲಿ ತನ್ನದು ಮಾತ್ರವಲ್ಲ, ಇಡೀ ಜಗತ್ತಿನ ಸಮಸ್ಯೆಗಳಿಗೆ ಪರಿಹಾರ ಕಾಣನೇ ?

ಈ ರೀತಿ ಜಾಗೃತನಾದ ಎಂದರೆ ಜಗತ್ತು ತನ್ನ ಭೋಗಕ್ಕಾಗಿ ಇರುವುದೆನ್ನುವ ಬದಲಾಗಿ, ಇಲ್ಲಿ ಪಸರಿಸಿರುವ ದುರವಸ್ಥೆಗಳಿಗೆಲ್ಲ ಹೊಣೆ ತನ್ನದೆಂದರಿತು ಜವಾಬ್ದಾರಿಯಿಂದ ವರ್ತಿಸುವ ಮನುಷ್ಯ ಜಾತಿಯನ್ನು ಈ ಜಗತ್ತಲ್ಲಿ ನಾವೆಂದು ಕಾಣುವೆವು ?

ಪಿ. ಎಲ್. ರಾವ್
ನಂ. ೫೭, ३ನೇ ಮೈನ್, ಪ್ರಶಾಂತ ನಗರ
ಬೆಂಗಳೂರು - ೫೬೦ ೦೭೯

# ಸಮಕಾಲೀನ ರಾಜಕಾರಣ ಮತ್ತು ಶೋಷಿತರ ಪ್ರಶ್ನೆಗಳು

ಡಾ|| ಬಿ. ಎಂ. ಪುಟ್ಟಯ್ಯ

ರಾಜಕಾರಣದಲ್ಲಿ 'ಶೋಷಿತರ' ಬಗ್ಗೆ ಮಾತನಾಡುವುದು ಒಂದು ಫ್ಯಾಶನ್ ಆದರೆ, ಶೋಷಿತರ ವಲಯದಲ್ಲಿ 'ರಾಜಕಾರಣ'ದ ಬಗ್ಗೆ ಮಾತನಾಡುವುದು ಒಂದು ಫ್ಯಾಶನ್ ಆಗಿದೆ. 'ಶೋಷಿತರ' ಬಗ್ಗೆ ಮಾತನಾಡುವುದು ತಾವೇ ಮಾಡುತ್ತಿರುವ ಶೋಷಣೆಯನ್ನು ಮುಚ್ಚಿಟ್ಟುಕೊಳ್ಳಲು ಮತ್ತು ಶೋಷಿತರ ಸಹಾನುಭೂತಿ ಪಡೆಯಲು ಸೂಕ್ತ ಮಾರ್ಗವಾಗಿದೆ. ಹಾಗಾಗಿ ಇದೂ ಕೂಡ ಮಾತನಾಡಲು ಅಗ್ಗದ ವಿಷಯವೇ ಆಗಿದೆ.

'ರಾಜಕಾರಣ'ವನ್ನು ಕುರಿತು ಮಾತನಾಡುವುದು ಬಹಳ ಸುಲಭ. ಯಾಕೆಂದರೆ ಅದು ಈಗ ಮಾತನಾಡಲು ಅಗ್ಗದ ವಿಷಯವಾಗಿದೆ, ಅಷ್ಟೇ ಲೋಕಾಭಿರಾಮದ ವಿಷಯ ಕೂಡ ಆಗಿದೆ. 'ರಾಜಕಾರಣ'ವನ್ನು ಕುರಿತು ಮಾತನಾಡುವುದು ಬಹಳ ಕಷ್ಟ. ಯಾಕೆಂದರೆ ನಾವಿನ್ನೂ 'ರಾಜಕಾರಣ ಎಂದರೇನು ?' ಎಂಬ ಪ್ರಶ್ನೆಯನ್ನು ತಾತ್ವಿಕವಾಗಿ ವಿವರಿಸಿಕೊಂಡಿಲ್ಲ, ಅಥವಾ ಈ ಮೂಲ ಭೂತ ಪ್ರಶ್ನೆಯನ್ನೇ ಕೇಳಿಕೊಳ್ಳಲು ಹೋಗಿಲ್ಲ. 'ರಾಜಕಾರಣ'ದ ಬಗ್ಗೆ ಮಾತನಾಡುವಾಗಲೆಲ್ಲ ಆಳುವ ವರ್ಗದ ರಾಜಕೀಯ ದೃಷ್ಟಿಕೋನವನ್ನು ಕಡ ತಂದು ತಾತ್ವಿಕವಾಗಿ ಯಾವುದೇ ಮುಜುಗರವಿಲ್ಲದೆ ಅದನ್ನು ಬಳಸುತ್ತಿರುತ್ತೇವೆ. ಅದೇ ರೀತಿ 'ಶೋಷಿತರ ಪ್ರಶ್ನೆಗಳು' ಎಂಬ ವಿಷಯ ಕುರಿತು ಮಾತನಾಡುವುದು ಬಹಳ ಸುಲಭ. ಯಾಕೆಂದರೆ ಈ ವಿಷಯ ಕುರಿತು ಎಲ್ಲರೂ ತಮ್ಮ ತಮ್ಮ ಬಾಯಿಗೆ ಬಂದಂತೆ ಮಾತನಾಡಿದ್ದಾರೆ, ಮಾತನಾಡುತ್ತಿದ್ದಾರೆ, ಮಾತನಾಡುತ್ತಲೇ ಇರುತ್ತಾರೆ. ಹೀಗಿದ್ದಾಗಲೂ 'ಶೋಷಿತರ ಪ್ರಶ್ನೆಗಳ'ನ್ನು ಕುರಿತು ಮಾತನಾಡುವುದು ಬಹಳ ಕಷ್ಟ. ಯಾಕೆಂದರೆ ನಾವಿನ್ನೂ 'ಶೋಷಿತರು ಎಂದರೆ ಯಾರು ? ಶೋಷಣೆ ಎಂದರೆ ಏನು ?' ಎಂಬ ಪ್ರಶ್ನೆಯನ್ನು ತಾತ್ವಿಕವಾಗಿ ವಿವರಿಸಿ ಕೊಂಡಿಲ್ಲ. 'ಶೋಷಿತರು ಮತ್ತು ಶೋಷಣೆ'ಯ ಬಗ್ಗೆ ಮಾತುನಾಡುವಾಗಲೆಲ್ಲ ಶೋಷಕ ವರ್ಗದ ರಾಜಕೀಯ ದೃಷ್ಟಿಕೋನವನ್ನು ಬೌದ್ಧಿಕ ದೌರ್ಬಲ್ಯದಿಂದ ನಯವಾಗಿ ಒಪ್ಪಿಕೊಂಡು ತಾತ್ವಿಕ ಖಚಿತತೆ ಇಲ್ಲದೆ ಬಳಸುತ್ತಿರುತ್ತೇವೆ.

ರಾಜಕಾರಣದಲ್ಲಿ 'ಶೋಷಿತರ' ಬಗ್ಗೆ ಮಾತನಾಡುವುದು ಒಂದು ಫ್ಯಾಶನ್ ಆದರೆ, ಶೋಷಿತರ ವಲಯದಲ್ಲಿ 'ರಾಜಕಾರಣ'ದ ಬಗ್ಗೆ ಮಾತನಾಡುವುದು ಒಂದು ಫ್ಯಾಶನ್ ಆಗಿದೆ. 'ಶೋಷಿತರ' ಬಗ್ಗೆ ಮಾತನಾಡುವುದು ತಾವೇ ಮಾಡುತ್ತಿರುವ ಶೋಷಣೆಯನ್ನು ಮುಚ್ಚಿಟ್ಟುಕೊಳ್ಳಲು ಮತ್ತು ಶೋಷಿತರ ಸಹಾನುಭೂತಿ ಪಡೆಯಲು ಸೂಕ್ತ ಮಾರ್ಗವಾಗಿದೆ. ಹಾಗಾಗಿ ಇದೂ ಕೂಡ ಮಾತನಾಡಲು ಅಗ್ಗದ ವಿಷಯವೇ ಆಗಿದೆ. 'ಮಾತು-ಚರ್ಚೆ-ಸಂವಾದ-ಭಾಷಣ-ಬರಹ' ಇವು ನಮಗೆ ಗೊತ್ತಿಲ್ಲದಂತೆ ಮಾರುಕಟ್ಟೆಯಾಗಿವೆ. ಈ ಮಾರುಕಟ್ಟೆಯಲ್ಲಿ 'ರಾಜಕಾರಣ' ಮತ್ತು 'ಶೋಷಿತರ' ಬಗ್ಗೆ ಮಾತನಾಡದವರೇ ಪಾಪಿಗಳು. ಹಾಗಾಗಿ 'ರಾಜಕಾರಣ ಮತ್ತು ಶೋಷಿತರ ಪ್ರಶ್ನೆಗಳು' ಎಂಬ ವಿಷಯ ನಮ್ಮನ್ನು ಬೇಡವೆಂದರೂ ಮಾರುಕಟ್ಟೆಯ ಅಗ್ಗದ ಚರ್ಚೆಯ ಜಾಗಕ್ಕೆ, ಅಗ್ಗದ ದರ್ಜೆಯ ಹಂತಕ್ಕೆ ಕರೆದೊಯ್ಯುತ್ತದೆ. ರಾಜಕಾರಣ ಕುರಿತು, ಶೋಷಿತರ ಕುರಿತು ಸದ್ಯಕ್ಕೆ ಸ್ವೀಕರಿಸಲ್ಪಟ್ಟಿರುವ ಎಲ್ಲಾ ವಿವರಣೆಗಳು, ನಿರೂಪಣೆಗಳು ಶೋಷಕ ವರ್ಗದ ಕುಲುಮೆಯಿಂದ ತಯಾರಾಗಿರುವ ಹತಾರಗಳಾಗಿವೆ. ಅವು ಶೋಷಿತರ ಪರವಾಗಿವೆ ಎಂಬ ಭ್ರಮೆಯಲ್ಲಿ ನಿರಂತರವಾಗಿ ಅಷ್ಟೇ ಸುಲಭವಾಗಿ ಬಳಕೆಯಾಗುತ್ತಿವೆ. ಇದರಿಂದಾಗಿ ಶೋಷಿತರ ನೆಲೆಯಿಂದ ಶೋಷಿತರನ್ನು ಅರ್ಥಮಾಡಿಕೊಳ್ಳುವ ಸೈದ್ಧಾಂತಿಕ ದಾರಿಗಳು ಒಂದೋ ಸೃಷ್ಟಿಯಾಗಿಲ್ಲ ಅಥವಾ ಅವು ಇದ್ದರೂ ಮುಚ್ಚಿಹೋಗಿವೆ. ಹಾಗಾಗಿ 'ರಾಜಕಾರಣ'ದ ಬಗ್ಗೆ ಮತ್ತು 'ಶೋಷಿತರ' ಬಗ್ಗೆ ಮಾತನಾಡುವುದು ತಾತ್ವಿಕವಾಗಿ ಬಹಳ ಕಷ್ಟದ ಕೆಲಸ. ಶೋಷಿತರ ಬಗ್ಗೆ ಮಾತನಾಡುವುದೆಂದರೆ ಅದು ಶೋಷಿತರ ರಾಜಕಾರಣದ ಪ್ರಜಾತಾಂತ್ರಿಕ ನೈತಿಕ ಜವಾಬ್ದಾರಿ ಕೂಡ ಹೌದು.

ರಾಜಕಾರಣವನ್ನು ಭೂತಕಾಲೀನ-ಸಮಕಾಲೀನ-ಭವಿಷ್ಯತ್ಕಾಲೀನ ಎಂದು ಕಾಲದ ಮಾನದಂಡದಿಂದ ವಿಭಾಗ ಮಾಡುವುದು ಒಂದು ಕ್ರಮ. ಇಲ್ಲಿ ಸಮಕಾಲೀನ ಎಂಬುದು ವರ್ತಮಾನ, ಸದ್ಯದ, ಇಂದಿನ, ಹಳೆಯ ಕಾಲದ್ದಲ್ಲದ ಇತ್ಯಾದಿ ವಿವರಣೆಗಳು ಸಾಧ್ಯವಾಗುತ್ತವೆ. ವಾಸ್ತವವಾಗಿ ರಾಜಕಾರಣವನ್ನು ಕುರಿತು ಮಾತನಾಡುವಾಗ ಅಥವಾ ಯಾವುದೇ ವಿಷಯವನ್ನು ಕುರಿತು ಮಾತನಾಡುವಾಗ ಈ 'ಸಮಕಾಲೀನ' ಎಂಬುದು ರೆಲೆವೆಂಟ್, ಪ್ರಸ್ತುತ ಎಂಬ ಅರ್ಥಛಾಯೆಗಳನ್ನು ಕೂಡ ಕೊಡುತ್ತಿರುತ್ತದೆ. ಇದಲ್ಲದೆ 'ಪ್ರಸ್ತುತ' ಎಂಬುದು ಒಂದು ಸಕಾರಾತ್ಮಕ ಮೌಲ್ಯ ಎಂದು ನಂಬಲಾಗಿದೆ; ಇಲ್ಲವೆ ಹಾಗೆಂದು ನಂಬಿಸಲಾಗಿದೆ. ಅದು ಏನೇ ಇರಲಿ, ರಾಜಕಾರಣವನ್ನು ಭೂತಕಾಲೀನ-ಸಮಕಾಲೀನ-ಭವಿಷ್ಯತ್ಕಾಲೀನ ಎಂದು ಕಾಲಮಾನದ ಆಧಾರದ ಮೇಲೆ ವಿಂಗಡಿಸುವುದು ಒಂದು ಜನಪ್ರಿಯ ವಿಧಾನ. ಇದು ಡಾರ್ವಿನ್ನನ ವಿಕಾಸವಾದದ ಯಾಂತ್ರಿಕ ನಂಬಿಕೆಯ ಮೇಲೆ ಅವಲಂಬಿತವಾಗಿದೆ. ಚರಿತ್ರೆ ಎನ್ನುವುದು, ಕಾಲ ಎನ್ನುವುದು ಸರಳ ರೇಖೆಯ ರೀತಿಯಲ್ಲಿ ಬೆಳೆಯುತ್ತಾ, ವಿಕಾಸವಾಗುತ್ತಾ ಹೋಗುತ್ತದೆ ಎಂಬ ತಿಳುವಳಿಕೆ ಇದರಲ್ಲಿ ಅಡಗಿದೆ. ಮಾನವ ಸಮಾಜವನ್ನು ಗ್ರಹಿಸಲು ಈ ಸರಳ ರೇಖಾತ್ಮಕ ಕಾಲದ ಗ್ರಹಿಕೆ ನಮ್ಮಲ್ಲಿ ತುಂಬ ಜನಪ್ರಿಯವಾಗಿದೆ. 'ಸಮಕಾಲೀನ' ಎಂಬುದನ್ನು ಒಪ್ಪಿಕೊಳ್ಳಬೇಕಾದರೆ 'ಸಮಕಾಲೀನವಲ್ಲದ' 'ಭೂತ ಮತ್ತು ಭವಿಷ್ಯತ್ತು'ಗಳನ್ನು ಒಪ್ಪಿಕೊಳ್ಳಬೇಕು. 'ಭೂತ' ಮತ್ತು 'ಭವಿಷ್ಯತ್ತುಗಳು' ಸಮಕಾಲೀನಕ್ಕಿಂತ ಭಿನ್ನ ಎಂದು ಒಪ್ಪಿ ಕೊಂಡಾಗ ಮಾತ್ರ 'ಸಮಕಾಲೀನ' ಎಂಬುದು ಬಹಳ ಮುಖ್ಯವಾದ ಅಷ್ಟೇ ಆಕರ್ಷಕವಾದ ಪರಿಕಲ್ಪನೆಯಾಗುತ್ತದೆ. ರಾಜಕಾರಣವನ್ನು ಹೀಗೆ ಕಾಲದ ಮಾನದಂಡದಿಂದ ಸರಳ ರೇಖಾತ್ಮಕ ಮಾದರಿಯಲ್ಲಿ ವಿಂಗಡಿಸಿ ನೋಡುವ, ಕತ್ತರಿಸಿ ನೋಡುವ ವಿಧಾನ ಸೈದ್ಧಾಂತಿಕವಾಗಿ ಅಷ್ಟೇನೂ ಪ್ರಯೋಜನಕಾರಿಯಲ್ಲ. ನಾವು 'ಸಮಕಾಲೀನ' ಎಂದು ಕರೆಯುವ 'ಅವಧಿ'ಯಲ್ಲೇ ಭೂತ ಮತ್ತು ಭವಿಷ್ಯತ್ತುಗಳು ಅಡಗಿವೆ. ಕಾಲ ಎಂಬುದು ನಿರಂತರ ಚಲನಶೀಲತೆಯುಳ್ಳದ್ದು. ಇದನ್ನು ನಿರ್ಧರಿಸುವ ಮಾನದಂಡ ಯಾವುದು ? ಒಂದು ಇಸವಿಯೋ ? ಒಂದು ದಿನಾಂಕವೋ ? ಒಂದು ಗಂಟೆಯೋ ? ಯಾವುದು ? ಇದು ಕೇವಲ ಯಾಂತ್ರಿಕ ತರ್ಕವೆಂದು ಯಾರೂ ಭಾವಿಸಬಾರದು. ಇದು ತಾತ್ವಿಕತೆಯ ಪ್ರಶ್ನೆ. ಕಾಲದ ನಿರಂತರತೆಗೆ ಸಂಬಂಧಿಸಿದ ಪ್ರಶ್ನೆ.

ಇದಲ್ಲದೆ 'ಸಮಕಾಲೀನ' ಎಂಬುದಕ್ಕೆ ಮತ್ತೊಂದು ಸಮಸ್ಯೆ ಕೂಡ ಇದೆ. 'ರಾಜಕಾರಣ'ವನ್ನು ನಾವು ಯಾರ ನೆಲೆಯಲ್ಲಿ ನಿಂತು ನೋಡುತ್ತೇವೆ ಎಂಬುದನ್ನು ಆಧರಿಸಿ ಇದರ ಉಪಯುಕ್ತತೆ ಅಥವಾ ನಿರುಪಯುಕ್ತತೆ ತೀರ್ಮಾನವಾಗುತ್ತದೆ. ಉದಾ: ಇಂದು ದುಡಿವವರ ಕೂಲಿಯ ಪ್ರಶ್ನೆ, ಕೂಳಿನ ಪ್ರಶ್ನೆಯನ್ನೇ ತೆಗೆದುಕೊಳ್ಳೋಣ. ಇವು ಕೇವಲ ವರ್ತಮಾನದ ಸಮಸ್ಯೆಗಳು ಮಾತ್ರವೋ ಅಥವಾ ಈ ಹಿಂದೆ ಕೂಡ ಇದ್ದವೋ ? ಎಂದು ಕೇಳಿದರೆ ಈ ಹಿಂದೆ ಕೂಡ ಇದ್ದವು. ಈಗಲೂ ಇವೆ. ಅವುಗಳಲ್ಲಿ ಕೆಲವು ಸೂಕ್ಷ್ಮ ವ್ಯತ್ಯಾಸಗಳೂ ಆಗಿರಬಹುದು. ಮೂಲಭೂತ ಪಲ್ಲಟಗಳು ನಡೆದಿಲ್ಲ. ಹಾಗಾಗಿ ಶೋಷಿತರ ನೆಲೆಯಲ್ಲಿ ನಿಂತು ರಾಜಕಾರಣವನ್ನು ಪರಿಭಾವಿಸುವಾಗ 'ಸಮಕಾಲೀನ' ಎಂಬುದು ಆಕರ್ಷಕ ಪದವಾಗಬಹುದೇ ಹೊರತು, ವಿಷಯಗಳನ್ನು ಮಂಡಿಸಲು ಗಂಭೀರವಾದ ತಾತ್ವಿಕ ಚೌಕಟ್ಟನ್ನೇನೂ ಅದು ಒದಗಿಸುವುದಿಲ್ಲ. ಹಾಗಾಗಿ ಚರ್ಚೆಯನ್ನು ಶುರುಮಾಡಲು ಕಾಲಮಾನ ಆಧಾರಿತ ವಿಭಾಗ ಕ್ರಮವನ್ನು ಬದಿಗಿಡುವುದು ಅನಿವಾರ್ಯವಾಗುತ್ತದೆ; ಅಗತ್ಯವೂ ಆಗುತ್ತದೆ. ಕಾಲಮಾನ ಆಧಾರಿತ ವಿಂಗಡಣೆಯನ್ನು ಬಿಟ್ಟು, ನಾವು ಮೂಲಭೂತ ಪ್ರಶ್ನೆಗಳನ್ನು ಚರ್ಚೆಗೆತ್ತಿಕೊಳ್ಳಬಹುದು.

ಆ ಮೂಲಭೂತ ಪ್ರಶ್ನೆಗಳೆಂದರೆ, 'ರಾಜಕಾರಣ ಎಂದರೆ ಏನು ? ರಾಜಕಾರಣ ಎಂದರೆ ಯಾರದು ? ರಾಜಕಾರಣ ಎಂಬುದು ಯಾತಕ್ಕಾಗಿ ? ಶೋಷಿತರು ಎಂದರೆ ಯಾರು ? ಶೋಷಣೆ ಎಂದರೆ ಏನು ?' ಇವು ಚರ್ಚೆ ಮಾಡಲು ಬಹಳ ಮುಖ್ಯವಾದ ವಿಷಯಗಳು. ಕನ್ನಡ ಚಿಂತನೆಯಲ್ಲಿ 'ರಾಜಕಾರಣ' 'ರಾಜಕೀಯ' ಎಂಬ ಪರಿಭಾಷೆಗಳನ್ನು ಬಹಳ ಸರಳಗೊಳಿಸಲಾಗಿದೆ. ಅದು ಸರಳಗೊಂಡು ಸವಕಲಾಗಿ ಹೋಗಿದೆ. ರಾಜಕಾರಣಿಗಳು ಮಾಡುವ ಕೆಲಸಗಳನ್ನು ಅಥವಾ ರಾಜಕಾರಣಿಗಳು ಇರುವ ಭೌತಿಕ ವಲಯವನ್ನು ರಾಜಕೀಯ ಎಂದು ಸರಳೀಕರಿಸಲಾಗಿದೆ. ಹಾಗಾಗಿ ಎಂ.ಎಲ್.ಎ., ಎಂ.ಪಿ., ಮಂತ್ರಿ, ಶಾಸಕ ಮುಂತಾದವರು ರಾಜಕೀಯ ಎಂಬುದರಲ್ಲಿ ಸ್ಥಾನ ಪಡೆಯುವಂತಾಗಿದೆ.

ಇಲ್ಲವೇ ಆಡಳಿತ, ಶಾಸಕಾಂಗ- ಕಾರ್ಯಾಂಗ-ನ್ಯಾಯಾಂಗಗಳ ಚಟುವಟಿಕೆಗಳನ್ನು ವಿವರಿಸುವುದಕ್ಕೆ ಸಾಂಪ್ರದಾಯಿಕ ರಾಜಕೀಯಶಾಸ್ತ್ರ ಮೀಸಲಾಗಿದೆ. ರಾಜಕೀಯ ಎಂಬುದನ್ನು ವಿವರಿಸಲು ನಾವು ಈ ರೀತಿಯ ವಿಧಾನವನ್ನು ಅನುಸರಿಸಿದರೆ ತಾತ್ವಿಕವಾದ ಸಮಸ್ಯೆಗಳು ಹಾಗೇ ಉಳಿಯುತ್ತವೆ. ವಾಸ್ತವವಾಗಿ ರಾಜಕೀಯ ಎಂಬುದನ್ನು ವಿವರಿಸಲು ತಾಂತ್ರಿಕ ಮಾಹಿತಿಗಳನ್ನು ಮಾತ್ರ ಮುಖ್ಯ ಆಧಾರಗಳಾಗಿ ಪರಿಗಣಿಸಬಾರದು. ರಾಜಕೀಯ ಎಂಬುದನ್ನು ರಾಜಕೀಯ ವಿಧಾನದ ಮೂಲಕ ವಿವರಿಸಬೇಕು. ರಾಜಕೀಯ ದೃಷ್ಟಿಕೋನದ ಮೂಲಕ ವಿವರಿಸಬೇಕು. ಆಗ ಅದರ ಅರ್ಥವ್ಯಾಪ್ತಿ , ಅದರ ವ್ಯಾಖ್ಯಾನ ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ರಾಜಕೀಯ ಎಂಬುದು ಕೇವಲ ಶಾಸಕಾಂಗ ಕಾರ್ಯಾಂಗ ನ್ಯಾಯಾಂಗಗಳಲ್ಲ, ಸಂವಿಧಾನ, ಆಡಳಿತ, ಕಾನೂನು, ಅಸೆಂಬ್ಲಿ, ಪಾರ್ಲಿಮೆಂಟು, ರಾಜಕಾರಣಿಗಳು, ಎಂ.ಎಲ್.ಎ., ಎಂ.ಪಿ., ಮಂತ್ರಿಗಳು ಇಷ್ಟೇ ಅಲ್ಲ, ರಾಜಕಾರಣ/ರಾಜಕೀಯ ಎಂಬುದು ಈ ಎಲ್ಲವುಗಳ ಕಾರ್ಯ ಚಟುವಟಿಕೆಗಳನ್ನು ಪ್ರಬಲ ವರ್ಗದ ಹಿತಾಸಕ್ತಿಗೆ ಅನುಗುಣವಾಗಿ – ದುರ್ಬಲ ವರ್ಗದ ಹಿತಾಸಕ್ತಿಗೆ ವಿರುದ್ಧವಾಗಿ ಉದ್ದೇಶಪೂರ್ವಕವಾಗಿ ಸಂಯೋಜಿಸಿ, ಬಲವಂತದಿಂದ ಜಾರಿಗೆ ತರುವ ವರ್ಗ ಪಕ್ಷಪಾತಿ ಸಾಮಾಜಿಕ ತಂತ್ರಜ್ಞಾನ. ಈ ಸಾಮಾಜಿಕ ತಂತ್ರಜ್ಞಾನ ಉಳ್ಳವರ ಕೈಯಲ್ಲಿದ್ದರೆ ಅದು ಉಳ್ಳವರ ರಾಜಕೀಯವಾಗಿರುತ್ತದೆ. ಇದೇ ಸಾಮಾಜಿಕ ತಂತ್ರಜ್ಞಾನ ಶ್ರಮಜೀವಿಗಳ ಕೈಯಲ್ಲಿದ್ದರೆ ಅದು ಶ್ರಮಜೀವಿಗಳ ಪ್ರಜಾತಾಂತ್ರಿಕ ರಾಜಕೀಯ ವಾಗಿರುತ್ತದೆ. ಹಾಗಾಗಿ ರಾಜಕಾರಣದಲ್ಲಿ ಸ್ಪಷ್ಟವಾಗಿ ವರ್ಗ ಹಿತಾಸಕ್ತಿ ಇದೆ. ರಾಜಕಾರಣ ದಲ್ಲಿ ಶೋಷಿತರ ವರ್ಗ ಹಿತಾಸಕ್ತಿ ಇದ್ದರೆ, ಅದು ಶೋಷಿತರ ರಾಜಕಾರಣವಾಗಿರುತ್ತದೆ; ರಾಜಕಾರಣದಲ್ಲಿ ಶೋಷಕರ ವರ್ಗ ಹಿತಾಸಕ್ತಿ ಇದ್ದರೆ ಅದು ಶೋಷಕರ ರಾಜಕಾರಣ ವಾಗಿರುತ್ತದೆ. ಹಾಗಾಗಿ ರಾಜಕಾರಣದಲ್ಲಿ ಪ್ರಧಾನವಾಗಿ ಎರಡು ವ್ಯತಿರಿಕ್ತ ವರ್ಗ ಹಿತಾಸಕ್ತಿಗಳಿದ್ದು ಒಂದು ಆಳುವ ವರ್ಗದ ರಾಜಕಾರಣವಾದರೆ, ಮತ್ತೊಂದು ದುಡಿವ ವರ್ಗದ ರಾಜಕಾರಣವಾಗಿದೆ. ಹಾಗಾದರೆ ಆಳುವ ವರ್ಗದ ರಾಜಕಾರಣದ ಸ್ವರೂಪ ಯಾವುದು ಎಂಬುದನ್ನು ಖಚಿತ ಮಾಡಿಕೊಳ್ಳಬೇಕು. ಆಳುವ ವರ್ಗದ ರಾಜಕಾರಣದ ಗುರಿಗಳಿಗೆ ಮತ್ತು ಉದ್ದೇಶಗಳಿಗೆ ಮೇಲ್ನೋಟಕ್ಕೆ ತೋರುವ ರೂಪ ಒಂದಿದೆ. ಆದರೆ ಮೇಲ್ನೋಟಕ್ಕೆ ಕಾಣದ ಅದರ ಆಳದಲ್ಲಿ ಅಡಗಿರುವ ಗುಪ್ತವಾದ ಮತ್ತು ಅಷ್ಟೇ ಖಚಿತವಾದ ಗುರಿ ಉದ್ದೇಶಗಳು ಬೇರೆ ಇವೆ. ನಾವು ತೋರಿಕೆಯ ರೂಪವನ್ನೇ ವಾಸ್ತವ, ನಿಜ ಎಂದು ನಂಬಬಾರದು; ಒಪ್ಪಬಾರದು. ಅದರ ಆಳದಲ್ಲಿ ಅಡಗಿರುವ ವಾಸ್ತವವನ್ನು, ನಿಜವನ್ನು ಅರಿಯಬೇಕು. ಆಳುವ ವರ್ಗದ ಆಳದಲ್ಲಿ ಅಡಗಿರುವ ಗುಪ್ತ ಅಜೆಂಡಾ ವೆಂದರೆ, ಅದು ವರ್ಗ ಶೋಷಣೆಯನ್ನು ನಿರಂತರವಾಗಿ ಮುಂದುವರಿಸಿಕೊಂಡು ಹೋಗುವುದು. ವರ್ಗ ಶೋಷಣೆಗೆ ಪೂರಕವಾಗಿರುವ ಉಳಿದೆಲ್ಲಾ ಬಗೆಯ ಶೋಷಣೆ ಗಳನ್ನು ಹಾಗೆಯೇ ಉಳಿಸಿಕೊಂಡು ಹೋಗುವುದು. ಉತ್ಪಾದನಾ ಸಂಬಂಧಗಳನ್ನು ಬದಲಾಗದಂತೆ ಕಾಪಾಡುವುದು. ಉತ್ಪಾದಕ ಶಕ್ತಿಗಳನ್ನು ಶ್ರಮಜೀವಿಗಳಿಗಾಗಿಯೇ ಉಳಿಸುವುದು. ಶ್ರಮ ಶೋಷಣೆಗೆ ಪೂರಕವಾದ ಸಾಮಾಜಿಕ ಸಂರಚನೆಯನ್ನು ಬದಲಾಗದಂತೆ ಕಾಪಾಡುವುದು. ಮೇಲಿನ ಅಂಶಗಳನ್ನು ಸಾರಾಂಶೀಕರಿಸಿ ಹೇಳುವುದಾದರೆ, ಶೋಷಣಾಯುಕ್ತ ವ್ಯವಸ್ಥೆಯನ್ನು ಮುಕ್ಕಾಗದಂತೆ ಮುಂದುವರಿಸಿ ಕೊಂಡು ಹೋಗುವುದು ಆಳುವ ವರ್ಗದ ರಾಜಾಕಾರಣದ ಪರಮಗುರಿ ಮತ್ತು ದಾರಿಯಾಗಿದೆ. ಆಳುವ ವರ್ಗದ ರಾಜಕಾರಣವನ್ನು ನಾವು ಈ ತಾತ್ವಿಕ ಸ್ವರೂಪ ದಲ್ಲಿ ವಿವರಿಸಿಕೊಂಡಾಗ ಇಂಡಿಯಾದ ಆಳುವ ವರ್ಗದ ಪಕ್ಷಗಳಾದ ಕಾಂಗ್ರೆಸ್, ಬಿ.ಜೆ.ಪಿ., ಬಿ.ಎಸ್.ಪಿ., ಸಿ.ಪಿ.ಐ., ಸಿ.ಪಿ.ಐ.(ಎಂ.), ಟಿ.ಡಿ.ಪಿ., ಎ.ಐ.ಡಿ.ಎಂ.ಕೆ., ಇನ್ನೂ ಮುಂತಾದ ರಾಜಕೀಯ ಪಕ್ಷಗಳ ನಡುವೆ ಆಚರಣಾತ್ಮಕವಾಗಿ ಯಾವುದೇ ವ್ಯತ್ಯಾಸ ಇಲ್ಲ ಎಂಬುದನ್ನು ಗಮನಿಸಬೇಕು. ಅವುಗಳ ಹೆಸರು, ಅವುಗಳ ಚುನಾವಣೆಯ ಚಿನ್ಹೆ – ಇವುಗಳಲ್ಲಿ ವ್ಯತ್ಯಾಸವಿದೆಯೇ ಹೊರತು, ವರ್ಗ ಶೋಷಣೆಯನ್ನು ಮುಂದುವರಿಸಿ ಕೊಂಡು ಹೋಗುವುದರಲ್ಲಿ, ದೇಶವನ್ನು ಇಡಿಯಾಗಿ ಸಾಮ್ರಾಜ್ಯಶಾಹಿ ಶೋಷಣೆಗೆ ನೇರವಾಗಿ ಬಲಿಕೊಡುವುದರಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ. ಕೆಲವರು ಈ ಪಕ್ಷಗಳನ್ನು ಪರಸ್ಪರ ಹೋಲಿಸಿ ಗುಣದೋಷಗಳನ್ನು ಎಣಿಸುತ್ತಾರೆ. ಆದರೆ ಶೋಷಿತರ ನೆಲೆಯಲ್ಲಿ ನಿಂತು ನೋಡಿದಾಗ ಅಂತಹ ಎಲ್ಲಾ ಲೆಕ್ಕಾಚಾರಗಳು ವಾಸ್ತವವಾಗಿ ಕೇವಲ ಬೂಟಾಟಿಕೆಯವು ಎಂಬುದು ತಿಳಿಯುತ್ತದೆ. ಇನ್ನೂ ಕೆಲವರು ದುರ್ಬಲ ಚಿಂತಕರು ಹೀಗೆ ಹೇಳುತ್ತಾರೆ. 'ವಾಜಪೇಯಿ ಬಹಳ ಒಳ್ಳೆಯ ವ್ಯಕ್ತಿ. ಆದರೆ ಬಿ.ಜೆ.ಪಿ. ಒಳ್ಳೆಯದಲ್ಲ' ಎಂದು. ವಾಜಪೇಯಿಯವರೇ ಪ್ರಧಾನ ಮಂತ್ರಿ ಆಗಿದ್ದಾಗ ಈ ದೇಶ ಏನಾಗಿ ಹೋಯಿತು ಎಂಬುದು ಎಲ್ಲರಿಗೂ ಗೊತ್ತಿದೆ. ಕೆಲವು ದಲಿತ ಚಿಂತಕರು ಹೀಗೆ ಹೇಳುತ್ತಾರೆ : 'ಈ ರಾಜ್ಯಕ್ಕೆ ಒಬ್ಬ ದಲಿತ ಮುಖ್ಯಮಂತ್ರಿ ಆಗಲಿಲ್ಲ ; ಈ ದೇಶಕ್ಕೆ ಒಬ್ಬ ದಲಿತ ಪ್ರಧಾನ ಮಂತ್ರಿ ಆಗಲಿಲ್ಲ' ಎಂದು. ಇಂಡಿಯಾಕ್ಕೆ 'ದಲಿತ' ರಾಷ್ಟ್ರಪತಿ ಆಗಿಹೋದರು. ಆದರೆ ದಲಿತರ ಮೇಲಿನ ವರ್ಗ ಶೋಷಣೆ ತಪ್ಪಲಿಲ್ಲ. ಈ ರಾಜ್ಯದಲ್ಲಿ 'ದಲಿತ' ಮಂತ್ರಿಗಳು ಬಹಳ ಜನ ಆಗಿಹೋದರು. ಆದರೆ ದಲಿತರ ಮೇಲಿನ ಹಲ್ಲೆ ಕೊಲೆ ಸುಲಿಗೆಗಳು ತಪ್ಪಲಿಲ್ಲ. ದಲಿತರಿಗೆ ತುಂಡು ಭೂಮಿ, ಇರಲೊಂದು ಮನೆ, ಕುಡಿಯಲು ನೀರು ಇತ್ಯಾದಿಗಳೇನೂ ಸಿಗಲಿಲ್ಲ. ಹಾಗಾಗಿ ವ್ಯಕ್ತಿಯೊಬ್ಬನ ನೆಲೆಯಲ್ಲಿ, ಜಾತಿಯ ನೆಲೆಯಲ್ಲಿ, ಆಳುವ ವರ್ಗದ ಪಕ್ಷದ ನೆಲೆಯಲ್ಲಿ ರಾಜಕೀಯವಾಗಿ ವ್ಯತ್ಯಾಸ ಎಣಿಸಲು ಸಾಧ್ಯವಿಲ್ಲ. ಅವೆಲ್ಲವನ್ನೂ ಒಟ್ಟಾಗಿ ಆಳುವ ವರ್ಗದ ರಾಜಕಾರಣ ಎಂದು ಖಚಿತ ಮಾಡಿಕೊಳ್ಳಬೇಕು. ಆಳುವ ವರ್ಗದ ರಾಜಕೀಯವನ್ನು ತಾತ್ವಿಕ ಆಳದಲ್ಲಿ ಹೀಗೆ ಖಚಿತ ಮಾಡಿಕೊಂಡ ನಂತರ ನಾವು ಇದಕ್ಕೆ ವಿರುದ್ಧವಾಗಿರುವ – ಶೋಷಿತರ ರಾಜ ಕಾರಣದ ಸ್ವರೂಪವನ್ನು ವಿವರಿಸಿಕೊಳ್ಳಬಹುದು. ದುಡಿಯುವ ವರ್ಗದ ರಾಜಕಾರಣ ಶೋಷಣಾಯುಕ್ತ ಸಮಾಜವನ್ನು ಶೋಷಣಾಮುಕ್ತ ಸಮಾಜವನ್ನಾಗಿ ಬದಲಾಯಿಸಲು ನಿರಂತರ ಹೋರಾಡುತ್ತದೆ. ಹೋರಾಟ, ಸಂಘರ್ಷ, ಪ್ರತಿರೋಧಗಳೇ ಇದರ ಜೀವಾಳ. ರಾಜಕೀಯವಾಗಿ, ಸಾಮಾಜಿಕವಾಗಿ, ಒತ್ತಾಯಪೂರ್ವಕವಾಗಿ ಹೇರಿ ಒಪ್ಪಿಸಲಾಗಿರುವ ಎಲ್ಲಾ ಬಗೆಯ ಆಲೋಚನೆ, ಆಚರಣೆ, ಮಾನವ ಸಂಬಂಧಗಳು ಮುಖ್ಯವಾಗಿ ಉತ್ಪಾದನಾ ಸಂಬಂಧಗಳು ಈ ಎಲ್ಲವನ್ನು ಜನತೆಯ ನೆಲೆಯ ರಾಜಕೀಯ ದೃಷ್ಟಿಕೋನದಿಂದ ವಿವರಿಸುವುದು ಮತ್ತು ಅವುಗಳನ್ನು ಬದಲಾಯಿಸಲು ನಿರಂತರ ಶ್ರಮಿಸುವುದು ಶೋಷಿತರ ರಾಜಕಾರಣದ ಸ್ವರೂಪ ಹಾಗೂ ಸ್ವಭಾವ. ಔಪಚಾರಿಕವಾಗಿ ಹೇಳುವುದಾದರೆ, ಇಂಡಿಯಾದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಿಂದ ಮೊದಲು ಗೊಂಡು, ಅನಂತರ ತೆಲಂಗಾಣ ಹೋರಾಟ, ಭೋಜ್‌ಪುರಿ, ಶ್ರೀಕಾಕುಳಂ, ನಕ್ಸಲ್‌ಬರಿ ಇವೇ ಮುಂತಾದ ವೀರೋಚಿತ ಹೋರಾಟಗಳು ಶೋಷಿತರ ರಾಜಕೀಯ ಹೋರಾಟ ಗಳಾಗಿವೆ. ಶೋಷಿತರ ರಾಜಕೀಯ ಹೋರಾಟಗಳಿಗೆ ಬಹುದೊಡ್ಡ ಪರಂಪರೆಯೇ ಇದೆ. ಶೋಷಿತರ ರಾಜಕಾರಣಕ್ಕೆ ಹೋರಾಟವೇ ಜೀವಾಳ. ಆದರೆ ಶೋಷಕರ ರಾಜ ಕಾರಣಕ್ಕೆ ಶೋಷಿತರ ಹೋರಾಟವನ್ನು ದಾರಿ ತಪ್ಪಿಸುವುದು, ಬಗ್ಗುಬಡಿಯುವುದೇ ಕೆಲಸ. ತೆಲಂಗಾಣದಲ್ಲಿ ಭೂ ರಹಿತ ರೈತ ಕೃಷಿ ಕೂಲಿ ಕಾರ್ಮಿಕರು ಭೂಮಿಗಾಗಿ ಮತ್ತು ರಾಜ್ಯಾಧಿ ಕಾರಕ್ಕಾಗಿ ಹೋರಾಟ ಮಾಡುತ್ತಿದ್ದಾಗ ಆಳುವ ವರ್ಗವು ವಿನೋಬಾ ಭಾವೆಯವರಿಂದ 'ಭೂದಾನ ಚಳವಳಿ'ಯನ್ನು ಮಾಡಿಸಿದ್ದು ಮಹಾನ್ ವ್ಯಂಗ್ಯ. ಹಾಗಾಗಿ ಶೋಷಕ-ಶೋಷಿತ ಈ ಎರಡೂ ರಾಜಕಾರಣಗಳ ನಡುವಿನ ಸಂಘರ್ಷ ಭೂತಕಾಲದ್ದೂ ಹೌದು; ಸಮಕಾಲಿನದ್ದೂ ಹೌದು. ಇದು ಒಂದು ನಾಡಿಗೆ, ಒಂದು ದೇಶಕ್ಕೆ ಮತ್ತು ಒಂದು ಕಾಲಕ್ಕೆ ಸೀಮಿತವಾದ ಸಂಗತಿಯಲ್ಲ. ಇದು ವಿಶಾಲವಾದ ಜಾಗತಿಕ ಚೌಕಟ್ಟುಳ್ಳದ್ದು. ಇಂದಿನ ಸಾಮ್ರಾಜ್ಯಶಾಹಿಯ ಪ್ರಕ್ರಿಯೆಯೊಂದಿಗೆ ನೇರವಾಗಿ ಸಂಬಂಧ ಹೊಂದಿರುವಂತಹದ್ದು. ಕಾಲದ ನಿರಂತರತೆಯೊಂದಿಗೆ ಸಂಬಂಧವಿಟ್ಟುಕೊಂಡಿರುವಂತಹದ್ದು.

ಇನ್ನು ಶೋಷಿತರು ಎಂದರೆ ಯಾರು ? ಶೋಷಣೆ ಎಂದರೆ ಏನು ? ಅವರ ಸಮಸ್ಯೆಗಳೇನು ? ಎಂಬ ಮತ್ತೊಂದು ಸಂಗತಿಯನ್ನು ಚರ್ಚೆಗೆತ್ತಿಕೊಳ್ಳಬಹುದು. ಶೋಷಿತರನ್ನು ಮೊದಲು ವ್ಯಾಖ್ಯಾನಿಸಿ, ನಂತರ ಅವರ ಸಮಸ್ಯೆಗಳನ್ನು ವ್ಯಾಖ್ಯಾನಿಸುವುದು ಒಂದು ಕ್ರಮ. ಸಮಸ್ಯೆಗಳನ್ನು ವ್ಯಾಖ್ಯಾನಿಸುತ್ತಲೇ, ಆ ಚೌಕಟ್ಟಿನ ಒಳಗೇ ಶೋಷಿತರನ್ನು ವ್ಯಾಖ್ಯಾನಿಸುವುದು ಮತ್ತೊಂದು ಕ್ರಮ. ಸಮಸ್ಯೆಯನ್ನು ವ್ಯಾಖ್ಯಾನಿಸುವುದಕ್ಕೆ ಮೊದಲು 'ಸಮಸ್ಯೆ' ಎಂದರೆ ಏನು ? 'ಸಮಸ್ಯೆ' ಎಂದರೆ ಯಾವುದು ? ಎಂಬುದನ್ನು ಸ್ಪಷ್ಟಮಾಡಿ ಕೊಳ್ಳಬೇಕು. ಯಾಕೆಂದರೆ 'ಸಮಸ್ಯೆ' ಎಂಬುದು ಅಮೆರಿಕಾದ ಅಧ್ಯಕ್ಷನಿಗೂ ಇದೆ. ಭಾರತದ ಪ್ರಧಾನ ಮಂತ್ರಿಯವರಿಗೂ ಇದೆ. ನಗರಗಳ ಶ್ರೀಮಂತರಿಗೂ ಇದೆ. ಹಳ್ಳಿಗಳ ಭೂ ಮಾಲೀಕರಿಗೂ ಇದೆ. ಅವರ ಮನೆಯಲ್ಲಿ ಜೀತ ಮಾಡುವ, ಕಸ ಬಳಿಯುವ ಕೂಲಿ ಕಾರ್ಮಿಕರಿಗೂ ಇದೆ. ಹಾಗೆಂದು ಇವರೆಲ್ಲರ ಸಮಸ್ಯೆಗಳನ್ನು ಒಂದೇ ತಕ್ಕಡಿಯಲ್ಲಿ ಇಡಲು ಬರುವುದಿಲ್ಲ. ಸಮಸ್ಯೆ ಎಲ್ಲರಿಗೂ ಇದ್ದಾಗಲೂ ಕೂಡ ಅದರ ಉದ್ದೇಶಕ್ಕೆ ಅನುಗುಣವಾಗಿ ಅದರ ಸ್ವರೂಪ ನಿರ್ಧಾರವಾಗುತ್ತದೆ. ಅಮೆರಿಕಾದ ಅಧ್ಯಕ್ಷನ ಸಮಸ್ಯೆ ಎಂದರೆ ಜಾಗತಿಕ ಸುಲಿಗೆಯನ್ನು ಮುಂದುವರಿಸಿಕೊಂಡು ಹೋಗುವುದು ಹೇಗೆ ? ಅದಕ್ಕೆ ಹೊಸಹೊಸ ವಿಧಾನಗಳನ್ನು ಅಳವಡಿಸುವುದು ಹೇಗೆ ? ಎಂಬುದಾಗಿದೆ. ನಮ್ಮ ಹಳ್ಳಿಗಳ ಭೂಒಡೆಯರ ಸಮಸ್ಯೆ, ಈ ಕಡೆ ಕೂಲಿ ಮಾಡುವವರನ್ನು ಶೋಷಣೆ ಮಾಡುತ್ತಾ, ಆ ಕಡೆ ಬಹುರಾಷ್ಟ್ರೀಯ ಕಂಪನಿಗಳ ಮಾರುಕಟ್ಟೆಯೊಂದಿಗೆ ಸ್ಪರ್ಧಿಸುವುದು ಹೇಗೆ ? ಎಂಬುದಾಗಿದೆ. ಅವರ ಮನೆಯಲ್ಲಿ ಕೂಲಿನಾಲಿ ಮಾಡುವವರ ಸಮಸ್ಯೆ ಒಂದು ಹೊತ್ತಿನ ಹೊಟ್ಟೆಯನ್ನು ತುಂಬಿಸಿಕೊಳ್ಳುವುದು ಹೇಗಪ್ಪಾ ? ಎಂಬ ತುತ್ತು ಕೂಳಿನ, ಅಗುಳು ಅನ್ನದ, ಗುಟುಕು ನೀರಿನ ಸಮಸ್ಯೆಯಾಗಿದೆ. ಭೂಮಾಲಿಕರಿಗಾಗಲಿ, ಬಹು ರಾಷ್ಟ್ರೀಯ ಕಂಪನಿಗಳ ಮಾಲಿಕರಿಗಾಗಲಿ ಅಗುಳು ಅನ್ನದ,

ಗುಟುಕು ನೀರಿನ ಸಮಸ್ಯೆ ಇಲ್ಲ. ಈ ಸಮಸ್ಯೆ ಇರುವುದು ಕೂಲಿ ಮಾಡುವವರಿಗೆ, ದುಡಿಯುವ ಜನರಿಗೆ, ಕಾರ್ಮಿಕರಿಗೆ, ಶ್ರಮಜೀವಿಗಳಿಗೆ. ಇವರಿಗೆ ಅನ್ನ, ನೀರಿನ ಸಮಸ್ಯೆ ಯಾಕೆ ಎದುರಾಗಿದೆ ಎಂದರೆ ಇವರು ಭೂಮಿಯಿಂದ ವಂಚಿತರು, ಸಂಪತ್ತಿನಿಂದ ವಂಚಿತರು. ಅಷ್ಟೇ ಅಲ್ಲ, ರಾಜ್ಯಾಧಿಕಾರದಿಂದ ವಂಚಿತರು. ಹಾಗಾಗಿ ಭೂಮಿ-ಸಂಪತ್ತು-ರಾಜ್ಯಾಧಿಕಾರದಿಂದ ವಂಚಿತರಾದ ಮತ್ತು ಅವಕ್ಕೆಲ್ಲ ಒಟ್ಟಾಗಿ ಪರ್ಯಾಯ ವ್ಯವಸ್ಥೆಯನ್ನು ರೂಪಿಸಲು ನಿರಂತರವಾಗಿ ಹೋರಾಡುವ ವರ್ಗದ ಮತ್ತೊಂದು ಹೆಸರೇ ಶೋಷಿತ ವರ್ಗ. ಹಸಿವು-ಅವಮಾನಗಳನ್ನು ಮತ್ತು ವ್ಯವಸ್ಥೆಯ ವಿರುದ್ಧದ ಪ್ರತಿರೋಧವನ್ನು ತನ್ನ ಸೆರಗಿನಲ್ಲಿ ಕಟ್ಟಿಕೊಂಡ ವರ್ಗದ ಮತ್ತೊಂದು ಹೆಸರೇ ಶೋಷಿತ ವರ್ಗ. ಶೋಷಿತರ ಸಮಸ್ಯೆ ಎಂದರೆ ಭೂಮಿ-ಸಂಪತ್ತು-ರಾಜ್ಯಾಧಿಕಾರ ವಂಚನೆಯೇ ಆಗಿದೆ. ಈ ವಂಚನೆಯಿಂದಾಗಿ ಬಹುಸಂಖ್ಯಾತರು ಶ್ರಮಮೌಲ್ಯ ಶೋಷಣೆಗೆ ಒಳಗಾಗಿದ್ದಾರೆ. ಶ್ರಮಮೌಲ್ಯ ಶೋಷಣೆಗೆ ಒಳಗಾಗಿ ರುವುದರಿಂದ ಭೂಮಿ-ಸಂಪತ್ತು-ರಾಜ್ಯಾಧಿಕಾರದಿಂದ ವಂಚಿತರಾಗಿದ್ದಾರೆ. ಭೂಮಿ-ಸಂಪತ್ತು-ರಾಜ್ಯಾಧಿಕಾರಗಳನ್ನು ಪಡೆಯುವುದಕ್ಕೆ ನಿರಂತರ ಹೋರಾಡುವುದು, ದುಡಿಯುವುದು ಶೋಷಿತರ ಬದುಕಿನ ಭಾಗವಾಗಿದೆ. ಇದನ್ನೇ ವಿಸ್ತರಿಸಿಕೊಂಡು ದಲಿತರು, ಕಾರ್ಮಿಕರು, ಆದಿವಾಸಿಗಳು, ಬುಡಕಟ್ಟು ಜನರು, ನಿರುದ್ಯೋಗಿಗಳು ಮತ್ತು ದುಡಿವ ವರ್ಗದ ಮಹಿಳೆಯರು ಎಂದು ಹೇಳಬಹುದು. ಇವರೆಲ್ಲರೂ ವಿಶಾಲವಾಗಿ ಶೋಷಿತರೆ.

ಶೋಷಿತರಲ್ಲಿ ಅನೇಕ ಸ್ತರವಿನ್ಯಾಸಗಳಿವೆ. ಇದನ್ನು ಗಮನದಲ್ಲಿಟ್ಟುಕೊಂಡು ಬಹುಸಂಖ್ಯಾತ ಶೋಷಿತರನ್ನು, ಹಸಿವು-ಅವಮಾನಗಳನ್ನು ಅನುಭವಿಸುತ್ತಲೇ ಅವುಗಳ ವಿರುದ್ಧ ಪ್ರತಿರೋಧಗಳನ್ನು ಹೊಂದಿದವರನ್ನು ಶೋಷಿತರು ಎಂದು ಗುರುತಿಸಬೇಕಾಗಿದೆ. ಬಹುಸಂಖ್ಯಾತರನ್ನು ಬಹು ಮುಖ್ಯವೆಂದು ಗುರುತಿಸುವುದು ಪ್ರಜಾತಾಂತ್ರಿಕ ಪ್ರಜಾ ಪ್ರಭುತ್ವದ ನಿಯಮ ಮತ್ತು ವಿಧಾನ. ಹೀಗೆ ಖಚಿತವಾಗಿ ವಿಭಾಗ ಮಾಡದಿದ್ದರೆ ಶೋಷಿತರು ಮತ್ತು ಶೋಷಕರನ್ನು ಒಂದೇ ಚೌಕಟ್ಟಿನಲ್ಲಿ ಗುರುತಿಸುವ ಅಪಾಯ ಎದುರಾಗುತ್ತದೆ.

ಇಂಡಿಯಾದ ಆಳುವ ವರ್ಗದ ರಾಜಕಾರಣ ಸಾಮ್ರಾಜ್ಯಶಾಹಿಯೊಂದಿಗೆ ನೇರವಾಗಿ ಕೈಜೋಡಿಸಿರುವುದರಿಂದ, ಇಂಡಿಯಾದ ಆಳುವ ವರ್ಗದ ರಾಜಕಾರಣದ ಬಗ್ಗೆ ಏನೇ ಮಾತನಾಡಿದರೂ ಅದು ಸಾಮ್ರಾಜ್ಯಶಾಹಿಯ ಸಂಬಂಧದ ಚರ್ಚೆಯನ್ನು ಅನಿವಾರ್ಯವಾಗಿ ಪಡೆಯುತ್ತದೆ. ಹಾಗಾಗಿ ಸಾಮ್ರಾಜ್ಯಶಾಹಿಯ ಬಗ್ಗೆ ಚರ್ಚೆ ಮಾಡದೆ ಅಥವಾ ಅದನ್ನು ಪಕ್ಕಕ್ಕಿಟ್ಟು ಇಂಡಿಯಾದ ಆಳುವ ವರ್ಗದ ರಾಜಕಾರಣವನ್ನು ಪ್ರತ್ಯೇಕವಾಗಿ ಚರ್ಚೆ ಮಾಡಲು ಬರುವುದಿಲ್ಲ. ಇದರ ಅರ್ಥ ಇಂಡಿಯಾದ ಆಳುವ ವರ್ಗದ ಕುರಿತ ಚರ್ಚೆ ಸಾಮ್ರಾಜ್ಯಶಾಹಿಯ ಚರ್ಚೆಯ ಭಾಗವೇ ಆಗಿರುತ್ತದೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಸಾಮ್ರಾಜ್ಯಶಾಹಿಯ ಜಾಗತೀಕರಣವು ಬಂಡವಾಳ ಮತ್ತು ಮಾರುಕಟ್ಟೆಯನ್ನು ಮಾತ್ರ ಜಾಗತೀಕರಣ ಮಾಡಲಿಲ್ಲ. ಇದರ ಜೊತೆಯಲ್ಲಿ ಹಸಿವು ಮತ್ತು ಅವಮಾನಗಳನ್ನೂ ಅದು ಜಾಗತೀಕರಣ ಮಾಡಿತು. ಈ ಕೆಲಸಕ್ಕೆ ಅದು ತನ್ನ ಹೊಸಮಾದರಿಯ ರಾಜಕಾರಣವನ್ನು ಪ್ರಯೋಗಿಸಿತು. ಎರಡನೇ ಜಾಗತಿಕ ಯುದ್ಧಕ್ಕಿಂತ ಮೊದಲು ಅದು ನೇರವಾಗಿ ಮತ್ತು ಪ್ರತ್ಯಕ್ಷವಾಗಿ ಜಾಗತಿಕ ಸುಲಿಗೆಯ ರಾಜಕಾರಣ ಮಾಡುತ್ತಿತ್ತು. ಎರಡನೇ ಜಾಗತಿಕ ಯುದ್ಧದ ನಂತರ ಅದು ಜಾಗತಿಕ ಸುಲಿಗೆಗೆ ನೇರವಲ್ಲದ ಪರೋಕ್ಷ ಮಾದರಿಯನ್ನು ಅನುಸರಿಸಿತು. ಆದರೆ ಈಚಿನ ವರ್ಷಗಳಲ್ಲಿ ಅಥವಾ ಈಗ ಅದು ಪರೋಕ್ಷ ಮಾದರಿಯಾಗಿ ಉಳಿದಿಲ್ಲ. ಆಳುವ ಸರಕಾರಗಳು ಬಹುರಾಷ್ಟ್ರೀಯ ಕಂಪನಿಗಳಿಗೆ, ವಿದೇಶಿ ನೇರ ಹೂಡಿಕೆಗೆ ಮುಕ್ತ ಅವಕಾಶ ನೀಡಿವೆ ಇಲ್ಲವೆ ಅವರೇ ಇದನ್ನು ತಮ್ಮ ಹಕ್ಕೆಂಬಂತೆ ಪಡೆದುಕೊಂಡಿದ್ದಾರೆ. ಪರಿಣಾಮವಾಗಿ ಸಾಮ್ರಾಜ್ಯಶಾಹಿ ಬಿಕ್ಕಟ್ಟನ್ನು ತೃತೀಯ ದೇಶಗಳ ದಲ್ಲಾಳಿ ಆಳುವ ವರ್ಗಗಳಿಗೆ ವರ್ಗಾಯಿಸುತ್ತಿದೆ. ಅದೇ ಕಾಲಕ್ಕೆ ಆಯಾ ಆಳುವ ವರ್ಗಗಳು ತಮ್ಮ ಬಿಕ್ಕಟ್ಟನ್ನು ದುಡಿವ ಜನತೆಯ ಮೇಲೆ ವರ್ಗಾಯಿಸುತ್ತಿವೆ. ಫಲವಾಗಿ ಬಡತನ, ನಿರುದ್ಯೋಗ, ಹಸಿವು, ಅವಮಾನಗಳು ದಿನದಿಂದ ದಿನಕ್ಕೆ ತೀವ್ರವಾಗುತ್ತ ಸಾಗಿವೆ. ನಿರುದ್ಯೋಗಿಗಳ ಒತ್ತಾಯ ಪೂರ್ವಕ ಸಾವುಗಳು, ರೈತರ ಒತ್ತಾಯ ಪೂರ್ವಕ ಸಾವುಗಳು ಜಾಗತೀಕರಣ ನೀತಿಗಳಿಂದಲೇ ಸಂಭವಿಸಿದವು ಎಂದು ಹೇಳಲು ಯಾವುದೇ ದೊಡ್ಡ ಸಂಶೋಧನೆಯಾಗಲಿ, ಪಾಂಡಿತ್ಯವಾಗಲಿ ಅವಶ್ಯಕತೆಯಿಲ್ಲ. ಅಂದರೆ ಜಾಗತೀಕರಣದ ಪರಿಣಾಮದ ನೇರ ಅನುಭವ ನಮಗೆ ಸ್ಪಷ್ಟವೇ ಇದೆ. ಆದರೆ ಸಾಮ್ರಾಜ್ಯಶಾಹಿಯು ಬಳಸುವ ತಂತ್ರಗಳ ಬಗ್ಗೆ ಶೋಷಿತರಿಗೆ ಎಂದಿಗಿಂತ ಇಂದು ಹೊಸ ಬಗೆಯ ಎಚ್ಚರಿಕೆಯ ಅಗತ್ಯವಿದೆ ಎಂಬುದನ್ನು ಗಮನಿಸಬೇಕು.

ಸಾಮ್ರಾಜ್ಯಶಾಹಿಯು ತನ್ನ ಜಾಗತಿಕ ಸುಲಿಗೆಯನ್ನು ಜಾಗತೀಕರಣ, ಉದಾರೀಕರಣ, ಆಧುನೀಕರಣ, ಖಾಸಗೀಕರಣ ಎಂಬ ವರ್ಣರಂಜಿತ ಪದಗಳಲ್ಲಿ ಹೇಗೇ ಬಣ್ಣಿಸಿಕೊಂಡರೂ, ಇಂಡಿಯಾದ ಎಲ್ಲಾ ಆಳುವ ವರ್ಗಗಳು ಅವುಗಳನ್ನು ಹಾಡಿಹೊಗಳಿದರೂ ಕೂಡ ಶೋಷಿತರಿಗೆ ಅವುಗಳಿಂದ ದುಷ್ಪರಿಣಾಮಗಳಲ್ಲದೆ ಬೇರೇನೂ ಆಗುವುದಿಲ್ಲ ಎಂಬ ವಾಸ್ತವವು ನಮ್ಮ ನಿತ್ಯ ಅನುಭವದ ಭಾಗವೇ ಆಗಿದೆ. ಈ ಜಾಗತಿಕ ಸುಲಿಗೆಯ ವಿರುದ್ಧ ಜಗತ್ತಿನಾದ್ಯಂತ ಜನತೆಯ ವಿರೋಚಿತವಾದ ಪ್ರತಿರೋಧಗಳು, ಪ್ರತಿಭಟನೆಗಳು ಸಂಘಟನಾತ್ಮಕವಾಗಿ ನಡೆಯುತ್ತಲೇ ಬರುತ್ತಿವೆ. ಇವುಗಳನ್ನು ಎದುರಿಸುವ ಭಾಗವಾಗಿ ಉರುಗ್ವೆ, ಸಿಯಾಟಲ್, ದೋಹಾ ಮುಂತಾದ ಸಂಚುಗಳಿಗೆ ಸಾಮ್ರಾಜ್ಯಶಾಹಿ ಮುಂದಾಗಿದೆ. ಜನತೆಯ ನೆಲೆಯ ಪ್ರತಿರೋಧ ಮತ್ತು ಪ್ರತಿಭಟನೆಗಳನ್ನು ಅದು ಮೈಯೆಲ್ಲಾ ಕಣ್ಣಾಗಿ ಗಮನಿಸುತ್ತಿದೆ. ಸಾಮ್ರಾಜ್ಯಶಾಹಿ ಮತ್ತು ಆಳುವ ವರ್ಗದ ರಾಜಕಾರಣಗಳು ಒಟ್ಟಾಗಿ ತಮ್ಮ ವಿರುದ್ಧದ ದುಡಿವ ಜನತೆಯ ಅಸಹನೆ ಮತ್ತು ಆಕ್ರೋಶವನ್ನು ಬೇರೆ ಕಡೆಗೆ ತಿರುಗಿಸುವ ಇಲ್ಲವೆ ಹತ್ತಿಕ್ಕುವ ವಿಧಾನಗಳನ್ನು ಜಾರಿಗೊಳಿಸುತ್ತಿವೆ. ಶೋಷಣಾಯುಕ್ತ ವ್ಯವಸ್ಥೆಗೆ ಹೆಚ್ಚು ಹೆಚ್ಚು, ಹೊಸ ಹೊಸದಾಗಿ ಹೊಂದಿಕೊಂಡು ಹೋಗುವಂತೆ ವಿವಿಧ ಹುನ್ನಾರಗಳ ಮೂಲಕ ಒತ್ತಾಯಿಸುತ್ತಿವೆ. ಶೋಷಿತ ಜನರ ಹೋರಾಟ ಮತ್ತು ಸಿದ್ಧಾಂತಗಳನ್ನು ಶೋಷಿತರಿಂದ ಬೇರ್ಪಡಿಸಲು ಶತಪ್ರಯತ್ನ ಮಾಡುತ್ತಿವೆ. ಫಲಿತವಾಗಿ ಜನತೆಯ ಮೂಲಭೂತ ಸಮಸ್ಯೆಯ ಜಾಗದಲ್ಲಿ ಜನತೆಯದಲ್ಲದ ಕೃತಕ ಸಮಸ್ಯೆಯನ್ನು ತಾವೇ ಸೃಷ್ಟಿಸಿ ಅವುಗಳನ್ನು ಜಾಗತಿಕ ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಇಟ್ಟಿವೆ. ಅವುಗಳನ್ನು ವಿವರಿಸಲು, ಪರಿಚಯಿಸಲು ಮತ್ತು ಅವುಗಳ ವಿರುದ್ಧ ಹೋರಾಡಲು ಸಿದ್ಧಾಂತಗಳನ್ನೂ, ಕಾರ್ಯಕ್ರಮಗಳನ್ನೂ ಕೂಡ ಸಾಮ್ರಾಜ್ಯಶಾಹಿ ಜಾಗತಿಕ ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಇಟ್ಟಿದೆ. ಎನ್.ಜಿ.ಓ.ಗಳು ದಣಿವರಿಯದೆ ಈ ಕೆಲಸಗಳನ್ನು ಶಿರಸಾವಹಿಸಿ ಮಾಡುತ್ತಿವೆ. ಆ ಮೂಲಕ ಸಾಮ್ರಾಜ್ಯಶಾಹಿ ಶೋಷಣೆಗೆ ಮತ್ತು ಆಳುವ ವರ್ಗದ ರಾಜಕಾರಣದ ಶೋಷಣೆಗೆ ಹೊಸ ಬಗೆಯ ಸಾಮಾಜಿಕ ಬುನಾದಿಯನ್ನು ನಿರ್ಮಿಸುತ್ತಿವೆ. ನಿರ್ದಿಷ್ಟವಾಗಿ ೯೦ರ ದಶಕದ ನಂತರ ಜಾಗತಿಕ ಮಟ್ಟದಲ್ಲಿ ಸಹಜ ಅಭಿಮಾನದ ಜಾಗದಲ್ಲಿ ಅಸಹಜ ಅಂಧಾಭಿಮಾನವನ್ನು ಹುಟ್ಟುಹಾಕಲಾಯಿತು. ಧಾರ್ಮಿಕ ಮೂಲಭೂತವಾದ, ಧಾರ್ಮಿಕ ಅಂಧಾಭಿಮಾನ, ಭಾಷಿಕ ಅಂಧಾಭಿಮಾನ, ಜನಾಂಗಿಕ ಅಂಧಾಭಿಮಾನ, ಸ್ವದೇಶ ಮೂಢಾಭಿಮಾನ ಇವೇ ಮೊದಲಾದುವುಗಳನ್ನು ಜನತೆಯ ಪ್ರಧಾನ ಸಮಸ್ಯೆಗಳು

## ಘಟನೆಯೊಂದರ ನಾಲ್ಕು ದೃಶ್ಯಗಳು

-೧-

ಸತ್ತ ಮೌನದ ಒಳಗೆ
ಮುರಿದ ಜೋಪಡಿ ಕೆಳಗೆ
ಹಸಿದು ಕನಲುತಿದ್ದ
ಮೆಳ್ಳಗಣ್ಣಿನ ಮುದುಕ
ದೃಷ್ಟಿ ದಿಗಂತದತ್ತ.

-೨-

ದ್ವೇಷ ರೋಷದ ನಾಲೆ
ಗಲ್ಲಿ ಗಲ್ಲಿಯ ಮೂಲೆ
ಭುಗಿಲೆದ್ದ ಭಾವನೆಗಳಿಗೆ
ಮದ್ದುಗುಂಡಿನ ಗಸ್ತು
ಉರಿವ ದಳ್ಳುರಿಯೊಳಗೆ ಬದುಕು
ಸುಟ್ಟ ಕರಕಲು ವಸ್ತು.

-೩-

ಬೀದಿಬಯಲಿನ ತುಂಬ
ರಕ್ತ ರೌದ್ರದ ಬಿಂಬ
ಸತ್ತ ನೆತ್ತರ ನೆಕ್ಕುತಿತ್ತು
ಹಸಿದ ಬಿಸಿಲಿನ ನಾಯಿ
ನೀರವ ಗಾಳಿಯೊಳಗೆ
ಅಳುವ ಕೀರಲು ಹಾಯಿ.

-೪-

ತೊಟ್ಟಿಯಂಚಲಿ ಕಾಗೆ
ಮುದುರಿ ಗುಬ್ಬಿಯ ಹಾಗೇ
ಹೆದರಿ ಹಲುಬುತಿತ್ತು
'ಇವರೆಲ್ಲ ಏಕೆ ಹೀಗೆ ?'

ಗಣೇಶ ಹೊಸ್ಮನೆ
ಜಾನ್ಮನೆ, ಉತ್ತರ ಕನ್ನಡ ಜಿಲ್ಲೆ, ಶಿರಸಿ - ೫೮೧ ೩೧೫

ಎಂಬಂತೆ ಬಿಡಿಬಿಡಿಯಾಗಿ ಬಿಂಬಿಸಲಾಯಿತು. ಸಾಮಾನ್ಯ ಜನತೆ ತಮ್ಮ ದೈನಂದಿನ ಅನ್ನ ನೀರಿನ ಸಮಸ್ಯೆಗಳನ್ನು ಬಿಟ್ಟು ಈ ಸಮಸ್ಯೆಗಳಿಗಾಗಿ ಹೋರಾಡುವಂತೆ ಪ್ರಚೋದಿಸಲಾಯಿತು. ಇನ್ನೊಂದು ಕಡೆ ತೃತೀಯ ದೇಶಗಳ ಕೃಷಿ, ಕೈಗಾರಿಕೆ, ಸೇವಾ ವಲಯ, ಬ್ಯಾಂಕು, ಹಣಕಾಸು, ಆಡಳಿತ, ಶಿಕ್ಷಣ, ಸಂಸ್ಕೃತಿ ಮುಂತಾದ ಎಲ್ಲಾ ಕ್ಷೇತ್ರಗಳನ್ನು ಸಾಮ್ರಾಜ್ಯಶಾಹಿ ತನ್ನ ಸುಲಿಗೆಗೆ ನೇರವಾಗಿ ಬಲಿ ತೆಗೆದುಕೊಂಡಿತು. ಫಲವಾಗಿ ಸಾಮ್ರಾಜ್ಯಶಾಹಿಯ ಅವಲಂಬನೆ ಅನಿವಾರ್ಯ ಮತ್ತು ಅಗತ್ಯ ಎಂಬ ಭ್ರಮೆಯನ್ನು ಸೃಷ್ಟಿಸಲಾಯಿತು. ಈ ಮಾತನ್ನು ಉನ್ನತ ಅಕಡೆಮಿಕ್ ಆಯಕಟ್ಟಿನ ಜಾಗದಲ್ಲಿ ಇರುವವರಿಂದಲೇ ವರ್ಣರಂಜಿತ ಪದಪುಂಜಗಳಲ್ಲಿ ಮುತ್ತಿನಂತಹ ಮಾತುಗಳಲ್ಲಿ ಹೇಳಿಸಲಾಯಿತು. ಅವರು ಆ ಕಡೆ ಸಾಮ್ರಾಜ್ಯಶಾಹಿಯ ಜಾಗತೀಕರಣ ಕುರಿತು ಗುಣಗಾನ ಮಾಡುತ್ತಿದ್ದರೆ, ಈ ಕಡೆ ರೈತರು, ಕಾರ್ಮಿಕರು, ನಿರುದ್ಯೋಗಿಗಳು ತಮ್ಮ ಅಮೂಲ್ಯ ಪ್ರಾಣಗಳನ್ನು ತ್ಯಾಗ ಮಾಡುವುದರ ಮೂಲಕ ಆ ಜಾಗತಿಕ ಸುಳ್ಳುಗಳನ್ನು ಬಯಲು ಮಾಡುವಂತಹ ವಿಕೃತ ಪರಿಸ್ಥಿತಿ ನಿರ್ಮಾಣ ವಾಯಿತು. ಅಂದರೆ, ಜಾಗತೀಕರಣವನ್ನು ಕೊಂಡಾಡಿದ ಘನಪಂಡಿತರ ಮಾತು ಸುಳ್ಳು ಎನ್ನಲು, ರೈತ, ಕಾರ್ಮಿಕ, ನಿರುದ್ಯೋಗಿಗಳ ಹೆಣಗಳೇ ಬೀಳಬೇಕಾಯಿತು. ಒಂದು ಕಡೆ ಸಾಮ್ರಾಜ್ಯಶಾಹಿಯ ಮತ್ತು ಆಳುವ ವರ್ಗದ ರಾಜಕಾರಣದ ಅಟ್ಟಹಾಸ ಮುಗಿಲು ಮುಟ್ಟಿದ್ದರೆ ಮತ್ತೊಂದು ಕಡೆ ವಿಶಾಲವಾದ ಶೋಷಿತರು ಅಪಾರ ವಾದ ಸಾವು ನೋವುಗಳಿಗೆ ನಿತ್ಯ ಒಳಗಾಗುತ್ತಿದ್ದಾರೆ.

ಆಳುವ ವರ್ಗದ ರಾಜಕೀಯ ಶೋಷಣೆಗೆ ವಿರುದ್ಧವಾಗಿ ಜನತೆಯ ನೆಲೆಯಿಂದ ನೂರಾರು ಹೋರಾಟಗಳು ನಡೆಯುತ್ತಿವೆ. ಶೋಷಿತ ಜನತೆ ದಿನಬೆಳಗಾದರೆ ಆಳುವ ವರ್ಗದ ವಿರುದ್ಧದ ಹೋರಾಟವನ್ನಲ್ಲದೆ ಬೇರೇನನ್ನೂ ಮಾಡಲಾರದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಇಂತಹ ಪ್ರತಿರೋಧ ಮತ್ತು ಹೋರಾಟಗಳ ಮೂಲಕ ಶೋಷಿತ ಜನಸ್ತೋಮ ದಲ್ಲಿ ಸ್ವಯಂಸ್ಫೂರ್ತಿಯಾದ ಒಗ್ಗಟ್ಟು ಮೂಡುತ್ತಿದೆ. ಇದರಿಂದ ವಿಚಲಿತಗೊಂಡಿರುವ ಆಳುವ ವರ್ಗ ಶೋಷಿತ ಜನತೆಯ ನಡುವೆ ಇರುವ ಹಳೆಯ ಊಳಿಗಮಾನ್ಯ, ಸಾಮಂತಶಾಹಿ ಜನವಿರೋಧಿ ಸಂಬಂಧಗಳನ್ನು ನವೀಕರಿಸಿ ಹೊಸಮಾದರಿಯಲ್ಲಿ ಸಮಾಜಕ್ಕೆ ಬಿಡುವುದರ ಮೂಲಕ ಜನತೆಯ ನಡುವೆ ಹೊಸಬಗೆಯ ವೈರುಧ್ಯಗಳನ್ನು, ವೈರತ್ವವನ್ನು ಸೃಷ್ಟಿಸುತ್ತಿದೆ. ಪರಿಣಾಮವಾಗಿ ಜಾತಿ, ಕುಲ, ಪಂಗಡ, ಒಳಪಂಗಡ, ಭಾಷೆ, ಧರ್ಮ, ಗಡಿ, ಸಂಸ್ಕೃತಿ, ಪರಂಪರೆ ಇವೇ ಮುಂತಾದ ವಿಷಯಗಳು ಮುಂಚೂಣಿಗೆ ಬಂದಿವೆ. ಇವನ್ನು ಜನತೆ ತಮ್ಮ ಜೀವನ್ಮರಣದ ವಿಷಯ ಗಳೆಂದು ಪರಿಗಣಿಸುವಂತಹ ವಿಷಾದನೀಯ ಪರಿಸ್ಥಿತಿ ನಿರ್ಮಾಣವಾಗಿದೆ. ಶೋಷಿತರ ದೈನಂದಿನ ಬದುಕಿನಲ್ಲಿದ್ದ ಎಲ್ಲಾ ಬಗೆಯ ಸಹಜ ಪಾವಿತ್ರ್ಯಗಳನ್ನು, ಪವಿತ್ರ ನಂಬಿಕೆ ಗಳನ್ನು ಅವರಿಂದ ಬೇರ್ಪಡಿಸಿ ಅವುಗಳನ್ನು ಸರಕನ್ನಾಗಿಸಿ ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಇಡಲಾಗಿದೆ. ಶೋಷಿತರ ವಿಶಾಲವಾದ ಸಮಗ್ರ ದೃಷ್ಟಿಕೋನವನ್ನು ದುರ್ಬಲ ಗೊಳಿಸಲಾಗಿದೆ. ಇಲ್ಲವೇ ಅದನ್ನು ತುಂಡು ತುಂಡು ಮಾಡಲಾಗಿದೆ. ಒಂದು ಕಾಲಕ್ಕೆ ಶೋಷಿತ ಜನಸ್ತೋಮ ಯಾವುದನ್ನು ತನ್ನದೆಂದು ರಾಜಕೀಯವಾಗಿ ನಂಬಿತ್ತೊ ಅದನ್ನು ಅವರಿಂದ ಕಿತ್ತುಕೊಂಡು ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಇಡಲಾಗಿದೆ. ಪರಿಣಾಮವಾಗಿ ಜನತೆಯ ಸಮಗ್ರ ದೃಷ್ಟಿಕೋನವನ್ನು ಆಳುವ ವರ್ಗ ತನ್ನ ಹಿತಾಸಕ್ತಿಗೆ ಅನುಗುಣವಾಗಿ ರೂಪಾಂತರಿಸಿಕೊಂಡಿದೆ, ವಿಕೃತೀಕರಿಸಿ ಕೊಂಡಿದೆ. ಶೋಷಿತ ಜನಸ್ತೋಮ ತನ್ನ ವೀರೋಚಿತ ಹೋರಾಟದ ಮಹಾನ್ ಪರಂಪರೆಯಿಂದ ಪಾಠ ಕಲಿಯಲಾರದಂತೆ, ಜನತೆಯ ಪರಂಪರೆಯ ಜಾಗದಲ್ಲಿ ಶೋಷಕರ ಪರಂಪರೆಯನ್ನು ಸುತ್ತುವರೆದ ವಿಧಾನದಲ್ಲಿ ಪುನರ್ರಚಿಸಲಾಗುತ್ತದೆ. ಬೂರ್ಜ್ವಾ ಅಕಡೆಮಿಕ್ ಪಂಡಿತರು ಕಣ್ಣುಮುಚ್ಚಿಕೊಂಡು ಈ ಕೆಲಸವನ್ನು ಮಾಡುತ್ತಿದ್ದಾರೆ.

ಶೋಷಿತರು ತಮ್ಮ ಎಲ್ಲಾ ಬಗೆಯ ಹೋರಾಟ ಗಳನ್ನು ರಾಜಕೀಯಾರ್ಥಿಕ ಸಮರಗಳನ್ನಾಗಿ ಪರಿವರ್ತಿಸುವುದರ ಮೂಲಕ ರಾಜ್ಯಾಧಿಕಾರಕ್ಕಾಗಿ ತಮ್ಮ ಹೋರಾಟವನ್ನು ಕೇಂದ್ರೀಕರಿಸಬೇಕೆಂದು ಸಮಗ್ರ ಪರಿಸ್ಥಿತಿ ಇಡಿಯಾಗಿ ಒತ್ತಾಯಿಸುತ್ತಿದೆ. ಈ ನಿಟ್ಟಿನಲ್ಲಿ ಮಾತ್ರವೇ ಶೋಷಿತರ ವಿಮೋಚನೆ ಸಾಧ್ಯ ಎಂಬುದು ಈವರೆಗಿನ ಶೋಷಿತರ ಚರಿತ್ರೆಯಲ್ಲಿ ಸಾಬೀತಾಗಿದೆ. ಆದರೆ ಪ್ರಸ್ತುತ ಶೋಷಿತರ ಯಾವುದೇ ಹೋರಾಟವನ್ನು ರಾಜಕೀಯ ಹೋರಾಟವಾಗದ ರೀತಿಯಲ್ಲಿ ಅದನ್ನು ಕೇವಲ ಆರ್ಥಿಕ ಹೋರಾಟವಾಗಿಯೋ, ಧಾರ್ಮಿಕ, ಭಾಷಿಕ, ಜಾತಿ-ಜನಾಂಗಿಕ ಹೋರಾಟವನ್ನಾಗಿಯೋ ಸೀಮಿತಗೊಳಿಸುವ, ದಾರಿ ತಪ್ಪಿಸುವ ವಿಕೃತ ಕುತಂತ್ರ ಗಳನ್ನು ಉನ್ನತ ರೂಪಗಳಲ್ಲಿ ವ್ಯವಸ್ಥಿತವಾಗಿ ಜಾರಿ ಮಾಡಲಾಗುತ್ತಿದೆ. ಈ ಮೂಲಕ ಶೋಷಿತ ಜನರ ಹಿತಾಸಕ್ತಿಗಳನ್ನು ಅವರಿಂದ ಬೇರ್ಪಡಿಸುವ ಹುನ್ನಾರ ಗಳು ಮುಂಚೂಣಿಯಲ್ಲಿವೆ.

ಶೋಷಿತರ ಸಮಸ್ಯೆಗಳ ಪರಿಹಾರವು ಶೋಷಕರ ರಾಜಕಾರಣದ ಸೋಲಿನ, ಅವಸಾನದ ಮತ್ತು ಅಂತಿಮ ವಾಗಿ ಅದರ ನಾಶದಲ್ಲಿ ಅಡಗಿದೆ. ಸಧ್ಯದ ಪರಿಸ್ಥಿತಿಯಲ್ಲಿ ಶೋಷಕರ ರಾಜಕಾರಣವೆಂದರೆ ಅದು ಸಾಮ್ರಾಜ್ಯಶಾಹಿ ಕೃಪಾಪೋಷಿತ ಆಳುವ ವರ್ಗದ ರಾಜಕಾರಣವೇ ಆಗಿದೆ. ಶೋಷಕರ ರಾಜಕಾರಣದ ಸೋಲಿನ ಮಾತು ಸಲಭದ, ಹುಡುಗಾಟದ ಮಾತೇನಲ್ಲ; ಅದೇ ಕಾಲಕ್ಕೆ ಅದು ಅಸಾಧ್ಯವಾದುದೂ ಅಲ್ಲ. ಶೋಷಿತರ ನಡುವೆ ಸಾಂದ್ರವಾದ ಒಗ್ಗಟ್ಟು, ಕ್ರಾಂತಿಕಾರಿ ಪ್ರಜಾತಾಂತ್ರಿಕ ರಾಜಕೀಯ ಪಥ ಖಚಿತವಾಗಬೇಕಿದೆ. ಜನತೆಯ ನೆಲೆಯ ಎಲ್ಲಾ ಬಗೆಯ ಹೋರಾಟಗಳನ್ನು ವರ್ಗ ಹೋರಾಟಗಳನ್ನಾಗಿ ಪರಿವರ್ತಿಸಬೇಕಿದೆ. ಜನತೆಯ ನಡುವೆ ಕೃತಕವಾಗಿ ಸೃಷ್ಟಿಸಲಾಗಿರುವ ಧರ್ಮ, ಭಾಷೆ, ಜಾತಿ ಮುಂತಾದ ಎಲ್ಲಾ ಬಗೆಯ ತಾರತಮ್ಯಗಳನ್ನು ಅಳಿಸಬೇಕಿದೆ. ಶೋಷಿತರು ಮತ್ತು ಆಳುವ ವರ್ಗದ ನಡುವಿನ ವೈರುಧ್ಯವೇ ಪ್ರಧಾನ ವೈರುಧ್ಯವೆಂದು ಶೋಷಿತ ಜನರಿಗೆ ಸಾರಿಸಾರಿ ಹೇಳಬೇಕಿದೆ. ಶೋಷಿತರ ಎಲ್ಲಾ ಬಗೆಯ ಅಸಹನೆ, ಅಸಮಾಧಾನ, ಆಕ್ರೋಶ, ಹತಾಶೆ ಮುಂತಾದವುಗಳನ್ನೆಲ್ಲ ಕ್ರೂರ ಶೋಷಕ ವ್ಯವಸ್ಥೆಯ ವಿರುದ್ಧ ತಿರುಗಿಸಬೇಕಿದೆ. ಇದನ್ನು ಪ್ರಜಾ ತಾಂತ್ರಿಕ ರಾಜಕೀಯ ಶಕ್ತಿಯನ್ನಾಗಿ ಮಾರ್ಪಡಿಸ ಬೇಕಿದೆ. ಹೀಗೆ ಮಾಡುವುದರ ಮೂಲಕ ಅದಕ್ಕೆ ಶೋಷಿತರ ವಿಮೋಚನೆಯ ರಾಜಕಾರಣದ ತಾತ್ವಿಕ ಚೌಕಟ್ಟನ್ನು ಕೊಡಬೇಕಿದೆ. ವರ್ಗ ಸಂಘರ್ಷವನ್ನು ತೀವ್ರಗೊಳಿಸಬೇಕು. ಶೋಷಿತರು ಶೋಷಣಾರಹಿತ ರಾಜ್ಯಾಧಿಕಾರದ ಸ್ಥಾಪನೆಗೆ ಹೋರಾಡಬೇಕು. ಈ ಮೂಲಕ ಶೋಷಕರ ರಾಜಕಾರಣದ ಅವಸಾನ ಮಾಡಬೇಕಾಗಿದೆ. ಇದಕ್ಕೆ ಕಲೆ, ಸಾಹಿತ್ಯ, ಸಂಗೀತ, ನಾಟಕ ಇವೇ ಮುಂತಾದ ಮಾಧ್ಯಮಗಳನ್ನು ವ್ಯಾಪಕ ವಾಗಿ, ಅಷ್ಟೇ ಪರಿಣಾಮಕಾರಿಯಾಗಿ, ಬಳಸಿಕೊಳ್ಳ ಬೇಕಾಗಿದೆ. ವಿದ್ಯಾರ್ಥಿ-ಯುವ ಜನರು, ರೈತ-ಕಾರ್ಮಿಕರು, ದಲಿತರು-ಮಹಿಳೆಯರು, ಆದಿವಾಸಿ-ಬುಡಕಟ್ಟು ಜನರು, ಚಿಂತಕರು, ಸಾಹಿತಿಗಳು, ಕಲಾವಿದರು ಈ ಕ್ರಾಂತಿಕಾರಿ ಮಹಾನ್ ಆಂದೋಲನದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕಿದೆ.

*(ದಿನಾಂಕ ೨೬-೦೨-೨೦೦೫ರಂದು, ಬೆಂಗಳೂರಿನಲ್ಲಿ ನಡೆದ 'ಬಂಡಾಯ ಚಳವಳಿ ೨೫' ಸಮಾವೇಶದಲ್ಲಿ ಮಂಡಿಸಿದ ಪ್ರಬಂಧ)*

**ಡಾ|| ಬಿ. ಎಂ. ಪುಟ್ಟಯ್ಯ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬




**ಚಿಕ್ಕಮಗಳೂರಿನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ**

ಚಿಕ್ಕಮಗಳೂರು ಆಜಾದ್ ಪಾರ್ಕ್ ಎದುರಿನ ಗಣಪತಿ ರಂಗಮಂಟಪದಲ್ಲಿ ನವಕರ್ನಾಟಕ ಪುಸ್ತಕ ಮೇಳ, ಪ್ರದರ್ಶನ ಮತ್ತು ಮಾರಾಟವನ್ನು ಜಿಲ್ಲಾ ವಾರ್ತಾಧಿಕಾರಿ ಶ್ರೀ ಡಿ. ನರಸಿಂಹಮೂರ್ತಿ ಉದ್ಘಾಟಿಸಿದರು.



ಸತ್ಯವತಿ

# ಎಲ್ಲಿ ಎಡವಟ್ಟು !

ರಂಗನ ತಲೆ ಬಿಂಗ್ರಿಯಾಗಿತ್ತು. ಅವನು ದಿಙ್ಮೂಢನಾಗಿ ಮೂಲೆಯ ಕುರ್ಚಿಯಲ್ಲಿ ಮುದುಡಿ ಕುಳಿತಿದ್ದ. ಯಾವಾಗಲೂ ಮೊನಚಾಗಿ ಮಿಂಚುತ್ತಿದ್ದ ಅವನ ಮೀಸೆಯ ತುದಿಗಳು ಇಂದು ಕೆಳಗೆ ಬಾಗಿ ಸೋಲಿನ ಕಳೆಯನ್ನು ಸೂಸುತ್ತಿದ್ದವು. ಚಲ್ಲಾಪಿಲ್ಲಿ ಕೂದಲನ್ನು ಹೊತ್ತ ಅವನ ಶಿರ 'ಕೆಟ್ಟೋಡುತಿರಲೆಲೆ ಪಾಪಿ ಬಿಟ್ಟ ಮಂಡೆಯಲಿ' ಎಂಬ ಕುಮಾರವ್ಯಾಸನಿಂದ ವರ್ಣಿತವಾದ, ಉತ್ತರಕುಮಾರನ ರಣರಂಗದಲ್ಲಿನ ದಿಕ್ಕೆಟ್ಟ ಪರಿಸ್ಥಿತಿಯನ್ನು ನೆನಪಿಸುವಂತಿತ್ತು. ಬಟ್ಟಂ ಬೆಳಿಗ್ಗೆ ಗೆಳೆಯನನ್ನು ಕಾಣಲು ಬಂದ ಚಿಕ್ಕೀರ ಗಾಬರಿಗೊಂಡ.

''ಲೋ ರಂಗ! ಏನೋ ಇದು ನಿನ್ನ ಅವಸ್ಥೆ? ಏನಾಯ್ತೋ ನಿಂಗೆ? ಯಾಕೋ ಹೀಗಿದ್ದಿ? ರಂಗಾ... ಏ ರಂಗಾ... ಮಾತಾಡೋ ರಂಗ.''

ಚಿಕ್ಕೀರನ ದೀನ ನುಡಿಗಳು ರಂಗನ ಕರ್ಣರಂಧ್ರದೊಳಗೆ ಪ್ರವೇಶಿಸಲೇ ಇಲ್ಲ. ಚಿಕ್ಕೀರ ಕಂಗೆಟ್ಟ.

''ಏಯ್ ರಂಗ, ರಂಗೂ, ಇಲ್ನೋಡೋ...'' ಎನ್ನುತ್ತ ರಂಗನ ಹೆಗಲು ಹಿಡಿದು ಅಲ್ಲಾಡಿಸಿದ. ಊಹ್ಞೂಂ; ಪ್ರಯೋಜನ ಆಗ್ಲಿಲ್ಲ.

ಅಲ್ಲೇ ಇದ್ದ ಹೂಜಿಯ ನೀರನ್ನು ಗೆಳೆಯನ ಮುಖಕ್ಕೆ ರಾಚಿದ ಈರ. ಬೆಚ್ಚಿಬಿದ್ದ ರಂಗ ಪಿಳಿ ಪಿಳಿ ಕಣ್ಣುಬಿಟ್ಟು ಸ್ನೇಹಿತನನ್ನು ದಿಟ್ಟಿಸಿದ. ಒಮ್ಮೆಲೆ ಕೈಯಲ್ಲಿದ್ದ ಪತ್ರಿಕೆಯನ್ನು, ಕೋಣೆ ತುಂಬ ಹರಡಿಕೊಂಡು ಬಿದ್ದಿದ್ದ ಪೇಪರ್ ಚೂರುಗಳ ಮೇಲೆ ಒಗೆದು ಚಿಕ್ಕೀರನನ್ನು ತಬ್ಬಿಕೊಂಡು ಬೋರೆಂದು ಅಳತೊಡಗಿದ.

ರಂಗನ ಕಣ್ಣಿನಲ್ಲಿ ವರ್ಷಧಾರೆ! ಕಾರಣ ಮಾತ್ರ ತೆರೆಮರೆ!

ಚಿಕ್ಕೀರ ಹೆದರಿದ, ಆನ್-ಲೈನ್ ಲಾಟರಿಯಲ್ಲಿ ರಂಗ ನೆಲಕಚ್ಚಿದನೆ? ರಂಗನ ತಮ್ಮ ರೈತ ಆತ್ಮಹತ್ಯೆ ಮಾಡಿಕೊಂಡನೆ? ಅಡಿಕೆ ಬೆಲೆ ಬಿದ್ದುಹೋಯ್ತೆಂದು ಅವನಣ್ಣ ಓಡಿಹೋದನೆ? ಅಥವಾ ಅವನಿಗೆ ಬೇಕಾದವರು ಸರಣಿ ಬಾಂಬ್‌ಸ್ಫೋಟಕ್ಕೆ ತುತ್ತಾಗಿ ಪರಂಧಾಮವನ್ನೈದಿದರೆ?

ಆದರೆ ಅಂಥದ್ದು ಯಾವುದೂ ಘಟಿಸಿರಲಿಲ್ಲ. ಆದರೂ ಕಾರಣ ತುಂಬಾ ವಿಚಿತ್ರವಾಗಿತ್ತು. ಈ ನಮ್ಮ ರಂಗ ಬರೆಯುವ ಗೀಳಿನ ಬೆಡಗ! ಕಂಡದ್ದನ್ನು ಕಂಡ ಹಾಗೆ, ಇದ್ದದ್ದನ್ನು ಇದ್ದ ಹಾಗೆ ಬರೆದರೆ ಅದು ಇಂದಿನ ನೈಜಸ್ಥಿತಿಯ ಪ್ರತಿಬಿಂಬವೆನಿಸಿ ಸಾಹಿತ್ಯ ಕ್ಷೇತ್ರದಲ್ಲಿ ಅಜರಾಮರವಾಗಿ ಬೆಳಗುತ್ತದೆಂದು ನಂಬಿದ್ದ ನಿಜಸಾಹಿತಿ!

ಅಂತೆಯೇ ಅವನ ಲೇಖನಿಯಿಂದ ಅದ್ಭುತವಾದೊಂದು ಕಥೆ ಮೂಡಿಬಂದಿತ್ತು. ಆ ಕಥೆಯಲ್ಲಿ ಏನೆಲ್ಲ ಇತ್ತು! ಸ್ತ್ರೀಯರ ಶೋಷಣೆಯ ವಿವಿಧ ರೂಪಗಳು ಅದರಲ್ಲಿ ವರ್ಣಿತವಾಗಿತ್ತು. ವ್ಯಾಪಾರಿಗಳ ಕೌಶಲ್ಯ, ಪಾಪಿಗಳನ್ನು ಉದ್ಧರಿಸಿ ಸನ್ಮಾರ್ಗಿಗಳನ್ನಾಗಿಸುವ ಗುರುಗಳ ಕಾರುಣ್ಯ ಭರಿತ ಮನೋಭಾವ, ಭಯೋತ್ಪಾದನೆ, ಸಮಾಜದಲ್ಲಿ ನಡೆಯುವ ದೌರ್ಜನ್ಯದ ಸಕಲ ಮುಖಗಳು, ಇದರಿಂದ ತತ್ತರಿಸುವ ಜನಸಾಮಾನ್ಯರ ಬವಣೆಗಳು, ಇತ್ಯಾದಿ ಇತ್ಯಾದಿ ಸರ್ವ ವಿಷಯಗಳನ್ನೂ ಒಳಗೊಂಡಿದ್ದ ಆ ಕಥೆ ಒಂದು ರೀತಿಯಲ್ಲಿ ಹೇಳಬೇಕೆಂದರೆ ಇಂದಿನ ಸಮಾಜವನ್ನು ಪ್ರತಿನಿಧಿಸುವ 'ಎನ್‌ಸೈಕ್ಲೊಪಿಡಿಯ'ವೇ ಆಗಿತ್ತು.

ಇಷ್ಟೊಂದು ಅದ್ಭುತವಾದ ಕೃತಿಯನ್ನು ಧರೆಗಿಳಿಸಿದ ಮೇಲೂ, ಅಲ್ಲಲ್ಲ... ಪೇಪರಿನೊಳಗೆ ಇಳಿಸಿದ ಮೇಲೂ, ದುಃಖಿಸುವಂಥ ಘೋರ ಪರಿಸ್ಥಿತಿ ಹೇಗೆ ಉಂಟಾಯಿತು? ಅವನ ಈ ದಿವ್ಯ ಕೃತಿಗೆ ಪ್ರಶಸ್ತಿಯ ಸರಮಾಲೆ ಬರಲಿಲ್ಲವೆ? ಜನರು ಅವನನ್ನೂ, ಅವನ ಕೃತಿರತ್ನವನ್ನೂ ಗುರುತಿಸಿ ಪ್ರಶಂಸಿಸಲೇ ಇಲ್ಲವೆ?... ಎಂದರೆ, 'ಗುರುತಿಸಿದ್ದು' ಹೆಚ್ಚಾಗಿ ಅದೇ ಪ್ರಮಾದವಾಗಿ ಮಾರ್ಪಟ್ಟಿತ್ತು.

ಆತ ನೆನೆಸಿದ್ದೊಂದು. ಆದರೆ ಆದದ್ದು ಇನ್ನೊಂದು.

ಅಂದು ಕೋಳಿಕೂಗುವ ಹೊತ್ತಿಗೇ ದೊಡ್ಡದೊಂದು ಮಹಿಳಾ ಸಮೂಹ ರಂಗನ ಮನೆಗೆ ಬಿಜಯಂಗೈದಿತು. ಯಾವುದೋ ಸಮಾರಂಭದ ನಿಮಿತ್ತ ದಿಢೀರೆಂದು ತವರಿಗೆ ಹೋಗಿರುವ ತನ್ನ ಪತ್ನಿ ಕಮಲಿಯ ಮಹಿಳಾ ಮಂಡಲದ ಗೆಳತಿಯರು ಎಂದು ಬಗೆದು ಬಾಗಿಲು ತೆರೆದಿದ್ದ ರಂಗ.

''ಇಲ್ಲಿ ರಂಗ ಅನ್ನೋ ಲೇಖಕರು ಇದ್ದಾರಾ?'' ಸುಂದರಿಯೊಬ್ಬಳು ಪ್ರಶ್ನಿಸಿದಳು.

''ಹೌದು, ನಾನೇ ರಂಗ, ಕಮಲಿಯ ಗಂಡ'' ಸೌಜನ್ಯದಿಂದ ಉತ್ತರಿಸಿದ.

''ನೀವು ಯಾರ ಗಂಡ ಆದ್ರೆ ನಮಗೇನ್ರಿ? ಈ ಕಥೆ ಬರೆದವರು ನೀವೇ ತಾನೆ?'' ಗಂಡು ದನಿಯ ಗಡಸು ಮಹಿಳೆ ಪುನಃ ವಿಚಾರಿಸಿಕೊಂಡಳು.

'ಓಹ್! ಸ್ತ್ರೀ ಶೋಷಣೆಯ ಚಿತ್ರಣದಿಂದ ಪ್ರಭಾವಿತರಾಗಿ ತನ್ನನ್ನು ಏಳೇಳುತ್ತಲೇ ಶ್ಲಾಘಿಸಬಂದ ಲಲನೆಯರಿವರು!' ಪುಳಕಿತನಾದ ರಂಗ.

ಪ್ರಕಟವಾಗಿ ''ಹೌದುರಿ. ಅದು ನಾನೇ'' ಎಂದು ಆತುರದಿಂದ ನುಡಿದ ರಂಗನ ಕರ್ಣಗಳು ಹೊಗಳಿಕೆಯ ಹೊಸರಾಗ ಕೇಳಲು ಹಾತೊರೆದವು.

ಅಷ್ಟರಲ್ಲಿ ಎರಡು ಕೋಮಲ ಕರಗಳು ಅವನ ಕೊರಳಪಟ್ಟಿಯನ್ನು ಬಲವಾಗಿ ಹಿಡಿದವು.

''ಹೆಣ್ಣು ಎಂದರೆ ಏನೆಂದು ತಿಳಿದಿದ್ದೀಯೋ ಮೂರ್ಖ? ಹೆಣ್ಣು ಬರೀ ಅಳಬೇಕಾ?'' ಗುಟುರು ಹಾಕಿದಳು ಆ ಜೀನ್ಸ್ ಪ್ಯಾಂಟ್‌ಧಾರಿಣಿ.

''ತಾಕತ್ತಿದ್ದರೆ ಯುದ್ಧಕ್ಕೆ ಬಾರೋ. ಹೆಣ್ಣು ಅಬಲೆನ ಸಬಲೆನ ತೋರಿಸಿಬಿಡ್ತೀನಿ.'' – ಕರಾಟೆ ವರಸೆಗಳನ್ನು ಪ್ರದರ್ಶಿಸುತ್ತ ಎಗರಾಡತೊಡಗಿದಳು ಬ್ಲ್ಯಾಕ್‌ಬೆಲ್ಟ್ ಧಾರಿಣಿ.

ಯಾರ ಸಹಾಯಕ್ಕೂ ಕಾಯದೆ ವೈಟ್‌ಲಿಫ್ಟಿಂಗ್ ಚಾಂಪಿಯನ್ ಗಜದೇಹಿಯೊಬ್ಬಳು ಮುಂದೆ ಬಂದು, ಮಾತಾಡದೆ ರಂಗನನ್ನು ಎಡಗೈಲಿ ಎತ್ತಿ ಮೂಲೆಗೆ ಒಗೆದಳು. ಲೈಟ್ ಕಂಬದ ಹಾಗೆ ಸಣಕಲನಾಗಿ ಉದ್ದ ಮಾತ್ರ ಬೆಳೆದಿದ್ದ ರಂಗ ಸಲೀಸಾಗಿ ಮೂಲೆ ಸೇರಿದ್ದ.

''ಸ್ತ್ರೀ ಶೋಷಣೆ, ವರದಕ್ಷಿಣೆ ಪೀಡೆ, ಮುಂತಾದ ನೆವಗಳನ್ನು ಹೇಳಿಕೊಂಡು ಹೆಣ್ಣನ್ನು ಅಬಲೆಯನ್ನಾಗಿ

ಮಾಡಿ ಕಣ್ಣೀರಿನ ಗೊಂಬೆಯನ್ನಾಗಿಸಿದ್ದೀಯ. ದೇಶದ ಹೆಗ್ಗಳಿಕೆಯ ದ್ಯೋತಕವಾದ ಸಬಲಳಾದ ಹೆಣ್ಣನ್ನು ಕೀಳಾಗಿ ಚಿತ್ರಿಸಿ ತಮಾಷೆ ನೋಡ್ತೀಯ?'' ಮತ್ತೊಬ್ಬಳು ಗದರಿದಳು.

''ಕೋವಿ ಹಿಡಿದ ಹೆಣ್ಣು, ಕತ್ತಿ ಹಿರಿದ ನಾರಿ, ಮಾನವ ಜನಾಂಗದ ಸೂತ್ರಧಾರಿ ಸ್ತ್ರೀ, ಇಂಥ 'ಆಳುವ' ಹೆಣ್ಣನ್ನು ಹೈಲೈಟ್ ಮಾಡುವುದು ಬಿಟ್ಟು, 'ಅಳುವ' ಗೋಳಾಡುವ ಹೆಣ್ಣನ್ನು ಹೈಲೈಟ್ ಮಾಡಿ ವೀರವನಿತೆಯರನ್ನು ಅಪಮಾನಗೊಳಿಸಿರುವ ನಿನ್ನ ಮೇಲೆ ಮಾನನಷ್ಟ ಮೊಕದ್ದಮೆ ಹೂಡ್ತೀವಿ'', ವಕೀಲೆಯೊಬ್ಬಳು ಫೂತ್ಕರಿಸಿದಳು.

ಹೆಣ್ಣನ್ನು 'ಮಸಿ' ಎಂಬ ಮಚ್ಚಿನಿಂದ ಕೊಚ್ಚಿ, ಕಾಗದವೆಂಬ ಬಂಡೆ ಮೇಲೆ ಮೆತ್ತಿ, ಸ್ತ್ರೀ ಸಮೂಹಕ್ಕೇ ಅನ್ಯಾಯವೆಸಗುತ್ತಿರುವ ಈ ದೃಷ್ಟಿಹೀನನ ಕಣ್ಣುಗಳನ್ನು ಕಿತ್ತರೂ ತಪ್ಪಿಲ್ಲವೆಂದು ಕೆಲವರು ಘೋಷಿಸಿದರು. ಮಹಿಳೆಯರನ್ನು ಹೇಡಿಗಳಾಗಿ ಚಿತ್ರಿಸಿದ ರಂಗನಿಗೆ ಜೇಡಿಮಣ್ಣಿನ ಅಭಿಷೇಕ ಮಾಡಿಸದೆ ಬಿಡೆವೆಂದು ಸ್ತ್ರೀ ಸಂಘಟಕಗಳು ಪ್ರತಿಜ್ಞೆಗೈದವು.

ತಾವೀಗ ನೀಡುತ್ತಿರುವುದು ಬರೀ ಎಚ್ಚರಿಕೆ ಮಾತ್ರ. ಕಾರಣವಿಲ್ಲದೆ ತಮ್ಮನ್ನು ಕಳಪೆ ಮಾಡಿದರೆ ರಂಗನನ್ನು ಮುಂದೆ ನ್ಯಾಯಾಲಯದ ಕಟಕಟೆಯಲ್ಲಿ ತಾವು ಎದುರಿಸುವುದಾಗಿ ಸಾರಿ ಸಾರಿ ಹೇಳಿದ ಲಲನೆಯರು, ಅವನ ಲೇಖನದಿಂದ ರಂಜಿಸುತ್ತಿದ್ದ ಪತ್ರಿಕೆಯನ್ನು ಅವನೆದುರಿಗೇ ಹರಿದು ಚಿಂದಿ ಚಿಂದಿ ಮಾಡಿ, ಅವನ ಮೇಲೇ ಎಸೆದು ದುರ್ದಾನ ತೆಗೆದುಕೊಂಡವರಂತೆ ತಿರುಗಿಯೂ ನೋಡದೆ ಹೊರಟುಹೋಗಿದ್ದರು. ಹೆದರಿ ಮೂಲೆಯಲ್ಲೇ ಮುದುರಿ ಕುಳಿತಿದ್ದ ರಂಗ. ವಿಷಯ ತಿಳಿದು ಚಿಕ್ಕೀರಗೆ ಭಾರೀ ದುಃಖ ಆಯ್ತು.

''ಹೆಂಗಸರ ಬುದ್ಧಿ ಮೊಳಕಾಲಿನ ಕೆಳಗೆ ಅಂತ ಗಾದೇನೇ ಇದೆ ನೋಡು. ಅದಕ್ಕೇ ಅವರು ನಿನ್ನ ಚಿತ್ರಣವನ್ನು ವಿಪರೀತಾರ್ಥ ಮಾಡಿಕೊಂಡು ಗಲಾಟೆ ಮಾಡ್ತಾ ಇರೋದು. ನೀನೇನು ಹೆದರ್ಕೊಬೇಡ. ಎಲ್ಲಾ ಸರಿ ಆಗುತ್ತೆ.''

ರಂಗನನ್ನು ಸಮಾಧಾನಪಡಿಸುತ್ತ ಈರ ಪೇಪರ್ ತುಂಡುಗಳನ್ನೆಲ್ಲ ಕಸದ ಕುಪ್ಪೆಗೆ ಎಸೆದು ಬಂದ.

ಅಷ್ಟರಲ್ಲಿ ಬಾಗಿಲ ಬಳಿ ನೆರಳಾಡಿದಂತಾಯ್ತು. ಕಾವಿಯ ನಿಲುವಂಗಿ ಧರಿಸಿದ ಸಾಧು-ಸಂತರ ಗುಂಪೊಂದು ಅಲ್ಲಿ ಪ್ರತ್ಯಕ್ಷವಾಗಿತ್ತು.

''ಇದು ರಂಗ ಅವರ ಮನೆಯೆ?'' ವಿನಯದಿಂದ ಸಾಧುವೊಬ್ಬ ಪ್ರಶ್ನಿಸಿದ. ಅವರ ವಿನೀತಭಾವವನ್ನು ಕಂಡು ಗೆಳೆಯರಿಬ್ಬರಿಗೂ ಜೀವ ಬಂದಂತಾಯ್ತು. ಹೌದೆಂದು ಈರ್ವರೂ ತಲೆ ಆಡಿಸಿದರು.

''ನಿಮ್ಮಿಬ್ಬರಲ್ಲಿ ರಂಗ ಯಾರು? ಈ ಕಥೆಯನ್ನು ಬರೆದ ಆ ಮಹಾತ್ಮ ಯಾರು?'' ವಿನಯದಿಂದಲೇ ಪ್ರಶ್ನಿಸುತ್ತ ಪುರಪ್ರಮುಖರೊಬ್ಬರು ಒಳಬಂದರು. ಅವರ ಮಾತಿನಲ್ಲಿ ವ್ಯಂಗ್ಯ ಇರಲಿಲ್ಲವೆಂದು ಮಿತ್ರರು ಭಾವಿಸಿದರು. ಓಹ್! ಇವರೆಲ್ಲ ರಂಗನ ಕಥೆಯನ್ನು ಓದಿಬಿಟ್ಟಿದ್ದಾರೆ!

ಈಸಲ ಹಾರ ತುರಾಯಿಗಳು ಖಂಡಿತವೆಂದು ಮಿತ್ರರಿಗೆ ಖಚಿತವಾಯ್ತು. ಗುರುಗಳ ಅನುಯಾಯಿಗಳು ಬುದ್ಧಿವಂತರು. ಅವರಿಗೆ ರಂಗನ ನಿಲುವು, ಅಭಿಪ್ರಾಯಗಳು ಅರ್ಥವಾಗಿವೆ. ಆಹಾ ರಂಗನ ಭಾಗ್ಯವೇ, ಎಂದು ಚಿಕ್ಕೀರ ಸಂತಸಗೊಂಡ. ಉತ್ಸಾಹದಿಂದ ಗೆಳೆಯನನ್ನು ಪರಿಚಯಿಸಿದ. ಧರ್ಮಭೀರು ರಂಗ ತನ್ನ ಜನ್ಮ ಪಾವನವಾಯಿತೆಂದು ಭಾವಿಸಿ ಭಾವಪರವಶನಾದ.

ಒಂದಷ್ಟು ಜನರು ಒಳಗೆ ಬಂದರು. ಎಲ್ಲರ ಕೈಯಲ್ಲೂ ಹೂವಿನದಂಡೆ ಬದಲಿಗೆ ದಪ್ಪದ ದಂಟೆ! ಗೆಳೆಯರಿಗೆ ಆಘಾತವಾಯ್ತು. ಅವರ ನಿರೀಕ್ಷೆ ತಲೆಕೆಳಗಾಗಿತ್ತು.

ದಂಡಧಾರಿಗಳಾಗಿ ದೈತ್ಯಾಕಾರಿಗಳು ಒಳನುಗ್ಗುತ್ತಿದ್ದಂತೆ ಚಿಕ್ಕೀರ ಗೆಳೆಯನನ್ನು ರಕ್ಷಿಸುತ್ತ ಅಡ್ಡಬಂದ.

''ಏಯ್ ಕ್ರ್ಯಾಕ್ಲ! ಒಳ್ಳೆ ಮಾತಿಂದ ಇತ್ಲಾಗ್ ಬಾ. ಇಲ್ಲಾಂದ್ರೆ ನಿನ್ನೂ ಆಕ್ಕೊಂಡ್ ತದಕ್‌ಬಿಡ್ತೀವಿ.'' ಮುಖ್ಯದಂಡಧಾರಿ ಗುಡುಗಿದ.

''ಯಾಕ್ರಪ್ಪ? ಏನಾಯ್ತು ಅಂಥಾದ್ದು?'' ಚಿಕ್ಕೀರ ಅಮಾಯಕನಾಗಿ ಪ್ರಶ್ನಿಸಿದ.

''ನಂ ಗುರುಗಳ ಬಗ್ಗೆ ಏನೇನೋ ಬರ್‍ದಾಕಿದ್ದಾನಲ್ಲ, ಇವ್ನನ್ನ ಸುಮ್ನೆ ಬುಟ್‌ಬುಡೋಕಾಯ್ತದಾ?'' ಒಬ್ಬ ಗರಂ ಆಗಿ ನುಡಿದ.

''ನಂ ಗುರುಗಳು ಕೆಟ್ಟೋರ್ನ ಕಾಪಾಡ್ತಾರಾ? ಅಂಗಾರೆ ನಾವೆಲ್ಲ ಕೆಟ್ಟೋರ? ಬೊಗಳೊ ಏಯ್ ಕುನ್ನಿ.'' ಇನ್ನೊಬ್ಬ ರಂಗನ್ನ ಕೆಕ್ಕರಿಸಿ ನೋಡಿ ಗುರುಗುಟ್ಟಿದ. ರಂಗ ತರತರಗುಟ್ಟಿದ.

''ಪಾಪಿಗಳಿಗೆ ಆಶ್ರಯಕೊಟ್ಟು ಕಾಪಾಡ್ತಾರೆ ಅಂತ ಗೀಚಿದ್ದೀಯಲ್ಲ, ಅವ್ರೇನು ವೀರಪ್ಪನ್ ಅಂತಾನಾ ನಿನ್ನ ಲೆಕ್ಕಾಚಾರ?'' ಮತ್ತೊಬ್ಬ ಗುಡುಗಿದ.

''ಪಾಪಿಷ್ಟರನ್ನು ರಕ್ಷಿಸೋ ಭ್ರಷ್ಟರ ಗುರುಗಳು!?'' ಕೆಟ್ಟದಾಗಿ ದಿಟ್ಟಿಸಿದ ಜಟ್ಟಿಮೀಸೆಯವ.

''ಅವ್ನು ನಿಂ ಗುರುಗಳ ಬಗ್ಗೆ ಹಾಗೆ ಕೆಟ್ಟ ಅರ್ಥದಲ್ಲಿ ಬರೀಲಿಲ್ಲ...'' ಚಿಕ್ಕೀರ ವಿವರಿಸಹೊರಟ. ''ಗುರುಗಳ ಕರುಣೆ, ಪ್ರೀತಿ...''

''ಏಯ್ ನರಪೇತ್ಲ! ಬಾಯ್ಮುಚ್ಕೊಂಡು ಬಿದ್ದಿರ್ತೀಯೋ, ಇಲ್ಲ... ಇವ್ನ ಜತೆಗೆ ನಿನ್ನನ್ನೂ ಹುಟ್ಟಿಲ್ಲಾಂತ ಅನ್ನಿಸಿಬಿಡ್ಲೊ?'' ದಂಡನಾಯಕ ಅಬ್ಬರಿಸಿದ.

ಹೆದರಿಹೋದ ಗೆಳೆಯರು ಒಬ್ಬರನ್ನೊಬ್ಬರು ಕಟ್ಟಿಕೊಂಡು ನಡುಗತೊಡಗಿದರು. ಆಗ ಕಾವಿಧಾರಿಯೊಬ್ಬ ಮುಂದೆ ಬಂದು ಕೈ ಎತ್ತಿ ಶಾಂತಿ ಸಂಕೇತವನ್ನು ಸಾರಿದ. ಇಡೀ ಸಮೂಹ ಎರಡು ಹೆಜ್ಜೆ ಹಿಂದೆ ಇಟ್ಟು, ತಲೆತಗ್ಗಿಸಿ ಮೌನವಾಗಿ ಆಲಿಸಿತು.

''ಶಾಂತಿಪ್ರಿಯರಾದ ನಾವು ಹೊಡೆದಾಟಕ್ಕೆ ಬಂದವರಲ್ಲ. ಆದರೆ ಧರ್ಮದ್ರೋಹಿಯಾದ ಈ ನರಾಧಮನಿಂದ ಇದೇ ರೀತಿಯ ಅನ್ಯಾಯ ಪುನಃ ಜರುಗಿದಲ್ಲಿ ಯಾವ ದೇವರೂ ಇವನನ್ನು ರಕ್ಷಿಸಲಾರ.''

ಕಾವಿಧಾರಿಯ ಆದೇಶೋಕ್ತಿಯನ್ನು ಅರ್ಥಮಾಡಿಕೊಂಡ ದಂಡು, ದಂಟೆಸಮೇತ ಹಿಂದಿರುಗಿ ಹೊರಟುಹೋಯ್ತು. ಗೆಳೆಯರು ನಿಟ್ಟುಸಿರು ಬಿಟ್ಟರು.

ರಾಹುಕಾಲ ಗುಳಿಕಕಾಲಗಳಂಥ ಅನರ್ಥಕಾಲದಲ್ಲಿ ರಂಗನ ಕಥೆ ಪ್ರಕಟವಾಗಿರಬೇಕು. ಇಲ್ಲದಿದ್ದರೆ ಎಲ್ಲರೂ ಅಪಾರ್ಥಮಾಡಿಕೊಂಡು ಆಪಾದನೆ ಮಾಡುತ್ತಿರಲಿಲ್ಲ. ಹೀಗೊಂದು ಅನಾಹುತ ಪರಂಪರೆಯೇ ಎದುರಾಗುತ್ತಿರಲಿಲ್ಲ. ಇನ್ನೇನಾದರೂ ಘೋರ ಸಂಭವಿಸುವ ಮೊದಲು ರಂಗ ಇಲ್ಲಿಂದ ಕಣ್ಮರೆಯಾಗಿ ದೂರ ಹೋಗಿಬಿಡಬೇಕು. ಕಾಲವೇ ಎಲ್ಲಕ್ಕೂ ಮದ್ದು. ಕೆಲವು ದಿನಗಳ ಕಾಲ ರಂಗ ಇಲ್ಲಿ ಇರಲಿಲ್ಲ ಎಂದಾದರೆ ಬಿಸಿ ಆರಿ ತಣ್ಣಗಾಗುತ್ತದೆ. ರೊಚ್ಚಿಗೆದ್ದ ಜನ ಸಪ್ಪೆಯಾಗುತ್ತಾರೆ. ಹೀಗೆ ಯೋಚಿಸಿದ ಚಿಕ್ಕೀರ, ರಂಗನಿಗೆ ಆದಷ್ಟು ಬೇಗ ಭೂಗತನಾಗುವಂತೆ ಎಚ್ಚರಿಸಿದ.

ಮುಂದಿನ ಆಗು-ಹೋಗುಗಳ ಬಗ್ಗೆ ವಿಚಾರಮಾಡುತ್ತ ಕಾರ್ಯೋನ್ಮುಖರಾಗಿ ಬಾಗಿಲಿಗೆ ಬೀಗ ಜಡಿದು, ಬ್ಯಾಗನ್ನು ಹೆಗಲಿಗೇರಿಸಿ ಬೀದಿಗೆ ಬರುವಷ್ಟರಲ್ಲಿ, ಬೀದಿನಾಯಿಗಳಂತೆ ಓಡಿ ಬಂದ ಕೆಲವರು ಇವರನ್ನು ಅಡ್ಡಗಟ್ಟಿದರು.

''ಏಯ್ ನಮ್ಮ ವ್ಯಾಪಾರ ರಹಸ್ಯವನ್ನೆಲ್ಲ ಲೋಕಕ್ಕೆ ತೆರೆದಿಟ್ಟು, ಈಗ ಓಡಿಹೋಗಿ ತಪ್ಪಿಸಿಕೊಳ್ಳಬಹುದು ಅಂತ ತಿಳ್ಕೊಂಡ್ಯ?'' ವ್ಯಾಪಾರಿ ಸಂಘದವನೊಬ್ಬ ಅಬ್ಬರಿಸಿದ.

''ನಮ್ಮ ಬಾಯಿಗೆ ಮಣ್ಣು ಹಾಕಿ ನೀನು ತಣ್ಣಗಿರಬಹುದು ಅಂತ ಹೇಗೆ ತಿಳ್ಕೊಂಡ್ಯೊ?'' ಮತ್ತೊಬ್ಬ ಸವಾಲೆಸೆದ.

''ನಮ್ಮ ವ್ಯಾಪಾರದ ಒಳತಂತ್ರವನ್ನು ಹೊರ ಹಾಕಿ, ನಮ್ಮ ಕಾಲಮೇಲೆ ಕಲ್ಲು ಎತ್ತಿಹಾಕಿದ ನಿನಗೆ ಹುಲ್ಲು ತಿನ್ನಿಸದೆ ಹಾಗೇ ಬಿಟ್ಟುಬಿಡ್ತೀವೇನೋ ಮರಿ?'' ಇನ್ನೊಬ್ಬ ಇವರ ಮೇಲೆ ಏರಿಕೊಂಡೇ ಬಂದ.

ತಡಮಾಡಿದರೆ ಆಪತ್ತು ತಪ್ಪದೆಂದು ರಂಗನನ್ನು ಅವರ ಕಾಲಮೇಲೆ ಬೀಳಿಸಿ, ಚಿಕ್ಕೀರ ಗೆಳೆಯನನ್ನು ಕ್ಷಮಿಸುವಂತೆ ಪ್ರಾರ್ಥಿಸತೊಡಗಿದ.

ಅಷ್ಟರಲ್ಲಿ ಮುದುಕರ ತಂಡವೊಂದು ಆಗಮಿಸಿ, 'ರಂಗ'ನೆಂಬ ಪಾಪಿಯನ್ನು ತಮಗೆ ಒಪ್ಪಿಸಬೇಕೆಂದು ಗಲಾಟೆ ಎಬ್ಬಿಸಿತು.

ಕೆಟ್ಟ ಕೆಟ್ಟ ರೋಗಗಳಿಗೆ ಆಗರನಾದ ಮುದುಕನೊಬ್ಬನನ್ನು ಚಿತ್ರಿಸಿ, ಇಡೀ ಮುದುಕರ ಕುಲವನ್ನೇ ಕವಿ ಅವಮಾನಿಸಿದ್ದಾನೆಂದು ಮುದುಕರ ಸಂಘ ಘೋಷಿಸಿತು.

''ಕೆಟ್ಟ ರೋಗಗಳು, ಕೆಟ್ಟ ಚಾಳಿಗಳು ಮುದುಕರಿಗೆ ಮಾತ್ರ ಸೀಮಿತವೆ? ಅವು ಯುವಕರನ್ನು ಬಾಧಿಸವೆ?'' ಎಂದು ಅವರು ಕೂಗಾಡಿದರು.

ತಮಗೆ ಕಣ್ಣು ಕಾಣಿಸದ, ಕಿವಿ ಕೇಳಿಸದ ವಿಷಯಗಳನ್ನು ರಟ್ಟುಮಾಡಿ ಕವಿಯು ತಮ್ಮ ಮಾನವನ್ನು ಮೂರು ಕಾಸಿಗೆ ಹರಾಜು ಹಾಕಿರುವನೆಂದು ಅವರು ಮನನೊಂದು ದೂರಿಕೊಂಡರು.

ಅರುಳು-ಮರುಳಿನ ಪ್ರತಿನಿಧಿಗಳೆಂದು ಚಿತ್ರಿಸಿ, ಮುದುಕರನ್ನೆಲ್ಲ ಹುಚ್ಚರ ಸಾಲಿಗೆ ಸೇರಿಸಿದ ಲೇಖಕ, ಯುವ ಪೀಳಿಗೆಯಲ್ಲಿ ಹುಚ್ಚರು ಇಲ್ಲವೇ ಇಲ್ಲ ಎಂಬುದನ್ನು ಸಾಧಿಸಿ ತೋರಿಸಬಲ್ಲನೆ ಎಂದು ಸವಾಲೆಸೆದರು. ನೂರ್ಕಾಲ ಬದುಕಿ, ಅನುಭವದ ಸಾರ ಸಂಗ್ರಹರಾಗಿರುವ ಆರೋಗ್ಯಪೂರ್ಣ ವೃದ್ಧರು ಅನೇಕರಿದ್ದು, ಅವರು ಜ್ಞಾನವೃದ್ಧರೂ ವಯೋವೃದ್ಧರೂ ಆಗಿರುವಾಗ, ಒಬ್ಬ ಯಃಕಶ್ಚಿತ್ ಕವಿ ಹಿರಿಯ ಜೀವಿಗಳನ್ನು ಮತಿಹೀನರೆಂದು ಪರಿಗಣಿಸಿ ತುಚ್ಛವಾಗಿ ಕಾಣುತ್ತಿರುವುದು ಸರಿಯೆ? ಈತನ ಈ ಅನಾರೋಗ್ಯಕರವಾದ ಧೋರಣೆಯನ್ನು ಸಹಿಸಬಹುದೆ? ಎಂದು ಅವರು ಪ್ರಶ್ನಿಸುತ್ತಿದ್ದರು.

ಮದುವೆ ಮನೆಯಲ್ಲಿ ಭೋಜನ ಸಮಯದಲ್ಲಿ ಜನ ಜಮಾಯಿಸುವಂತೆ, ಈಗ ಒಂದು ರಾಶಿ ಜನ ಬಂದು ನೆರೆದರು. ಕೊಲೆ ಸುಲಿಗೆಗಳ ಬಗ್ಗೆ, ಬಾಂಬ್ ಧಾಳಿಯ ಬಗ್ಗೆ 'ಸವಿಸ್ತಾ'ರವಾಗಿ ಬರೆದ ಈ ಕವಿಯೇ ಕಳ್ಳರನ್ನು, ಕೊಲೆಗಾರರನ್ನು ತಯಾರು ಮಾಡುತ್ತಿರುವ ಭಯೋತ್ಪಾದಕ ಆಗಿರಬಹುದೆಂದು ಅವರೆಲ್ಲ ಶಂಕಿಸ ತೊಡಗಿದರು. ಇಂತಹ ಸಂಶಯಾತ್ಮಕ ವ್ಯಕ್ತಿಯ ತನಿಖೆಗೆ ಸಿ.ಬಿ.ಐ. ನೇಮಕ ಆಗಲೇಬೇಕೆಂದು ಭಾವಿಸಿ ಅವರು ಚರ್ಚಿಸತೊಡಗಿದರು.

ಮಕ್ಕಳ ಅಪಹರಣ, ಶಾಲೆಯಲ್ಲಿ ಹೇಳಿಕೊಡುವ ವ್ಯಾಕರಣ, ಪಾಠಶಾಲೆಯವರು ಕಾಟ ನೀಡಿ ಕೊಡುವ ವಿಪರೀತ ಹೊರೆಪಾಠದ ಕಿರುಕುಳ, ಮುಂತಾದ ವಿವರಗಳನ್ನು ಓದಿದ ಮಕ್ಕಳು ಸತ್ಯಾಗ್ರಹ ಹೂಡಿ ತಾವು ಎಷ್ಟು ಮಾತ್ರಕ್ಕೂ ಶಾಲೆಗೆ ಹೋಗಲಾರೆವೆಂದು ಹಟ ಹಿಡಿದ ಬಗ್ಗೆ ಅಲ್ಲಿ ನೆರೆದಿದ್ದ ತಾಯಂದಿರು ದೂರಿದರು. ಮಕ್ಕಳಲ್ಲಿ ಭಯವನ್ನು ಮೂಡಿಸಿ, ಪಾಠಶಾಲೆಗಳ ಬಗ್ಗೆ ಹೇವರಿಕೆ ಉಂಟಾಗುವಂತೆ ಮಾಡಿ, ಸಾಕ್ಷರತೆಯ ವಿರುದ್ಧ ದಂಗೆ ಏಳುತ್ತಿರುವ ದಗಾಕೋರ ಈತನೆಂದು ಅಲ್ಲಿದ್ದ ಮಕ್ಕಳ ಶಿಕ್ಷಕರು, ರಕ್ಷಕರು ಅಭಿಪ್ರಾಯಪಟ್ಟರು. ಈ ಎಲ್ಲಾ ಕಾರಣಗಳಿಂದಾಗಿ ರಂಗನಿಗೆ 'ಬುದ್ಧಿಕಲಿಸ'ಲೇ ಬೇಕಾಗಿರುವುದರಿಂದ ಆತನನ್ನು ತಮಗೇ ಒಪ್ಪಿಸ ಬೇಕೆಂದು ಇವರುಗಳೂ ಗುಲ್ಲೆಬ್ಬಿಸಿದರು. ರಂಗನಿಗಾಗಿ ಭಾರಿ ಕಿತ್ತಾಟವೇ ನಡೆದುಹೋಯ್ತು.

ಹೀಗೆ ಏಕಕಾಲದಲ್ಲಿ ನೂರಾರು ಕ್ಷಿಪಣಿಗಳು ವಿವಿಧ ದಿಕ್ಕುಗಳಿಂದ ದಾಳಿ ನಡೆಸಿ ರಂಗನನ್ನು ಘಾಸಿಗೊಳಿಸಿದವು. ರಂಗನ ಕಥೆ ಅವನು ಎಣಿಸಿದಂತೆ ಸುಂದರವಾದ ಪರಿಣಾಮ ಬೀರದೆ ವಿರುದ್ಧ ಪರಿಣಾಮ ಬೀರಿದ್ದು ಕಂಡು ಚಿಕ್ಕೀರನ ಚಿಕ್ಕಮುಖ ಮತ್ತಷ್ಟು ಚಿಕ್ಕದಾಗಿ 'ಚಿಕ್ಕು' ಹಣ್ಣಿನಂತೆ ಶೋಭಿಸಿತು.



ನೈಜ ಚಿತ್ರಣದ ಪಾತ್ರಗಳು ಜನಮನದಲ್ಲಿ ಈ ರೀತಿ ವಿಚಿತ್ರ ಆಲೋಚನೆಗಳನ್ನು ಮೂಡಿಸಬಹುದೆಂದು ಈರ ಎಣಿಸಿರಲೇ ಇಲ್ಲ. ರಂಗನ ಮೇಲಿನ ನೂರಾರು ದೂರುಗಳನ್ನು ಪರಿಶೀಲಿಸಿ, ಈತನೇ ಶಿಶುಪಾಲನ ಅಪರಾವತಾರವೆಂದು ಭಾವಿಸಿ, ಆಧುನಿಕ ಕೃಷ್ಣನೊಬ್ಬ ಹುಟ್ಟಿಕೊಂಡು, ರಂಗನನ್ನು ನಾಶಮಾಡಲು ಬರುವ ಮುನ್ನವೇ ಆತನನ್ನು ಹೇಗಾದರೂ ಮಾಡಿ ಸುರಕ್ಷಿತ ತಾಣಕ್ಕೆ ಒಯ್ದುಬಿಡಬೇಕೆಂದು ಚಿಕ್ಕೀರ ಗಡಬಡಿಸಿದ.

ಆದರೆ ಇಲ್ಲಿಯೂ ಎಡವಟ್ಟಾಯಿತು. ಇವರನ್ನು ಸುತ್ತುವರಿದು ನಿಂತ ಪತ್ರಿಕಾ ಪ್ರತಿನಿಧಿಗಳು ತಮ್ಮ ಕ್ಯಾಮೆರಾವನ್ನು ಕ್ಲಿಕ್ಕಿಸತೊಡಗಿದಂತೆ, ಆರಕ್ಷಕರು ಬೇಡಿಯೊಂದಿಗೆ ಆವಿರ್ಭೂತರಾದರು. ಕಂಗಾಲಾದ ಚಿಕ್ಕೀರ ''ರಂಗಾ'' ಎಂದು ಕಿರುಚಿ ಎಚ್ಚರಗೊಂಡ.

* * *

ಇಷ್ಟು ಹೊತ್ತು ತಾನು ಕಂಡಿದ್ದು 'ಕನಸು' ಎಂದು ಅರಿವಾದಾಗ ಚಿಕ್ಕೀರ ಸಮಾಧಾನಗೊಂಡ. ಹಿಂದಿನ ದಿನದ ಸಂಜೆ ತಾನು ಓದಿದ್ದ ರಂಗನ ಹೊಸಕಥೆ, ಈಗ ಸ್ವಪ್ನದಲ್ಲಿ ಕಂಡ ರೀತಿ ಪರ್ಯವಸಾನವಾಗಬಾರದು. ಅಂದರೆ... ಈ ಕಥೆ ಪ್ರಕಟವೇ ಆಗಬಾರದು. ರಂಗ ಅದನ್ನು ಅಂಚೆಪೆಟ್ಟಿಗೆಗೆ ಸೇರಿಸುವ ಮೊದಲೇ ತಡೆಯಬೇಕು. ಹೀಗೆ ನಿಶ್ಚಯಕ್ಕೆ ಬರುತ್ತಿದ್ದಂತೆ, ತನ್ನ ಘನ ಉದ್ದೇಶದ ಸಾಫಲ್ಯಕ್ಕಾಗಿ, ಪ್ರಿಯ ಗೆಳೆಯನ ರಕ್ಷಣೆಗಾಗಿ, ಮಧ್ಯರಾತ್ರಿಯಾಗಿದ್ದರೂ ಆ ಕೂಡಲೇ ಗೆಳೆಯನ ಮನೆಯತ್ತ ದೌಡಾಯಿಸಿದ ಚಿಕ್ಕೀರ 'ನಡುರಾತ್ರಿಯ ಪಿಶಾಚಿ'ಯಂತೆ!

**ಸತ್ಯವತಿ**
W/o ಡಾ|| ಎಸ್. ಹರಿಕೃಷ್ಣನ್
ಸರ್ಜನ್ ಡೆಂಟಿಸ್ಟ್, ಸುರತ್ಕಲ್ - ೫೭೫೦೧೪

# ಕನ್ನಡಿಗರ ಹಿರಿಮೆಗೆ ಮಹಿಳೆಯರ ಕೊಡುಗೆ

ಎಚ್. ವಿ. ಸಾವಿತ್ರಮ್ಮ

**"ಕು**ಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್"

ಕವಿರಾಜಮಾರ್ಗಕಾರನ ಈ ವಾಕ್ಯವು ಕನ್ನಡಿಗರಲ್ಲಿ ಉದ್ದೇಶಪೂರ್ವಕವಾಗಿ ಕಾವ್ಯ ವ್ಯಾಸಂಗ ಮಾಡದಿದ್ದರೂ ಕಾವ್ಯ ರಚನೆಯಲ್ಲಿ ಪರಿಣತರಾಗಿದ್ದರು ಎಂಬುದಾಗಿ ಸಾಮಾನ್ಯಾರ್ಥದಲ್ಲಿ ಈಗ ಬಳಕೆಯಲ್ಲಿದೆ. ಇಲ್ಲಿಯ "ಕಾವ್ಯ ಪ್ರಯೋಗ" ಎಂಬ ಮಾತಿಗೆ ಅನೇಕ ಟೀಕೆಟಿಪ್ಪಣಿಗಳಾಗಿವೆ. ಪ್ರಯೋಗವೆಂಬ ಪದಕ್ಕೆ ರಚನೆಯೆಂಬ ಅರ್ಥವಿಲ್ಲವೆಂದೂ ಹಿಂದಿನ ಕಾವ್ಯ ಭಾಗಗಳನ್ನು ದೃಶ್ಯ (ನಾಟಕ)ಗಳ ಮೂಲಕ ಪ್ರದರ್ಶಿಸುವರೆಂದೂ ಕೆಲವರು ವಿದ್ವಾಂಸರು ಅರ್ಥೈಸಿದ್ದಾರೆ. ಈಗ ನಾವು ಪ್ರಯೋಗಿಸು ಎಂಬ ಪದಕ್ಕೆ ಉಪಯೋಗ ಮತ್ತು ರಚನೆ ಎಂದು ಅರ್ಥಮಾಡಿದರೆ ಕವಿರಾಜಮಾರ್ಗಕಾರನ ನುಡಿಯಾದ "ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್" ಎಂಬ ಕನ್ನಡಿಗರ ಹೊಗಳಿಕೆಯ ಹಿರಿಮೆಗೆ ಏನೂ ಅಪಚಾರ ಮಾಡಿದಂತಾಗುವುದಿಲ್ಲವೆಂದು ಭಾವಿಸುತ್ತೇನೆ.

ಕಾವ್ಯವೆಂದರೇನು? ರತ್ನಾಕರವರ್ಣಿಯ ಅಭಿಪ್ರಾಯದಲ್ಲಿ ಓದುಗಬ್ಬವೂ ಹಾಡುಗಬ್ಬವೂ ಕಾವ್ಯವೆಂದು ಪರಿಗಣಿಸಲಾಗಿದೆ. ೧೯ನೆಯ ಶತಮಾನದಿಂದೀಚೆಗೆ ಅನೇಕ ಗದ್ಯಗ್ರಂಥಗಳನ್ನು ಕಾಣುತ್ತೇವೆ. ಅದಕ್ಕೆ ಮೊದಲು ವಚನ ಸಾಹಿತ್ಯವನ್ನು ಓದುಗಬ್ಬವೆಂದು ಪರಿಗಣಿಸಬಹುದು.

ಕುರಿತು ಓದಿದ 'ಕವಿ ವೃಷಭರ್ಕಳ್' ಸಂಸ್ಕೃತ, ಕನ್ನಡ, ಉಭಯ ಭಾಷಾಪಂಡಿತರಾಗಿ ಮಹಾಕಾವ್ಯಗಳನ್ನು ರಚಿಸಿರಬಹುದು. ಕುಱಿತು ಶತಮಾನದಲ್ಲಿದ್ದ ಈ ಮನೋಧರ್ಮ ಮುಂದೇನಾಯಿತು ? ಸ್ತ್ರೀ ವಿದ್ಯಾಭ್ಯಾಸದಲ್ಲಿ ಜನತೆಯ ಮನ ಹಿಮ್ಮೆಟ್ಟಿತೇಕೆ ? ಪುರುಷರು ಗುರುಕುಲವಾಸದಿಂದ ಛಂದೋವಿಚಿತ್ಯಲಂಕಾರಗಳನ್ನೂ ವ್ಯಾಕರಣವನ್ನೂ ಕಲಿತು ಸಂಸ್ಕೃತ, ಕನ್ನಡ, ಉಭಯಭಾಷಾ ಪಂಡಿತರಾಗಿ ಮಹಾಕಾವ್ಯಗಳನ್ನು ರಚಿಸಿದರೆನ್ನಬಹುದು. ಆದರೆ ಸ್ತ್ರೀಯರಿಗೆ ಈ ಸ್ವಾತಂತ್ರ್ಯವಿಲ್ಲದೆ 'ಮಾತರಿವ' ವಾಙ್ಮಯದಲ್ಲೇ ಸಿಲುಕಿ ಜಾಣೆ, ನಿಪುಣೆಯರಾದರೇ ಹೊರತು ರಚನಾತ್ಮಕ ಕಾರ್ಯಗಳಿಗೆ ತೊಡಗಲಿಲ್ಲ.

ಕವಿಚರಿತ್ರೆಯಲ್ಲಿ ಕಂಡುಬರುವ ಮೊದಲನೆಯ ಕವಯಿತ್ರಿ ಕಂತಿ, ದೋರಸಮುದ್ರದಲ್ಲಿ ಬಲ್ಲಾಳರಾಯನ ಕಾಲದಲ್ಲಿದ್ದವಳು. ಅವಳು 'ಅಭಿನವ ವಾಗ್ದೇವಿ' ಎನ್ನಿಸಿಕೊಂಡಳಂತೆ. ಹೇಗಾದಳು ? ಬಲ್ಲಾಳರಾಯನ ಮಂತ್ರಿಯ ಮಗ ವಿದ್ಯಾರ್ಥಿಗಳಿಗೆ ವಿದ್ಯೆಯನ್ನು ಕಲಿಸುತ್ತಿದ್ದಾಗ ಆತ ಮಕ್ಕಳಿಗೆ ಮತಿಪ್ರಕಾಶನಕ್ಕಾಗಿ 'ಜ್ಯೋತಿಷ್ಮತೀತೈಲ'ವನ್ನು ಮಾಡಿಟ್ಟುಕೊಂಡಿದ್ದನಂತೆ. ಅದನ್ನು ಅರಿತೋ ಅರಿಯದೆಯೋ ಕಂತಿ ಕುಡಿದಳು. ಕುಡಿದ ಕೂಡಲೆ ಸಮಸ್ಯಾ ಪೂರ್ಣಮಾಡುವ ಪಾಂಡಿತ್ಯ ಹೇಗೆ ಬಂದೀತು ? ಮಂತ್ರಿಯ ಮಗನು ಮಕ್ಕಳಿಗೆ ಪಾಠ ಹೇಳುವಾಗ ಅವಳು ಏಕಾಗ್ರತೆಯಿಂದ ಕೇಳಿ ಪಾಂಡಿತ್ಯವನ್ನು ಗಳಿಸಿರಬಹುದು (ಏಕಲವ್ಯನಂತೆ). ಜ್ಯೋತಿಷ್ಮತೀ ತೈಲದ ಸೇವನೆಯಿಂದ ಅದು ಅತಿಯಾಗಿ ಪ್ರಕಾಶಕ್ಕೆ ಬಂದು ಅವಳು ಅಭಿನವ ಪಂಪನ ಸಂವಾದಿಯಾಗಿರಬೇಕು. ಪಂಪ-ಕಂತಿಯರ ಸಮಸ್ಯಾ ಪೂರ್ಣದ ಕಂದಪದ್ಯಗಳ ಹೊರತು ಆಕೆಯ ರಚನೆಯ ಯಾವ ಕೃತಿಯೂ

ವಚನಕಾರ್ತಿಯರು ತಾವು ಕವಯಿತ್ರಿಯರು ಎಂದು ಎನ್ನಿಸಿಕೊಳ್ಳಬೇಕೆಂದು ಒಂದು ಕಡೆ ಕುಳಿತು ರಚಿಸಿದವರಲ್ಲ. ಈಚೆಗೆ ಭಾವಕ್ಕೆ ತಕ್ಕ ರಾಗ ತಾಳಗಳಿಂದ ವಚನಗಳನ್ನು ಹಾಡಿ ವಚನಕಾವ್ಯಗಳೆಂದು ಕರೆಯುವ ವಾಡಿಕೆಯಾಗಿದೆ. ಅವುಗಳನ್ನು ವಿಚಾರಗೋಷ್ಠಿಗಳಲ್ಲಿ ಅಥವಾ ಅನುಭವ ಮಂಟಪಗಳಲ್ಲಿ ನುಡಿದುದನ್ನು ಯಾರಾದರೂ ಅಕ್ಷರಸ್ಥರು ಬರೆದಿಟ್ಟರೇ ಅಥವಾ ಆ ವಚನಗಳ ಧಾಟಿ, ವಿಷಯಗಳು ಅರ್ಥವಾಗುವಂತಿದ್ದು ಒಬ್ಬರಿಂದೊಬ್ಬರು ಕಲಿತು ಮುಂದೆ ಅವು ಯಾರಿಂದಲಾದರೂ ಬರೆಯಲ್ಪಟ್ಟವೇ ಎಂಬುದು ವಿಚಾರಾರ್ಹವಾದುದು.

ಓದದವರು ತಮಗೆ ತಿಳಿದುದನ್ನು ಇತರರು ಅರಿಯುವಂತೆ ತಿಳಿಸುವ 'ಮಾತರಿವ'ರೂ ಕಿರಿದರಲ್ಲಿ ಹಿರಿಯ ಅರ್ಥವನ್ನು ತಿಳಿಸುವ 'ನಿಪುಣ'ರೂ ಜಾಣರೂ, ಬಲ್ಲಿದರೂ ಆಗಿರಬಹುದು. ಅಂಥವರ ಸಹವಾಸ, ಒಡನಾಟ, ಸಂಪರ್ಕ ಮತ್ತು ಸ್ವಯಂಪ್ರತಿಭೆ, ಎಲ್ಲಕ್ಕಿಂತಲೂ ಮುಖ್ಯವಾಗಿ ಗುರುವಿನ ಆಶ್ರಯಗಳಿಲ್ಲದೆ ಯಾರೂ ಮಹಾ ಕವಿಯಾಗಲಾರರು.

ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳ ಕವಿಗಳ ಪಟ್ಟಿಯನ್ನು ನೋಡಿದರೆ ಮೊದಲನೆಯ ಸಂಪುಟದಲ್ಲಿ ಸುಮಾರು ೪೬೩ ಕವಿಗಳ ಹೆಸರು ಬಂದಿವೆ. ಎರಡನೆಯ ಸಂಪುಟದಲ್ಲಿ ೩೮೨ ಕವಿಗಳ ಹೆಸರು ಬಂದಿವೆ. ಮೂರನೆಯ ಸಂಪುಟದಲ್ಲಿ ಸುಮಾರು ೫೬೩ ಕವಿಗಳ ಹೆಸರುಗಳು ಬಂದಿವೆ. ಅಂದರೆ ಒಟ್ಟು ೧೩೮೮ ಹೆಸರುಗಳಲ್ಲಿ (ಕೆಲವು ಪುನರಾವರ್ತನೆಯಾಗಿರಬಹುದು) ಕೇವಲ ೨೦ ಮಾತ್ರ ಸ್ತ್ರೀಯರ ಹೆಸರುಗಳಿವೆ. ಇವರಲ್ಲಿ ಯಾರೂ ಮಹಾಕಾವ್ಯವನ್ನು ರಚಿಸಿದವರಲ್ಲ.

ಮಹಾಕವಿ ಪಂಪ ತನ್ನ ಆದಿಪುರಾಣದಲ್ಲಿ ವೃಷಭನಾಥನು ತನ್ನ ಮಕ್ಕಳ ವಿದ್ಯಾರಂಭಕ್ಕೆ ಸರಸ್ವತಿಯನ್ನು ಪೂಜಿಸಿ ಹಿರಿಯ ಮಗಳು ಬ್ರಹ್ಮಿಗೆ "ಲಿಪಿಗಳುಮಂ ಬರೆದುತೋರಿದಂ", "ಬ್ರಹ್ಮಿಗೆ ದಕ್ಷಿಣ ಹಸ್ತದೊಳುಪದೇಶಂ ಗೆಯ್ದು ಸೌಂದರಿಗೆ ಗಣಿತಮಂ ಎಡದಕೈಯೊಳ್ ತೋಱಿ", "ಮತ್ತಂ ಪದ ವಿದ್ಯಾಛಂದೋವಿಚಿತ್ಯಲಂಕಾರಗಳೆಂಬ ಪೆಸರ್ವಡೆದ ವಾಙ್ಮಯಮುಮಂ ಉಪದೇಶಮಾಡಿ", "ನೀವೆ ಜಗತ್ಪಾವನೆಯರಿರಕ್ಕ" ಎಂದನಂತೆ. ಸ್ತ್ರೀ ವಿದ್ಯಾಭ್ಯಾಸದಲ್ಲಿ ಪಂಪನಿಗಿದ್ದ ಮನೋ ಧರ್ಮವೇ ಅವನ ಕೃತಿಯಲ್ಲಿಯೂ ಮೂಡಿಬಂದಿರುವುದೆಂದರೆ ತಪ್ಪಾಗಲಾರದು. ಹತ್ತನೆಯ ಗ್ರಂಥಸ್ಥವಾಗಿ ನಮಗೆ ದೊರಕದೇ ಇರುವುದು ಒಂದು ದೌರ್ಭಾಗ್ಯ. ಇನ್ನು ನಮಗೆ ದೊರಕುವ ಕಬ್ಬಿಗಿತ್ತಿಯರೆಲ್ಲ ೧೨ನೆಯ ಶತಮಾನದ ವಚನಕಾರ್ತಿಯರು. ಕಾಳವ್ವ, ಮಹಾದೇವಿ, ಮಹಾದೇವಿಯಕ್ಕ, ಮುಕ್ತಾಯಕ್ಕ, ವೀರಮ್ಮ, ಸತ್ಯಕ್ಕ ಇವರೆಲ್ಲ ಕುಱಿತು ಓದಿದವರಂತೆ ಕಾಣುವುದಿಲ್ಲ. ಆ ಕಾಲ ವೀರಶೈವಮತ ಪ್ರಚಾರದ ಕಾಲ. ಈ ಸ್ತ್ರೀಯರ ಕಾಯಕಗಳು ಬೇರೆಬೇರೆಯಾಗಿದ್ದರೂ ಅವರ ಬೆಳವಣಿಗೆ 'ಮಾತರಿವವ'ರ ಅಥವಾ ಬಲ್ಲಿದರ ಮಧ್ಯದಲ್ಲಿ. ಆದ್ದರಿಂದ ಅವರೂ ನಿಪುಣರೇ ಆಗಿರಬೇಕು. ಯಾವ ರಾಜಾಶ್ರಯಕ್ಕೂ ಒಳಗಾದವರಲ್ಲ. ಮಹಾಕಾವ್ಯರಚನೆ ಅವರಿಗೆ ಬೇಕಾಗಲಿಲ್ಲ. ಅವರವರ ಇಷ್ಟಲಿಂಗ ಭಕ್ತಿ , ಸಮಯಸ್ಫೂರ್ತಿ, ಭಕ್ತಿಭಾವ, ಸ್ವಚ್ಛಂದಲಯ, ಆಡುಮಾತಿನ ಶೈಲಿ ಇವುಗಳಿಂದ ಅವರು ನುಡಿದುದೇ ವಚನಗಳಾದುವು. ಆ ವಚನಕಾರ್ತಿಯರು ತಾವು ಕವಯಿತ್ರಿ ಯರು ಎಂದು ಎನ್ನಿಸಿಕೊಳ್ಳಬೇಕೆಂದು ಒಂದು ಕಡೆ ಕುಳಿತು ರಚಿಸಿದವರಲ್ಲ. ಈಚೆಗೆ ಭಾವಕ್ಕೆ ತಕ್ಕ ರಾಗ ತಾಳಗಳಿಂದ ವಚನಗಳನ್ನು ಹಾಡಿ ವಚನಕಾವ್ಯಗಳೆಂದು ಕರೆಯುವುದು ವಾಡಿಕೆಯಾಗಿದೆ. ಅವುಗಳನ್ನು ವಿಚಾರಗೋಷ್ಠಿಗಳಲ್ಲಿ ಅಥವಾ ಅನುಭವ ಮಂಟಪ ಗಳಲ್ಲಿ ನುಡಿದುದನ್ನು ಯಾರಾದರೂ ಅಕ್ಷರಸ್ಥರು ಬರೆದಿಟ್ಟರೇ ಅಥವಾ ಆ ವಚನಗಳ ಧಾಟಿ, ವಿಷಯಗಳು ಅರ್ಥವಾಗುವಂತಿದ್ದು ಒಬ್ಬರಿಂದೊಬ್ಬರು ಕಲಿತು ಮುಂದೆ ಅವು ಯಾರಿಂದಲಾದರೂ ಬರೆಯಲ್ಪಟ್ಟವೇ ಎಂಬುದು ವಿಚಾರಾರ್ಹವಾದುದು.

ವೀರಶೈವರು ಕಾಯಕಕ್ಕೆ ಅಗ್ರಸ್ಥಾನ ಕೊಟ್ಟಿದ್ದಾರೆ. ಈಗ ನಮ್ಮ ಗಮನಕ್ಕೆ ಬಂದ ವಚನಕಾರ್ತಿಯರು ಗೊಗ್ಗವ್ವೆ, ಕಾಳವ್ವೆ, ಮಹಾದೇವಿ. ಅಕ್ಕಮಹಾದೇವಿ,

ಕದಿರೆರೆಮ್ಮವ್ವ, ಬಿಜ್ಜಳದೇವಿ ಮೊದಲಾದವರು ತಮ್ಮ ತಮ್ಮ ಕಾಯಕವೇ ಲಿಂಗ ಕೈಂಕರ್ಯವೆಂದು ಭಾವಿಸಿದವರು. ಇದಕ್ಕೆ ಉದಾಹರಣೆ : ಕದಿರೆರೆಮ್ಮವ್ವ ನೂಲು ತೆಗೆಯುವವಳು. ಆಕೆಯ ವಚನ ಹೀಗಿದೆ : ನಾತಿರುಹುವ ರಾಟಿಯ ಕುಲಜಾತಿಯ ಕೇಳಿರಣ್ಣಾ, ಅಡಿಯಣ ಹಲಗೆ ಬ್ರಹ್ಮ ತೋರಣ ವಿಷ್ಣು, ನಿಂದ ಬೊಂಬೆ ಮಹಾರುದ್ರ, ರುದ್ರನ ಬೆಂಬಿಳಿಯವೆರಡು ಸೂತ್ರದ ಕರ್ಣ ಅರುವೆಂಬ ಕದಿರು. ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು ಕದಿರು ತುಂಬಿತ್ತು , ರಾಟಿಯ ತಿರುಹಲಾರೆ ಎನ್ನ ಗಂಡ ಕುಟ್ಟಿಹ, ಇನ್ನೇವೆ ಕದಿರೆಮ್ಮಿಯೊಡೆಯ ಗುಮ್ಮೇಶ್ವರಾ. ಕೊಟ್ಟಣದ ಸೋಮವ್ವನ ವಚನ : ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಲ್ಲ, ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ, ಅರಿಯದಾದಡೆ ಹೋಗಲಿ ಅರಿದು ಬೆರೆದೆನಾದಡೆ ಕನ್ನಗತ್ತಿಯಲ್ಲಿ ಕಿವಿಯ ಕೊಯ್ವರಯ್ಯ ಬಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ. ಅಕ್ಕಮಹಾದೇವಿಯ ಭಾವ ಹೀಗಿದೆ : ಶರಣಸತಿ-ಲಿಂಗಪತಿ ಶ್ರೀಶೈಲಮಲ್ಲಿಕಾರ್ಜುನ ಲಿಂಗವೇ ತನ್ನ ಪತಿ. ಸಾವ, ಕೆಡುವ, ಮಾನವಗಂಡರು ಬೇಕಿಲ್ಲವೆನ್ನುವ ಭಾವ.

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಕುರುಹಿಲ್ಲದ ಚೆಲುವಂಗಾನೊಲಿದೆ ಅವ್ವಾ. ನೀನು ಕೇಳಾ ತಾಯೆ. ಧನವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ ನಾನೊಲಿದೆ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ ಈ ಸಾವ, ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ಈ ಶರಣೆಯರು ಕಾಯಕದಲ್ಲಿ ಕೈವಲ್ಯವನ್ನು ಕಂಡುಕೊಂಡು ಕಂಡದ್ದನ್ನು ನುಡಿಯ ಬಲ್ಲ ಪ್ರವೀಣೆಯರು. ಈ ಶರಣೆಯರೆಲ್ಲರೂ ೧೨ನೆಯ ಶತಮಾನದವರು. ೧೩-೧೪ನೆಯ ಶತಮಾನದಲ್ಲಿ ರುದ್ರಭಟ್ಟ, ಜನ್ನ, ಕುಮಾರವ್ಯಾಸ, ಲಕ್ಕಣ್ಣದಂಡೇಶ ನಿಜಗುಣ ಶಿವಯೋಗಿ ಮೊದಲಾದ ಪ್ರಸಿದ್ಧ ಕವಿಗಳು ಮಹಾಕಾವ್ಯಗಳನ್ನು ರಚಿಸಿದರೂ ಯಾವ ಕವಯಿತ್ರಿಯ ಹೆಸರಾಗಲಿ ವಚನಕಾರ್ತಿಯರ ಹೆಸರಾಗಲಿ ಕೇಳಿ ಬರುವುದಿಲ್ಲ. ಆ ಕಾಲದಲ್ಲಿ ಸ್ತ್ರೀಯರ ಸಂಸ್ಕೃತಿ, ಕಾಯಕ, ದಿನಚರಿಗಳು ಅನೂಚಾನವಾಗಿ ನಡೆದು ಬಂದರೂ ಪುರುಷಪ್ರಧಾನವಾದ ಸಮಾಜದಲ್ಲಿ ವೀರಶೈವರು ಅನುಭವ ಮಂಟಪದಲ್ಲಿ ಚರ್ಚೆಗಳಲ್ಲಿ ಭಾಗವಹಿಸಲು ಸ್ತ್ರೀಯರಿಗೆ ಅವಕಾಶ ಕೊಟ್ಟಂತೆ, ಬೇರೆ ಮಹಿಳೆಯರಿಗೆ ಅವಕಾಶ ಸಿಕ್ಕಲಿಲ್ಲವೇ ? ಸ್ತ್ರೀಯರ ವಾಗ್ಧೋರಣೆ ಕುಂಠಿತವಾದುದೇಕೆ ? ಗೃಹಕೃತ್ಯದ ಹೊಣೆಗಾರಿಕೆಯನ್ನು (ಯಂತ್ರಯುಗವಲ್ಲ) ಹೊತ್ತ ಮಹಿಳೆಗೆ ಇತರ ವ್ಯವಹಾರ ವೇಕೆಂದು ಸುಮ್ಮನಾದರೆ ? ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ವಚನಕಾರ್ತಿಯರು ಆಗಿಹೋಗಿರಬಹುದು ಅಥವಾ ಸ್ತ್ರೀಯರಿಂದ ಸಣ್ಣಪುಟ್ಟ ರಚನೆಗಳಾದರೂ ಅವು ಲಿಖಿತಕ್ಕೆ ಯೋಗ್ಯವಾಗಿರಲಿಲ್ಲವೇ ? ಅಂದು ಮಹಾಕಾವ್ಯವನ್ನು ರಚಿಸಿದವರೆಲ್ಲ ಸಂಸ್ಕೃತ ಕನ್ನಡ ಉಭಯಭಾಷಾ ಪ್ರಕಾಂಡ ಪಂಡಿತರು. ಸ್ತ್ರೀಯರಿಗೆ ಸಂಸ್ಕೃತ ಕಾವ್ಯಶಾಸ್ತ್ರವನ್ನು ಅಭ್ಯಸಿಸಲಾಗದಿರಬಹುದೇ ? ವಿಚಾರಾರ್ಹವಾದುದು.

ಮತ್ತೆ ನಾವು ಕಾಣುವುದು ಸಂಚಿಯ ಹೊನ್ನಮ್ಮನನ್ನು (೧೭ನೆಯ ಶತಮಾನ). ವಿಜಯನಗರದ ಪರಂಪರೆಯನ್ನು ನಡೆಸಿಕೊಂಡು ಬಂದ ಮೈಸೂರು ರಾಜ ಚಿಕ್ಕ ದೇವರಾಜರ (೧೬೮೦) ಆಸ್ಥಾನದಲ್ಲಿದ್ದವಳು ಸಂಚಿಯ ಹೊನ್ನಮ್ಮ. ಆಕೆಯು ಎಳಂದೂರು ಕಡೆಯಿಂದ ರಾಣಿ ದೇವಾಜಮ್ಮಣ್ಣಿಯವರೊಡನೆ ಸಂಚಿಯ ಊಳಿಗದವಳಾಗಿ ಬಂದವಳೆಂದು ಪ್ರತೀತಿ. ಅವಳ ಊಳಿಗ ಅರಮನೆಯಲ್ಲಿ. ಅವಳ ಕಾಯಕ ಸಂಚಿಯ ಊಳಿಗವಾದರೂ ಜನ್ಮತಃ ಪ್ರತಿಭಾವಂತಳಿದ್ದಿರಬಹುದು. ಕುರಿತು ಓದುತ್ತಿದ್ದ ರಾಣಿಯರ ಸಹವಾಸದಿಂದ ಅವಳ ಕಾವ್ಯ ಪ್ರತಿಭೆ ಅರಳಿತು. ಅದನ್ನು ಗುರುತಿಸಿ ಅವಳನ್ನು "ಸರಸಸಾಹಿತ್ಯದವರ ದೇವತೆ" ಎನ್ನಿಸಿ ಕೊಳ್ಳುವಂತೆ ಮಾಡಿ ಬೆಳಕಿಗೆ ತಂದವರು ಅಳಸಿಂಗ ರಾರ್ಯರು. ಅಳಸಿಂಗರಾರ್ಯರು ಅವಳಿಗೆ ಗುರುವಾಗಿ ಸಂಸ್ಕೃತ ಭಾಷಾಗ್ರಂಥ, ಕಾವ್ಯಶಾಸ್ತ್ರ ವಿಷಯ, ಧರ್ಮಶಾಸ್ತ್ರವೆಲ್ಲವನ್ನೂ ಅವಳಿಗೆ ಕಲಿಸಿದರು. ಅವರು ವಿಶಿಷ್ಟಾದ್ವೈತ ಮತಸ್ಥರಾದುದರಿಂದ ಅದೇ ನಿಷ್ಠೆಯನ್ನು ಅವಳಲ್ಲಿ ಬೆಳಸಿ "ಕಬ್ಬೊನ್ನು ಚೆಂಬೊನ್ನಾದಂತೆ" ಅವಳನ್ನು ತಿದ್ದಿದರು. ಅವಳ ಕವಿತಾ ಸಾಮರ್ಥ್ಯವನ್ನು ಮಹಾರಾಜರು ಅರಿತು ಕಾವ್ಯರಚನೆ ಮಾಡೆಂದು ಅಪ್ಪಣೆ ಕೊಡಿಸಿದರು. ಹೊನ್ನಮ್ಮ ಮಹಾಕಾವ್ಯವನ್ನು ರಚಿಸಬಲ್ಲಂಥ ಕವಯಿತ್ರಿಯಾದರೂ ಅವಳು ಆರಿಸಿ ಕೊಂಡಿದ್ದು ೧೮ ವರ್ಣನೆಯ ಮಹಾಕಾವ್ಯವನ್ನಲ್ಲ, ಕಂದ ವೃತ್ತಗಳು ಅಥವಾ ಷಟ್ಪದಿಯ ಶೈಲಿಯನ್ನಲ್ಲ. ಆಗಿನ ಕಾಲದ ಗೃಹಿಣಿಯ ಧರ್ಮವನ್ನು, ಅದು ಹಾಡುಗಬ್ಬವಾಗುವಂತೆ ಸಾಂಗತ್ಯ ಶೈಲಿ. ಅದೇ 'ಹದಿಬದೆಯ ಧರ್ಮ'. ಚಿಕ್ಕದೇವರಾಜರ ಅಡಿಯೂಳಿಗ ಮೊಂದು, ಅರಸಿಯರ ಅಡಿಯೊಲ್ಮೆಯೊಂದು ಅವಳ ಅಭಿಲಾರ್ಥ ಸಾಧನೆಗೆ ನೆರವಾಯಿತಂತೆ. ಅಂದಿನ ದಿನಚರಿ ಈ ಕಾಲಕ್ಕೆ ಹೊಂದಲಾಗದಿದ್ದರೂ ಅದರ ಸತ್ತ್ವ, ಅದರ ನೀತಿ, ಅದರ ಸಮರಸಭಾವ ಈ ಕಾಲಕ್ಕೂ ಅನ್ವಯಿಸುವುದು. ಆಗಿನ ಕಾಲದ ಸ್ತ್ರೀಯರ ಸ್ಥಾನಮಾನವನ್ನು ತಿಳಿಸುವ ಒಂದು ವಿಶಿಷ್ಟಗ್ರಂಥ. ಮೈಸೂರೊಡೆಯರ ಆಸ್ಥಾನದಲ್ಲಿದ್ದ ತಿರುಮಲಾರ್ಯ, ಚಿಕುಪಾಧ್ಯಾಯ ಮುಂತಾದ ಕವಿಗಳೊಡನೆ ಸಂಚಿಯ ಊಳಿಗದ ಹೊನ್ನಮ್ಮನಿಗೂ ಸ್ಥಾನ ಕೊಟ್ಟು ಪ್ರೋತ್ಸಾಹಿಸಿದುದು ಮಹಾರಾಜರ ಔದಾರ್ಯವನ್ನು ಸೂಚಿಸುತ್ತದೆ.

ಚಿಕದೇವರಾಜರ ಪೋಷಣೆಯ ವರ್ಗಕ್ಕೆ ಸೇರಿದ ಶೃಂಗಾರಮ್ಮನೂ ಸಾಂಗತ್ಯದಲ್ಲಿ 'ಪದ್ಮಿನೀ ಕಲ್ಯಾಣ'ವನ್ನು ರಚಿಸಿದ್ದಾಳೆ. ಆಕೆಯ ಗುರು ಶ್ರೀನಿವಾಸ ದೇಶಿಕಾಚಾರ್ಯರು. ಮೈಸೂರೊಡೆಯರು ಸ್ತ್ರೀವಿದ್ಯಾಭ್ಯಾಸಕ್ಕೆ ಹೆಚ್ಚು ಪ್ರೋತ್ಸಾಹ ಕೊಡುತ್ತಾ ಬಂದರು. ರಾಣಿಯರು ಮತ್ತು ರಾಜಕುಮಾರ್ತಿಯರಿಗೂ ವಿದ್ಯಾವಶ್ಯಕತೆ ಉಂಟೆಂದು ಅವರಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ದೊಡ್ಡಕೃಷ್ಣರಾಜರ (೧೭೧೩) ಪಟ್ಟಮಹಿಷಿ ಚೆಲುವಾಂಬೆಯವರು 'ವರನಂದೀ ಕಲ್ಯಾಣ', 'ವೆಂಕಟಾಚಲಮಹಾತ್ಮೆ', 'ಲಾಲಿಪದ', 'ತಲಕಾವೇರಿ ಮಹಾತ್ಮೆ', 'ಕೃಷ್ಣಕರ್ಣಾಮೃತದ ಟೀಕೆ' ಬರೆದಿದ್ದಾರೆ. ಇವರೆಲ್ಲ ಕುರಿತು ಓದಿದವರ ವರ್ಗಕ್ಕೆ ಸೇರಿದವರು. ಇವರಲ್ಲದೆ ಹಾಡಿನ ರಂಗಮ್ಮ, ಹಾಡಿನ

ವೆಂಕಟಲಕ್ಷ್ಮಮ್ಮ ಮೊದಲಾದವರು ಶ್ರೀಕೃಷ್ಣಪಾರಿಜಾತವೇ ಮುಂತಾದ ಪೌರಾಣಿಕ ಕಥೆಗಳನ್ನು ಆಧರಿಸಿದ ಹಾಡುಗಳನ್ನು ಹಾಡುತ್ತಿದ್ದರಂತೆ.

ಹೆಳವನಕಟ್ಟೆ ಗಿರಿಯಮ್ಮ (೧೭೫೦)ನಿಗೆ ಯಾವ ರಾಜರ ಆಶ್ರಯವೂ ಇದ್ದಿರಲಾರದು. ಆಕೆ ರಂಗನಾಥನ ಭಕ್ತಳು. ಭಕ್ತಿಭಾವ ಬೆಳೆದ ಪರಿಸರ, ಆಚರಿಸುವ ಸಂಸ್ಕೃತಿ ಇವು ಭಕ್ತಿಪ್ರಧಾನವಾದ ಹಾಡುಗಳನ್ನು ರಚಿಸಲು ಪ್ರೇರಕವಾದುವು. ಜೈಮಿನಿ ಭಾರತದ ಕಥೆಯನ್ನು ಆಧರಿಸಿ ಚಂದ್ರಹಾಸನ ಕಥೆ, ಸೀತಾಸ್ವಯಂವರ, ಉದ್ದಾಳಿಕನ ಕಥೆ ಸಾಂಗತ್ಯದಲ್ಲಿ ಬರೆದಿರುವಳೆಂದರೆ ಆಕೆಗೆ ಅಷ್ಟೋ ಇಷ್ಟೋ ಸಾಹಿತ್ಯಾಭ್ಯಾಸವಾಗಿರಬೇಕು.

ಹಾಡುಗಳನ್ನು ರಚಿಸಿದ ಹರಪನಹಳ್ಳಿ ಭೀಮವ್ವ (೧೮೨೩-೧೯೦೩)ನ ಹಾಡುಗಳಲ್ಲಿ ಮುಖ್ಯವಾಗಿ ಶಾಸ್ತ್ರದ ಹಾಡುಗಳು, ಹಸೆಗೆ ಕರೆಯುವ, ಆರತಿಯೆತ್ತುವ, ಭೂಮಕ್ಕೆ ಬಡಿಸುವ, ಆಪೋಶನ ಹಾಕುವ ಒಂದೆ, ಎರಡೇ ಎಲ್ಲ ಸಂಪ್ರದಾಯದ ಹಾಡುಗಳೂ ಆಕೆಯ ರಚನೆಗೆ ಒಳಪಟ್ಟಿವೆ. ಆಕೆ ಅಕ್ಷರ ಕಲಿತವಳಲ್ಲ. ಆಕೆ ಜನಿಸಿದಾಗ ಮೈತುಂಬ ಚಕ್ರಗಳು, ಕಾಲಿನಲ್ಲಿ ಪದ್ಮಗಳೂ ಕಾಣಿಸುತ್ತಿದ್ದುವಂತೆ. ಆಕೆ ಜನಿಸಿದ್ದು ಹರಿದಾಸ ಪರಂಪರೆ ಯಲ್ಲಿ, ಅಲ್ಲಿ ಹರಿಭಕ್ತಿ ಭಜನೆಗಳ ವಾತಾವರಣ. ಆಕೆಯಲ್ಲಿ ಬೀಜರೂಪವಾಗಿದ್ದ ಹರಿಭಕ್ತಿ ಚಿಗುರೊಡೆದು ಹೆಮ್ಮರ ವಾಗಿ ಹಾಡಿನ ರೂಪದಲ್ಲಿ ಫಲ ಬಿಟ್ಟಿತು. ಸಂಸಾರದ ಸುಖವನ್ನನುಭವಿಸದೆ ಎರಡು ಮಕ್ಕಳ ತಾಯಿಯಾಗಿ ಕೇವಲ ೩೬ ವರ್ಷಗಳಿಗೇ ವಿಧವೆಯಾದ ಆಕೆ ದಾರಿತೋರದೆ ಶ್ರೀಕೃಷ್ಣ ಪರಮಾತ್ಮನನ್ನು ಧ್ಯಾನಿಸುತ್ತಾ ಮಲಗಿರಲು ಕನಸಿನಲ್ಲಿ ಕೃಷ್ಣಸರ್ಪವೊಂದು ನಾರದನ ಆಜ್ಞೆಯಂತೆ ಭೀಮವ್ವನ ನಾಲಿಗೆಯ ಮೇಲೆ ಮೂರಕ್ಷರವನ್ನು ಬರೆದಂತಾಯಿತಂತೆ. ಅಂದಿನಿಂದ ಆಕೆಯ ಜೀವನವೇ ಮಾರ್ಪಾಡಾಗಿ ರಾತ್ರಿ ಕನಸಿನಲ್ಲಿ ಕೃಷ್ಣನ ಲೀಲೆಗಳೆಲ್ಲವನ್ನೂ ಕಾಣುತ್ತಿದ್ದಳಂತೆ. ಅದು ಬೆಳಗಾಗಲು ಹಾಡಿನ ರೂಪ ತಾಳುತ್ತಿದ್ದವಂತೆ. ಆಕೆ ಛಂದಸ್ಸಿಗಾಗಿ ತಿಣುಕಾಡಲಿಲ್ಲ. ಪ್ರಾಸಕ್ಕಾಗಿ ಹುಡುಕಾಡಲಿಲ್ಲ. ಸಮಯಸ್ಫೂರ್ತಿಯಿಂದ ತಕ್ಕ ಧಾಟಿಯಲ್ಲಿ ಭಕ್ತಿಪರವಾದ ಹಾಡುಗಳು ಹೊರಹೊಮ್ಮುತ್ತಿದ್ದುವು. ಹರಿಕಥಾ ಶ್ರವಣ, ಪುರಾಣ ಶ್ರವಣ ಇವುಗಳೇ ಆಕೆಯ ಹಾಡಿನ ಸೃಷ್ಟಿಗೆ ಬೋಧಕಗಳಾಗಿದ್ದುದರಿಂದ ಭಗವಂತನ ದಶಾವತಾರ, ಭಗವಂತ ಭೃಗುಮುನಿಯ ಕೋಪಕ್ಕೆ ಒಳಗಾದುದು, ಸಾಮಜವರದ ನಾದ ಬಗೆ, ಮೋಹಿನಿಯ ಅವತಾರ ಮೊದಲಾದ ಭಗವಂತನ ಸಾಕ್ಷಾತ್ಕಾರದ ಕಥೆಗಳಲ್ಲದೆ ಸ್ತ್ರೀಯರ ಮನೋಭಾವವನ್ನು ವ್ಯಕ್ತಪಡಿಸುವ ಸಂವಾದದ ಹಾಡುಗಳೂ ನಳಚರಿತ್ರೆ ಮೊದಲಾದ ಪೂರ್ವಕಥೆಯ ಪ್ರಸಂಗಗಳೂ ಆಕೆಯ ನಿರೂಪಣೆಗೆ ಒಳಪಟ್ಟಿವೆ. ಆಕೆ ನಿಜವಾಗಿಯೂ ೧೯ನೆಯ ಶತಮಾನದ ಕುರಿತೋದದ ಕಾವ್ಯ ಪರಿಣತಿಯುಳ್ಳ ಕವಯಿತ್ರಿ ಎನ್ನಲು ಸಂಶಯವಿಲ್ಲ.

ಈ ಸರಣಿಯಲ್ಲಿ ಆಲೋಚಿಸಿದರೆ ಕುರಿತೋದದೆಯ ಪರಿಣತಿ ಹಠಾತ್ತನೆ ಬಂದುದಲ್ಲ. ಕಾವ್ಯಪರಿಣತಿಯ ಸೆಲೆ ಗುಪ್ತಗಾಮಿನಿಯಾಗಿ ಅಲ್ಲಲ್ಲೇ ಚಿಮ್ಮಿ ಬುಗ್ಗೆಗಳೆದ್ದು ಹರಿದುಬರುತ್ತಲೇ ಇದೆ. ಇದರ ಇನ್ನೊಂದು ರೂಪವೇ ಜನಪದ ಸಾಹಿತ್ಯ. ಹೆಣ್ಣಿನ ದಿನಚರಿ, ಜೀವನದ ಆಲಾಪವೇ ಒಂದು ಕಾವ್ಯಸಾಹಿತ್ಯ. ಉದಯರಾಗ, ಅಕ್ಕ-ತಂಗಿಯರು, ಅಣ್ಣ-ತಮ್ಮಂದಿರು, ಬಂಧು-ಬಾಂಧವರು, ಮಕ್ಕಳ ಬಾಲಲೀಲೆ, ಜೋಗುಳಪದ, ಕಷ್ಟಸುಖ ಇವುಗಳೆಲ್ಲ ತ್ರಿಪದಿಯಲ್ಲಿ ಅಥವಾ ಅದನ್ನು ಚೌಪದಿಯಾಗಿ ಭಾವಕ್ಕೆ ತಕ್ಕ ಯಾವ ರಾಗದಲ್ಲಾದರೂ ಹಾಡಿಕೊಳ್ಳುವ ಸಾಂಗತ್ಯವಾಗಿ ಜನಪದದಲ್ಲಿ ಸೇರಿ ಹೋಗಿವೆ. ವಚನಕಾರ್ತಿಯರು ಕಾಯಕದಲ್ಲಿ ಇಷ್ಟಲಿಂಗವನ್ನು ಕಾಣುತ್ತಿದ್ದಂತೆ ಇತರ ಹೆಣ್ಣುಮಕ್ಕಳೂ ಬೀಸುವಾಗ, ಕುಟ್ಟುವಾಗ, ಬಾವಿಯ ನೀರೆಳೆದು ತುಂಬುವಾಗ, ಹೊಲಗದ್ದೆಗಳಲ್ಲಿ ಕೆಲಸಮಾಡುವಾಗ ಕೆಲಸದ ದಣಿವು ತೋರದೆ ಹಗುರವಾಗುವಂತೆ ಹಾಡಿಕೊಳ್ಳುವ ಪರಿಪಾಟು ಅಂದಿನಿಂದ ಇಂದುವರೆಗೂ ಬಂದಿದೆ. ಉದಾಹರಣೆಗೆ: ವಡ್ಡರಕಾಯಕದ ಹೆಣ್ಣು ಮಗಳೊಬ್ಬಳು ಬಾವಿಯ ಹೂಳು ತೆಗೆಯುವುದಕ್ಕೆ ಒಪ್ಪಿ ಕೊಂಡು ಬಾವಿಗೆ ಇಳಿದಳು. ಆಕೆಯ ಪುರುಷನೇ ಮೇಲೆ ನಿಂತ. ಆಕೆ ಹೂಳನ್ನೆತ್ತಿ ಬಾವಿ ಯಲ್ಲಿದ್ದ ಕಬ್ಬಿಣದ ಬುಟ್ಟಿಗೆ ಹಾಕುತ್ತಿದ್ದಳು. ಹಾಕುವಾಗ ಒಂದು ಸಾಲುಪದವನ್ನು ಗಟ್ಟಿಯಾಗಿ ಹಾಡುತ್ತಿದ್ದಳು. ಮೇಲಿದ್ದ ಆತ ಅದನ್ನೆಳೆದು ಮೇಲೆ ಚೆಲ್ಲುತ್ತಾ ಮತ್ತೊಂದು ಸಾಲನ್ನು ಅವಳ ಸಾಲಿಗೆ ಉತ್ತರವಾಗಿ ಹಾಡುತ್ತಿದ್ದ. ಅದೊಂದು ಪ್ರೇಮಗೀತೆಯಂತಿತ್ತು. ಕೆಲಸವಾದ ಮೇಲೆ ಆಕೆಯನ್ನು ಈ ಪದವನ್ನು ಯಾರು ಹೇಳಿಕೊಟ್ಟರೆಂದು ಕೇಳಿದಾಗ ಅವಳ ಉತ್ತರ ಹೀಗಿತ್ತು: "ಅವ್ವ ನಮಗೆ ಅಂಗೆ ಕೇಳಿ ಕೇಳಿ ಬರ್ತದೆ. ಆಯಾಸ ಆಗಕಿಲ್ಲ ಅಂತ ಅಂಗೇ ಏಳ್ಕೊತೀವಿ" ಅಂದಳು. ಇಂಥ ಪದಗಳನ್ನು ಕೇಳುತ್ತಲೋ ಅಥವಾ ಹೇಳಿಸಿ ಕೊಂಡೋ ಪರಂಪರಾಗತವಾಗಿ ಬಾಯಿಪಾಠವಾಗಿ ಬಂದು, ಈಚೆಗೆ ಗ್ರಂಥಸ್ಥ ವಾಗಿವೆ. ಅವೇ ಗರತಿಯ ಹಾಡುಗಳು. ಸ್ತ್ರೀಯರ ಹಾಡಿನ ತ್ರಿಪದಿಯೇ ಕಾವ್ಯರಚನೆಗೆ ಮೂಲವೆಂದೂ ತ್ರಿಪದಿಯೇ ಕಾವ್ಯದ ಗಾಯತ್ರಿ ಎಂದೂ ದ.ರಾ. ಬೇಂದ್ರೆಯವರು ಹೇಳಿದ್ದಾರೆ. ಕನ್ನಡ ವೃತ್ತಗಳ ಭಾವಕ್ಕೆ ತಕ್ಕ ರಾಗ, ರಾಗಕ್ಕೆ ತಕ್ಕ ಆಡುಮಾತಿನ ಜೋಡಣೆ, ಅಚ್ಚ ಕನ್ನಡ ಪದಗಳ ವಿನ್ಯಾಸ ಇಂತಹ ಲಘು ಸಾಹಿತ್ಯವನ್ನೊದಗಿಸಿಕೊಟ್ಟ ಬಲ್ಲಿದರಾದ ಅಜ್ಞಾತ ಕವಯಿತ್ರಿಯರಿಗೆ ಕನ್ನಡಿತಿಯರು ಚಿರಋಣಿಗಳಾಗಿರಬೇಕು.

ಎಲೆಮರೆಯ ಕಾಯಿಯಂತೆ ಕಣ್ಮರೆಯಲ್ಲೇ ಕನ್ನಡಮ್ಮನ ಸೇವೆ ಸಲ್ಲಿಸಿರುವ, ಸಲ್ಲಿಸುತ್ತಿರುವ ಮಹಿಳೆಯರ ಕ್ಷಮೆ ಬೇಡಿ ನಾ ಕಂಡಂತೆ - ೧೯೨೦ರಿಂದ ಈಚೆಗೆ ನಮ್ಮ ಅಜ್ಜಿ ೧೯ನೆಯ ಶತಮಾನದವರು. ಆ ಕಾಲದಲ್ಲಿ ಅಜ್ಜಿಯ ಕಥೆಗಳೂ ಗಾದೆ ಮಾತುಗಳೂ ಪುಸ್ತಕಗಳಿಗೆ ಇಳಿಯುವವರೆಗೂ 'ಕೆಲವಂಬಲ್ಲವರಿಂದೆ' ಕಲಿತದ್ದೆ. ಒಬ್ಬರಿಂದೊಬ್ಬರಿಗೆ ಹೇಳಿ ಕೇಳಿ ಜೀವಂತವಾಗಿ ಉಳಿದುಬಂದ ಸಾಹಿತ್ಯ. ನಮ್ಮಜ್ಜಿ ಓದಿದವರಲ್ಲ. ಆದರೆ ಆದಿಪ್ರಾಸ, ಅಂತ್ಯಪ್ರಾಸ ಮತ್ತು ಜೋಡುನುಡಿಗಳ ಗಾದೆ ಮಾತುಗಳನ್ನೂ ಅವುಗಳ ಹಿಂದಿರುವ ಕಥೆಗಳನ್ನೂ ಲೀಲಾಜಾಲವಾಗಿ ಹೇಳುತ್ತಿದ್ದರು. ಓದುಬರಹ ಬಾರದಿದ್ದರೂ ಆಗಿಂದಾಗ್ಗೆ ಸಮಯಕ್ಕೆ ಸರಿಯಾದ ಮಾತುಗಳನ್ನು ಜೋಡಿಸಿ ಆಶುಕವಿತೆಗಳನ್ನು ರಚಿಸುವ ಕಲೆ ಅನೇಕ ಸ್ತ್ರೀಯರ ವಶವಾಗಿತ್ತು. ಈಗ್ಗೆ ೬೦-೭೦ ವರ್ಷಗಳ ಹಿಂದೆ ಸಾಮಾನ್ಯವಾಗಿ ಮಧ್ಯಮವರ್ಗದ ಕುಟುಂಬಗಳಲ್ಲಿ ಅಡಿಗೆ ಊಟ ಮುಗಿದಮೇಲೆ ಒಂದೆರಡು ಗಂಟೆಗಳ ಕಾಲ ಯಾರಾದರೊಬ್ಬರ ಮನೆಯಲ್ಲಿ ಮಹಿಳೆಯರು ಸೇರುವುದು. ಅಲ್ಲಿ ಯಾರಾದರೂ ದೊಡ್ಡ ಹಾಡುಗಳು ಎಂದರೆ ಸಾಮಾನ್ಯವಾಗಿ ಅನಸೂಯ ಚರಿತ್ರೆ, ಶ್ರೀನಿವಾಸ ಕಲ್ಯಾಣ, ಹನುಮದ್ವಿಲಾಸ, ಉದ್ದಾಲಕನ ಹಾಡು, ಗೊಲ್ಲತಿ ಕುಮುಲೆ ಹಾಡು, ಸುಭದ್ರಾ ಕಲ್ಯಾಣ, ರುಕ್ಮಿಣೀ ಕಲ್ಯಾಣ ಮೊದಲಾದ ಹಾಡುಗಳನ್ನು ಹಾಡುವುದು. ಎಲ್ಲರೂ ಅವರವರ ದಿನಚರಿಯ ಕೆಲಸಗಳನ್ನು ಎಂದರೆ ಎಲೆ ಹಚ್ಚುವುದು, ದೇವರಿಗಾಗಿ ಹತ್ತಿ ಬತ್ತಿ ಮಾಡಿಕೊಳ್ಳುವುದು, ಕಾಳನ್ನು ಆರಿಸುವುದು, ಕೈ ಹೊಲಿಗೆ ಮಾಡುವುದು ಇಂತಹ ಸುಲಭವಾದ ಕೆಲಸಗಳನ್ನು ಮಾಡಿಕೊಳ್ಳುತ್ತಾ ಹಾಡನ್ನು ಕೇಳಿ ಒಂದು ದಿನ ಮಂಗಳ ಮಾಡುವುದು ಇದು ರೂಢಿಯಲ್ಲಿತ್ತು. ಜಾಗರಣೆ ದಿವಸಗಳಲ್ಲಿ ಈಗಿನಂತೆ ರೇಡಿಯೋ ಟಿ.ವಿ.ಗಳಿರಲಿಲ್ಲ. ಹರಿಕಥೆ ಅಥವಾ ಭಗವಂತನ ಧ್ಯಾನದಲ್ಲಿ ಹಾಡುಗಳನ್ನು ಹೇಳುತ್ತಾ ಅಥವಾ ಕೇಳುತ್ತಾ ಜಾಗರಣೆ ಮಾಡುತ್ತಿದ್ದರು. ಹಿಂದಿನ ಕಾಲದ ಕೆಲವು ಅಜ್ಜಿಯರು ಹಾಡುಗಳನ್ನು ಹೇಳಿಕೊಡುತ್ತಿದ್ದರೇ ಹೊರತು ಬರೆದುಕೊಳ್ಳುವುದಕ್ಕೆ ಹೇಳುತ್ತಿರಲಿಲ್ಲ. ಅಂಥವರ ಲ್ಲೊಬ್ಬರು ದೇವಜ್ಜಿ. ಅವರು ಶ್ರೀನಾಥನು ಮೋಹಿನಿರೂಪ ತಾಳಿದ ಹಾಡು, ವಿಭೀಷಣನು ಅಣ್ಣನಿಗೆ ಹೇಳಿದ ನೀತಿ, ಮತ್ತೊಂದು ವಿಶಿಷ್ಟತೆಯ ಹಾಡೆಂದರೆ ಶ್ರೀರಾಮನ ರಾಜಸಭೆಯಲ್ಲಿ ಲಕ್ಷ್ಮಣ ನಕ್ಕನಂತೆ. ಕಾರಣ ಹದಿನಾಲ್ಕು ವರುಷ ವನವಾಸದಲ್ಲಿದ್ದಾಗ ಅವನಿಗೆ ಬರದಿದ್ದ ಆಕಳಿಕೆ. ರಾಜಸಭೆಯಲ್ಲಿ ಬಂತಂತೆ. ಅದಕ್ಕೆ ಅವನಿಗೆ ನಗು ಬಂದಿತಂತೆ. ಶ್ರೀರಾಮನು ಲಕ್ಷ್ಮಣನ ನಗುವಿನ ಕಾರಣವನ್ನು ಕೇಳುವುದರಲ್ಲಿ ಪೂರ್ಣ ರಾಮಾಯಣದ ಕಥೆಯೇ ಅಡಗಿರುವ ಹಾಡು. ದೇವಜ್ಜಿಯ ಅಭಿಪ್ರಾಯದಲ್ಲಿ ಬರೆದುಕೊಂಡರೆ ಪುಸ್ತಕದಲ್ಲೇ ಉಳಿಯುತ್ತೆ. ಹೇಳಿಸಿಕೊಂಡರೆ ಬಾಯಿಪಾಠವಾಗುತ್ತೆ. ಕೆಲವರಿಗೆ ಕಂಡದ್ದನ್ನು ಕಂಡಂತೆ ಹಾಡಿನ ರೂಪದಲ್ಲೇ ಹೇಳುವ ಕಲೆ ಅವರದಾಗಿತ್ತು. ಅಂಥವರಲ್ಲಿ ಅಂಬಕ್ಕ ಒಬ್ಬರು. ಊರಿಗೆಲ್ಲ ಅವರು ಅಂಬಕ್ಕ. ಅವರು ಕನ್ನಡ ಓದು ಬರಹವನ್ನು ಕಲಿತವರು. ಅವರ ವಿಶೇಷತೆಯೇನೆಂದರೆ ಉಪನಯನ, ವಿವಾಹ, ಹುಟ್ಟಿದಹಬ್ಬ, ಮತ್ಯಾವುದಾದರೂ ಸಮಾರಂಭಗಳ ವಿವರ ಗಳನ್ನೂ, ಅಲ್ಲಿ ಉಂಟಾಗುವ ಹಾಸ್ಯ ಪ್ರಸಂಗಗಳನ್ನೂ ಯಾವುದಾದರೂ ಹಾಡಿನ ರೂಪದಲ್ಲೇ ವರದಿ ಮಾಡುವುದು. ಆ ಕಲೆ ಅವರಿಗೇ ಮೀಸಲಾದುದೆನ್ನಬಹುದು. ಅವರು ಈಗ ಶತಾಯುಷಿಯಾಗುವುದರಲ್ಲಿದ್ದಾರೆ. ಭಗವಂತನು ಅವರಿಗೆ ಆರೋಗ್ಯ ಕೊಡಲಿ. ೨೦ನೆಯ ಶತಮಾನದ ಮೊದಲನೆಯ ದಶಕದಲ್ಲಿ ಹೆಣ್ಣುಮಕ್ಕಳು ಅಕ್ಷರಸ್ಥರಾಗುವುದಕ್ಕೆ ಪ್ರೋತ್ಸಾಹ ಸಿಕ್ಕಿತು. ಮೈಸೂರು ಮಹಾರಾಜರೂ ಮತ್ತು ಅನೇಕ ಗಣ್ಯರು (ಅಂಬಳೆ ಅಣ್ಣಯ ಪಂಡಿತರು ಮತ್ತು ವಿ. ನರಸಿಂಹ ಐಯ್ಯಂಗಾರ್ ಮುಂತಾದವರು) ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟರು. ಕನ್ನಡಿತಿಯರಲ್ಲಿ ಕೆಲವರು ಓದುವುದನ್ನೂ ಬರೆಯುವುದನ್ನೂ ಹವ್ಯಾಸವಾಗಿಟ್ಟುಕೊಂಡರು. ಅವರ ಸಂಖ್ಯೆ ಬಹಳ ವಿರಳ. ಅವರಲ್ಲಿ ನಂಜನಗೂಡು ತಿರುಮಲಾಂಬ ಅವರು ಗಣ್ಯರು. ತಿರುಮಲಾಂಬ ಅವರು ಬಾಲವಿಧವೆ. ಪ್ರಾಥಮಿಕ ಶಾಲೆಯಲ್ಲಿ ಓದಿ ಅಲ್ಲಿಗೆ ಶಾಲಾ ವಿದ್ಯಾಭ್ಯಾಸವನ್ನು ಬಿಟ್ಟವರು. ತಮ್ಮ ಕಾಲವನ್ನು ವ್ಯರ್ಥವಾಗಿ ಕಳೆಯದೇ ತಮ್ಮ ವಿದ್ಯಾಭಿರುಚಿಯನ್ನು ಬೆಳೆಸಿಕೊಂಡು ಗ್ರಂಥಗಳನ್ನು ಓದಿ ಕಥೆ, ಕಾದಂಬರಿ, ನಾಟಕ, ಪ್ರಬಂಧಗಳಿಂದ ಕನ್ನಡ ಭಂಡಾರವನ್ನು ತುಂಬಿದುದಲ್ಲದೆ 'ಸತಿ ಹಿತೈಷಿಣಿ' ಗ್ರಂಥಮಾಲೆಯನ್ನು ನಡೆಸಿದರು. ರಾಧಾಬಾಯಿ, ಸರಸೂಬಾಯಿ ಮೊದಲಾದವರ ಒಂದು ರಾಗದ ಧಾಟಿಯನ್ನು ಹಿಡಿದು ಪದಗಳನ್ನು ಜೋಡಿಸಿ ಸಂಪ್ರದಾಯದ

ಹಾಡುಗಳು ಮತ್ತು ಭಕ್ತಿಗೀತೆಗಳನ್ನು ಯಥೇಚ್ಛವಾಗಿ ಬರೆದರು. ಅವು ಮುದ್ರಣಕ್ಕೆ ಸಿದ್ಧವಾಗಿವೆ. ೨೦ನೆಯ ಶತಮಾನದ ಎರಡನೆಯ ದಶಕದಲ್ಲಿ ಸ್ತ್ರೀ ವಿದ್ಯಾಭ್ಯಾಸವು ಹೆಚ್ಚಾಯಿತು. ಆಗ ಕನ್ನಡನಾಡಿನ ಶಾಲೆಗಳಲ್ಲಿ ಕನ್ನಡ ಪದ್ಯಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು. ವಿದ್ಯಾರ್ಥಿನಿಯರಿಗೆ ಷಟ್ಪದಿ ಕಾವ್ಯಗಳ ಪರಿಚಯವಾಯಿತು. ನಮ್ಮ ಮಾತೃಶ್ರೀ ಎಸ್. ಪಾರ್ವತಮ್ಮನವರು ಜೈಮಿನಿ ಭಾರತದ ಪದ್ಯಗಳು, ಹರಿಶ್ಚಂದ್ರ ಕಾವ್ಯದ ಪದ್ಯಗಳು, ಸಾವಿತ್ರೀ ಚರಿತ್ರೆ, ನಳಚರಿತ್ರೆ, ಸೋಮೇಶ್ವರ ಶತಕದ ಪದ್ಯಗಳು ಬಾಯಿಪಾಠವಾಗಿ ಹೇಳಿಕೊಳ್ಳುತ್ತಿದ್ದರು. ಅಷ್ಟೇ ಅಲ್ಲದೆ ''ನಡೆವರೆಡಹದೆ ಕುಳಿತರೆಡಹುವರೇ?'' ''ಬೇಲಿ ಹೊಲನೆಲ್ಲಂ ಮೇದೊಡೆ'' ಇಂಥ ಗಾದೆ ಮಾತುಗಳನ್ನು ನಿತ್ಯಜೀವನದಲ್ಲಿ ಬಳಸುತ್ತಿದ್ದರು.

ಕನ್ನಡದ ಕಣ್ವರೆನಿಸಿದ ಬಿ. ಎಂ. ಶ್ರೀ. ಅವರು ಕನ್ನಡಕ್ಕೆ ಹೊಸ ಚೈತನ್ಯವನ್ನು ತುಂಬಿದ ಮೇಲೆ ಎಲ್ಲೆಲ್ಲೂ ಕನ್ನಡದ ಕೆಚ್ಚು ಬಹು ವಿಸ್ತಾರವಾಯಿತು. ಕನ್ನಡ ಭಾಷೆಯನ್ನು ವಿವಿಧ ಸ್ತರಗಳಲ್ಲಿ ಬೆಳೆಸಬೇಕೆಂಬ ಹಮ್ಮು ಕನ್ನಡಿಗರಲ್ಲಿ ಬೆಳೆಯಿತು. ವಿಶಾಲ ಕರ್ನಾಟಕವಾದ ಮೇಲಂತೂ ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕ, ಮೈಸೂರು ರಾಜ್ಯಗಳಲ್ಲಿ ವಿದ್ವಾಂಸರು ಪಾಂಡಿತ್ಯಪೂರ್ಣ ಗ್ರಂಥಗಳನ್ನು ಬರೆದು ಅತ್ಯುನ್ನತವಾದ ಜ್ಞಾನಪೀಠ ಪ್ರಶಸ್ತಿಗಳನ್ನು ಪಡೆದು ಕನ್ನಡಿಗರ ಘನತೆ ಗೌರವಗಳನ್ನು ಹೆಚ್ಚಿಸಿ ಕನ್ನಡನಾಡಿಗೆ ಕೀರ್ತಿ ತಂದಿದ್ದಾರೆ. ಆದರೆ ಮಹಿಳೆಯರು ಇನ್ನೂ ಅಂತಹ ಆಳವಾದ ಪಾಂಡಿತ್ಯ ಪೂರ್ಣವಾದ ಗ್ರಂಥ ರಚನೆಗಳಿಗೆ ಕೈಹಾಕದೆ ಲಘು ಸಾಹಿತ್ಯ ಗ್ರಂಥಗಳನ್ನು ಆಯಾ ಪ್ರಾಂತೀಯ ಕನ್ನಡದಲ್ಲಿ ರಚಿಸಿ ರಾಜ್ಯಮಟ್ಟದ ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಈಗ ಅಧ್ಯಯನಕ್ಕೂ ಅಭಿವ್ಯಕ್ತಿಗೂ ಅವಕಾಶವಿರುವಾಗ ಮಹಿಳೆಯರು ಏಕಾಗ್ರತೆಯಿಂದ ಜ್ಞಾನಪೀಠ ಪ್ರಶಸ್ತಿಯನ್ನು ಪಡೆಯುವಂಥ ಮಹತ್ಕಾರ್ಯಕ್ಕೆ ತೊಡಗಲಿ ಎಂದು ಹಾರೈಸೋಣ.

ಸದ್ಯದಲ್ಲಿ ಉದ್ಯೋಗಾವಕಾಶಗಳೇ ಪ್ರಧಾನವಾಗಿ ಇಂಗ್ಲಿಷ್ ಭಾಷೆಗೇ ಮಹತ್ತ್ವ ಕೊಡಬೇಕಾಗಿರುವುದರಿಂದ ೧೦-೨೦ ವರ್ಷಗಳಿಂದೀಚೆಗೆ ವಿದ್ಯಾರ್ಥಿಗಳು ಅದರಲ್ಲೂ ಪಟ್ಟಣವಾಸದವರು ಕನ್ನಡಕ್ಕೆ 'ಕನ್ನಡ ಕಷ್ಟ' ಎಂಬ ಪಟ್ಟವನ್ನು ಕಟ್ಟಿ ಕನ್ನಡ ಎಂದರೆ ಮೂಗು ಮುರಿಯುವವರಿದ್ದಾರೆ. ಒಂದು ಕಾಲದಲ್ಲಿ ಇಂಗ್ಲಿಷ್ ಪದಗಳನ್ನು ಕನ್ನಡಕ್ಕೆ ಸೇರಿಸಿ ಆಡು ಭಾಷೆಯನ್ನು ನಾಟಕಗಳಲ್ಲಿ ಪ್ರಯೋಗಿಸಿ ಟಿ. ಪಿ. ಕೈಲಾಸಂ ಅವರು ವಿಡಂಬಿಸಿದ್ದಾರೆ. ಈಗ ಕನ್ನಡದ ಮಕ್ಕಳಿಂದ ಅದರಲ್ಲು ಪಟ್ಟಣವಾಸದ ಮಕ್ಕಳಿಂದ ಕನ್ನಡ ಅಭಿನಯ ಗೀತೆಗಳು ಮಾಯವಾಗಿ ಇಂಗ್ಲಿಷಿನ ಗುಲಾಬಿ ಉದುರಿದ ಹಾಡು, ಜಾಕ್ ಬಿದ್ದ ಹಾಡು ಇವುಗಳನ್ನೇ ಕೇಳಿ ತೃಪ್ತಿ ಪಟ್ಟುಕೊಳ್ಳಬೇಕಾಗಿದೆ. ಆಚಾರ್ಯ ಬಿ.ಎಂ.ಶ್ರೀ. ಅವರು ''ಅವಳ ತೊಡಿಗೆಯನಿವಳಿಗಿಟ್ಟು ನೋಡ ಬಯಸಿದೆ'' ಎಂಬ ಸಾಲಿನ ಮೂಲಕ ಕನ್ನಡದ ವ್ಯಾಪ್ತಿ ಹೆಚ್ಚಾಗಲಿ ಎಂದರೇ ಹೊರತು ಅವಳು ಬಂದು ಇವಳ ಸ್ಥಾನವನ್ನು ಆಕ್ರಮಿಸಲಿ ಎನ್ನಲಿಲ್ಲ.

ಒಂದು ಕಾಲದಲ್ಲಿ ''ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ ನಾವು ಸಮ ನಿಮಗೆಂಬ ನುಡಿವ ಬಲವಿಲ್ಲ''ವೆಂದು ಕನ್ನಡದ ಹಿರಿಯ ಸಾಹಿತಿ ಕೊರಗಿದ ಕಾಲವೊಂದಿತ್ತು. ಅದನ್ನು ತಳ್ಳಿಹಾಕಿ ಕನ್ನಡಕ್ಕೆ ಹೊಸ ಚೈತನ್ಯವನ್ನು ಕೊಟ್ಟು ಕನ್ನಡದ ಗ್ರಂಥಗಳು ವಿಪುಲವಾಗಿ ಬೆಳೆಯಲು ದಾರಿತೋರಿದವರು ಮತ್ತು ರಚಿಸಿದವರ ಕಾಲ ಮುಗಿಯುತ್ತಾ ಬಂತು. ಈಗ ವಿದ್ಯಾಭ್ಯಾಸದಲ್ಲಿ ಸ್ತ್ರೀ ಪುರುಷರಿಗೆ ಸಮನಾದ ಅವಕಾಶವಿದೆ. ವಿಷಯ ವೈವಿಧ್ಯತೆಯ ಕಥೆ, ಕಾದಂಬರಿ, ನಾಟಕ, ವಿಚಾರ ವಿಮರ್ಶೆ, ಶಾಸ್ತ್ರ, ವಿಜ್ಞಾನ, ಹಾಸ್ಯಪ್ರಬಂಧ, ಮಕ್ಕಳಸಾಹಿತ್ಯ, ಕವನಸಂಗ್ರಹ, ಇವುಗಳನ್ನು ಸ್ತ್ರೀಯರೂ ಪುರುಷರೂ ಯಥೇಚ್ಛವಾಗಿ ರಚಿಸುತ್ತಿದ್ದಾರೆ. ಬರೆಯುವವರ, ಪ್ರಕಾಶಕರ ಸಂಖ್ಯೆ ಏರುತ್ತಲೇ ಇದೆ. ಈಗ ಪಟ್ಟಣಗಳಲ್ಲಿ ಕನ್ನಡ ಮಕ್ಕಳಿಗೆ ಕನ್ನಡ ಪದಗಳಿಗೆ ಇಂಗ್ಲಿಷ್‌ನಲ್ಲಿ ಅರ್ಥ ಹೇಳಬೇಕಾದ ಕಾಲ ಬಂದಿದೆ. ಕನ್ನಡದಲ್ಲಿ ಕೆಲವರಿಗೆ ಮಾತ್ರ ಆಸಕ್ತಿ ಇದೆ. ಕನ್ನಡವು ಸಾರ್ವಜನಿಕರ ಆಕಾಂಕ್ಷೆ ಅಭಿವ್ಯಕ್ತಿಗೆ ಒಳಪಡಬೇಕು. ಯಾವ ವಿದ್ಯಾರ್ಥಿಯ ಕೈಯಲ್ಲಿ ನೋಡಿದರೂ ಇಂಗ್ಲಿಷ್ ನಾವೆಲ್ಲೇ ಕಾಣುತ್ತದೆ. ಈ ಪರಿಸ್ಥಿತಿಯಲ್ಲಿ ಪ್ರಕಟವಾದ ಕನ್ನಡ ಪುಸ್ತಕಗಳನ್ನು ಓದುವ ಕಿರಿಯರು ಮುಂಬರುತ್ತಾರೆಯೆ? ಅದನ್ನು ಸಾಧಿಸುವುದು ಕೋಟಿಗಟ್ಟಲೆ ಖರ್ಚಾಗುತ್ತಿರುವ ಸಾಹಿತ್ಯ ಸಮ್ಮೇಳನಗಳೇ? ಸಾಹಿತ್ಯ ಪರಿಷತ್ತುಗಳೇ? ಕನ್ನಡಾಭಿವೃದ್ಧಿ ಪ್ರಾಧಿಕಾರ ದವರೇ? ಉದ್ಯೋಗಾವಕಾಶವನ್ನು ಕಲ್ಪಿಸಿಕೊಡುವ ಸರ್ಕಾರವೇ? ಕನ್ನಡ ಕಲಿಸುವ ಉಪಾಧ್ಯಾಯರೇ? ಕೊಂಡು ಓದುವ ಅಭಿಮಾನಿಗಳೇ? ಅಥವಾ ಮಕ್ಕಳ ಮೊದಲ ಗುರು ತಾಯಂದಿರೇ? ಎಲ್ಲರೂ ಎಚ್ಚೆತ್ತುಕೊಳ್ಳಬೇಕು. ಅಚ್ಚಾದ ಕನ್ನಡ ಪುಸ್ತಕಗಳು ವೃಥಾ 'ರದ್ದಿ'ಯಾಗದಂತೆ ಓದುವ ಸಹೃದಯರಿರಬೇಕೆಂಬ ಜನ್ನ ಕವಿ ಹೇಳುವ ''ಕಟ್ಟಿಯುಮೇನೋ ಮಾಲೆಕಾರನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ'' ವ್ಯರ್ಥವಾಗದಂತೆ ಕಾಪಾಡುವ ಹೊಣೆಗಾರಿಕೆ ಮುಂದಿನ ಪೀಳಿಗೆಯವರ ಮೇಲಿದೆ. ಕವಿರಾಜಮಾರ್ಗಕಾರನ ಕನ್ನಡ ನಾಡವರು ''ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್'' ಎಂಬ ಹೆಮ್ಮೆಯು ಉಜ್ವಲಗೊಳ್ಳುವಂತೆ ಮಾಡಲು ಪುರುಷ ಪ್ರಯತ್ನದೊಡನೆ ಸ್ತ್ರೀಶಕ್ತಿಯೂ ಕೈಗೂಡಲಿ ಎಂದು ಹಾರೈಸೋಣವೇ?

ಎಚ್. ವಿ. ಸಾವಿತ್ರಮ್ಮ
C/O ಆರ್. ಜಯರಾಂ, ನಂ. ೧೭, ಈಜುಕೊಳದ ಬಡಾವಣೆ, ೮ನೇ ಅಡ್ಡರಸ್ತೆ, ಬೆಂಗಳೂರು – ೫೬೦ ೦೦೩



## ಮೂರು ಶಾಹಿರಿಗಳು

೧

ಒಬ್ಬ ಹಿಂದೂ, ಒಬ್ಬ ಮುಸಲ್ಮಾನ
ಇಬ್ಬರ ಬಟ್ಟಲೂ ಒಂದೆ
ಸೇರುವ ಸುರಮನೆಯೂ ಒಂದೆ
ಕುಡಿಯುವ ಸುರೆಯೂ ಒಂದೆ

ಮಂದಿರ-ಮಸೀದೆಗಳ ತಲ್ಪುವವರೆಗೆ
ಇಬ್ಬರು ಒಂದಾಗಿಯೆ ಇರುತ್ತಾರೆ

ದೂರವಾಗಿಸುತ್ತವೆ ಮಸೀದೆ-ಮಂದಿರ
ಒಂದಾಗಿಸುತ್ತದೆ ನನ್ನ ಮಧುಶಾಲೆ

೨

'ಮಧು-ದಾಹ'ಯೆಂಬ ಹೆಸರನ್ನಿಟ್ಟು
ಹೊರಗಟ್ಟಿತು ನನ್ನ ಮಸೀದೆ
ಕೈಯೊಳಗಿದ್ದ ಬಟ್ಟಲು ನೋಡಿ
ನಿರಾಕರಿಸಿದವು ನನ್ನ ಗುರುದ್ವಾರಗಳು

ನನ್ನಂಥ ಕಾಫಿರನಿಗೆ ಆಶ್ರಯ
ಸಿಗಬಹುದಿತ್ತು ಎಲ್ಲಿ?

'ಶರಣ ಸ್ಥಳ'ವಾಗಿ ನನ್ನನು
ತನ್ನವನಾಗಿಸಿಕೊಳ್ಳದಿದ್ದರೆ ಮಧುಶಾಲೆ

೩

ಯಾರ ಎದೆಯೊಳಗಿನ ಕಿಡಿ
ಧರ್ಮಗ್ರಂಥಗಳನ್ನೆಲ್ಲಾ ಸುಟ್ಟು ಹಾಕಿದೆಯೋ
ಯಾವ ಉನ್ನತ ಮನುಷ್ಯ
ಮಂದಿರ-ಮಸೀದೆ ಚರ್ಚುಗಳನು ಒಡೆದು ಹಾಕಿದ್ದಾನೆಯೋ

ಪಂಡಿತ ಮುಲ್ಲಾ ಪಾದ್ರಿಗಳ
ಕೊರಳ ಉರುಳನ್ನು ಕತ್ತರಿಸಿ ಹಾಕಿದ್ದಾನೆಯೋ

ಇಂದು ಅಂಥವನನ್ನು
ಸ್ವಾಗತಿಸುತ್ತಿದೆ ನನ್ನ ಮಧುಶಾಲೆ

■ ಮೂಲ : ಹರಿವಂಶರಾಯ್ ಬಚ್ಚನ್, ಕನ್ನಡಕ್ಕೆ : ವಿಜಾ

# ಗ್ರಾಮೀಣ ದಲಿತನ ಕತ್ತಲ ಭವಿಷ್ಯ

ಡಾ॥ ರಾಜೇಂದ್ರ ಬಿ. ದೊಡ್ಡಮನಿ

ಡಾ॥ ಅಂಬೇಡ್ಕರ್‌ರ ತರುವಾಯ ಗ್ರಾಮೀಣ ದಲಿತರು ಯಾವ ಸ್ಥಿತಿಯಲ್ಲಿ ಇದ್ದರೋ ಇವತ್ತು ಕೂಡಾ ಅದೇ ಸ್ಥಿತಿಯಲ್ಲೇ ಇದ್ದಾರೆ. ಇದು ಹೀಗೆ ಮುಂದುವರೆಯುತ್ತದೆ ಕೂಡ. ನಗರ ಪ್ರದೇಶಗಳಲ್ಲಿನ ಪರಿಸ್ಥಿತಿಯನ್ನು ಸ್ವಲ್ಪಮಟ್ಟಿಗೆ ಬಿಟ್ಟರೆ ದೇಶದ ಐದು ಲಕ್ಷ ಹಳ್ಳಿಗಳಲ್ಲಿ ದಲಿತರು ಇವತ್ತೂ ಕೂಡ ಸಾವಿರಾರು ವರ್ಷಗಳ ಹಿಂದಿನ ಪಳೆಯುಳಿಕೆಗಳಂತೆ ಜೀವಿಸುತ್ತಿದ್ದಾರೆ. ಅವರು ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಕೂಡ ಹಿಂದೂಗಳಿಂದ ಪ್ರತ್ಯೇಕವಾಗಿ ದೂರವೇ ಉಳಿದುಕೊಂಡಿದ್ದಾರೆ.

"ವಿದ್ಯೆ ಇಲ್ಲದವನು ಪಶುವಿಗೆ ಸಮಾನ' ಎಂದಿದ್ದಾರೆ ಯಾರೋ ಮಹಾನುಭಾವರು. ವಿದ್ಯೆ ಪಡೆದ ನಾವು ದಲಿತ ವಿದ್ಯಾವಂತರು, ನಮ್ಮ ಗ್ರಾಮೀಣ ದಲಿತ ಬಾಂಧವರಿಗೆ ಅವರ ಹಲವಾರು ಸಂವಿಧಾನಬದ್ಧ ಸರ್ಕಾರದ ಸವಲತ್ತುಗಳನ್ನು ತಿಳಿಹೇಳಲು ಅಸಫಲರಾಗಿದ್ದೇವೆ. ಒಬ್ಬನೇ ಒಬ್ಬ ಅಂಬೇಡ್ಕರ್ ಮಾಡಿದ ಹೋರಾಟ ಸಾಧನೆಯನ್ನು ನಾವು ಸಾವಿರಾರು ದಲಿತ ವಿದ್ಯಾವಂತರು ಉಳಿಸಿಕೊಳ್ಳಲಾಗದೆ ಸೋಲುತ್ತಿದ್ದೇವೆ.

ಸಂವಿಧಾನ ಜಾರಿಯಾದಾಗಿನಿಂದ ದಲಿತರಿಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ವಿವಿಧ ಸವಲತ್ತುಗಳನ್ನು ಕಲ್ಪಿಸಿವೆ. ಆದರೆ ಆ ಸವಲತ್ತುಗಳು ಯಾವುವು, ಅವುಗಳನ್ನು ಹೇಗೆ ಪಡೆದುಕೊಳ್ಳಬೇಕು, ಹೇಗೆ ಅರ್ಜಿ ಸಲ್ಲಿಸಬೇಕು, ಯಾವ ಅಧಿಕಾರಿಯನ್ನು ಯಾವ ವಿಭಾಗದಲ್ಲಿ ಕಾಣಬೇಕು, ಎಂಬ ಇತ್ಯಾದಿ ಕನಿಷ್ಠ ಮಟ್ಟದ ತಿಳಿವಳಿಕೆಯೂ ಇಲ್ಲದ ಗ್ರಾಮೀಣ ದಲಿತನಿಗೆ ಎಷ್ಟೋ ಅವಕಾಶಗಳು ಕೈತಪ್ಪಿ ಹೋಗುತ್ತಿವೆ.

ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ನಾವು ಅಂದರೆ ಗ್ರಾಮೀಣ ದಲಿತ ಬಾಂಧವರು ಅತ್ಯಂತ ದೈನ್ಯಾವಸ್ಥೆಯಲ್ಲಿ ಇದ್ದೀವಿ. ಡಾ॥ ಬಿ. ಆರ್. ಅಂಬೇಡ್ಕರರು ಈ ದೇಶಕ್ಕೆ ಹಿಂದೂ ಕೋಡ್ ಮತ್ತು ಸಂವಿಧಾನವನ್ನೇ ಕೊಟ್ಟರು, ಆದರೆ ದಲಿತರನ್ನು ಹಳ್ಳಿಗಳಲ್ಲಿ ಈಗಲೂ ಹೀನಾಯವಾಗಿ ನಡೆಸುವುದು ಅವರ ಮೇಲೆ ದೌರ್ಜನ್ಯ ನಡೆಸುವುದು ತಪ್ಪಲಿಲ್ಲ. ಇದು ಖಂಡನೀಯ, ವಿಷಾದನೀಯ, ಇದು ಭಾರತ ದೇಶಕ್ಕೇ ಅವಮಾನ, ಕಳಂಕ. ಈ ಕಳಂಕ, ಕಾಯಿದೆಯಿಂದ ಮಾತ್ರ ಹೋಗುವುದಿಲ್ಲ. ಜನರ ಮನಃ ಪರಿವರ್ತನೆಯೂ ಅಷ್ಟೇ ಮುಖ್ಯ. ಏಕೆಂದರೆ ಸಂವಿಧಾನದ ೧೭ನೇ ಕಲಂನಲ್ಲಿ ನಿರೂಪಿಸಲಾಗಿರುವ ಅಸ್ಪೃಶ್ಯತೆ ನಿಷೇಧ ಕಾಯಿದೆ ತುಂಬ ಶಕ್ತಿಯುತವಾಗಿದೆ. ಆದರೆ ಇದನ್ನು ಎಷ್ಟರ ಮಟ್ಟಿಗೆ ನಾವು ಪಾಲಿಸುತ್ತಿದ್ದೇವೆ? ಇದಕ್ಕೆ ಸಾಮಾಜಿಕ ಕ್ರಾಂತಿ ಅವಶ್ಯಕವಾಗಿದೆ. ಡಾ॥ ಅಂಬೇಡ್ಕರ್ ದಲಿತರನ್ನು ಮುಂದೆ ತರುವ ಸಲುವಾಗಿ, ಭಾರತಕ್ಕೆ ಮತ್ತು ಹಿಂದು ಸಮಾಜಕ್ಕೆ ಅಂಟಿಕೊಂಡಿದ್ದ ವೈಷಮ್ಯವನ್ನು ಕಿತ್ತೊಗೆಯುವ ಸಲುವಾಗಿ ದಲಿತರ ಜೀವನವನ್ನು ಹೊಸ ದಿಕ್ಕಿನತ್ತ ತೆಗೆದುಕೊಂಡು ಹೋಗುವುದಕ್ಕಾಗಿ ಶ್ರಮಿಸಿದರು. ಇದಕ್ಕಾಗಿ, ಇಡೀ ಭಾರತ ದೇಶವೇ ಅವರಿಗೆ ಋಣಿಯಾಗಿರಬೇಕು.

ಡಾ॥ ಅಂಬೇಡ್ಕರ್‌ರ ತರುವಾಯ ಗ್ರಾಮೀಣ ದಲಿತರು ಹಿಂದೆ ಯಾವ ಸ್ಥಿತಿಯಲ್ಲಿ ಇದ್ದರೋ ಇವತ್ತು ಕೂಡ ಅದೇ ಸ್ಥಿತಿಯಲ್ಲೇ ಇದ್ದಾರೆ. ಇದು ಹೀಗೇ ಮುಂದುವರೆಯುತ್ತದೆ ಕೂಡ. ನಗರ ಪ್ರದೇಶಗಳಲ್ಲಿನ ಪರಿಸ್ಥಿತಿಯನ್ನು ಸ್ವಲ್ಪಮಟ್ಟಿಗೆ ಬಿಟ್ಟರೆ ದೇಶದ ಐದು ಲಕ್ಷ ಹಳ್ಳಿಗಳಲ್ಲಿ ದಲಿತರು ಇವತ್ತೂ ಕೂಡ ಸಾವಿರಾರು ವರ್ಷಗಳ ಹಿಂದಿನ ಪಳೆಯುಳಿಕೆಗಳಂತೆ ಜೀವಿಸುತ್ತಿದ್ದಾರೆ. ಅವರು ಸಾಮಾಜಿಕವಾಗಿ, ಆರ್ಥಿಕವಾಗಿ, ಬೌದ್ಧಿಕವಾಗಿ ಮತ್ತು ದೈಹಿಕವಾಗಿ ಕೂಡ ಹಿಂದೂಗಳಿಂದ ಪ್ರತ್ಯೇಕವಾಗಿ ದೂರವೇ ಉಳಿದುಕೊಂಡಿದ್ದಾರೆ. ದಲಿತರಿಗೆ ಈಗಲೂ ಕೂಡ ಹಿಂದೂ ಗುಡಿಗಳಲ್ಲಿ ಮತ್ತು ಹೋಟೆಲುಗಳಲ್ಲಿ ಪ್ರವೇಶವಿಲ್ಲ. ಹಿಂದೂಗಳ ಬಾವಿಗಳಲ್ಲಿ ನೀರು ತೆಗದುಕೊಳ್ಳುವ ಹಕ್ಕೂ ಅವರಿಗೆ ಇಲ್ಲವಾಗಿದೆ. ಇವತ್ತಿಗೂ ಸಹ ಹಲವಾರು ಕಡೆ ದಲಿತರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಗುತ್ತಿದೆ. ಈ ತರಹದ ಘಟನೆಗಳು ಆಧುನಿಕ ಸಂದರ್ಭದಲ್ಲಿಯೂ ಶೋಷಣೆಯ ಹೊಸ ಮುಖಗಳಾಗಿ ಕಾಣಿಸಿಕೊಳ್ಳುತ್ತವೆ. ಗ್ರಾಮೀಣ ದಲಿತರನ್ನು ಸುಡುವ, ಸುಟ್ಟಿರುವ, ಗುಂಡಿಕ್ಕಿ ಕೊಂದಿರುವ ಘಟನೆಗಳು ಲೆಕ್ಕವಿಲ್ಲದಷ್ಟಿವೆ. ನಾಲ್ಕು ಅಕ್ಷರ ಕಲಿತ ಗ್ರಾಮೀಣ ದಲಿತರು ತಮ್ಮ ಮೇಲೆ ನಡೆಯುವ ಅನ್ಯಾಯ ಅಕ್ರಮಗಳನ್ನು ಪ್ರಶ್ನಿಸಿದಾಗ ಬಿಲ್ಲಾಂಡಹಳ್ಳಿ, ಕಂಬಾಲಪಲ್ಲಿಯಲ್ಲಿ ಜರುಗಿದಂತಹ ಘಟನೆಗಳು ದೇಶದಾದ್ಯಂತ ಸಂಭವಿಸುತ್ತಿರುವುದು ಸಾಮಾನ್ಯವಾಗಿಬಿಟ್ಟಿವೆ.

ಈ ದೇಶದಲ್ಲಿ ಬಡತನವೇ ಬೇರೆ, ಜಾತೀಯತೆಯೇ ಬೇರೆ. ಬಡತನಕ್ಕಿಂತ ಜಾತೀಯತೆಯ ಸಮಸ್ಯೆಯು ಅತ್ಯಂತ ಕ್ರೂರವಾದುದು. ಬಡತನ ಗೋಡೆಯ ನೆರಳಿದ್ದಂತೆ, ಜಾತೀಯತೆ ಗೋಡೆಯಿದ್ದಂತೆ. ಗೋಡೆಯ ನೆರಳು ಸ್ಥಿರವಾದುದ್ದಲ್ಲ, ಅದು ಬಡತನದಿಂದ ಶ್ರೀಮಂತರವರೆಗೆ ಹರಿಯುತ್ತೆ ಮತ್ತು ಕುಗ್ಗುತ್ತದೆ. ಆದರೆ ಗೋಡೆ ಸ್ಥಿರವಾದದ್ದು, ಶತಶತಮಾನಗಳಿಂದ ನಡೆದುಕೊಂಡು ಬಂದ ಅಮಾನವೀಯ ಈ ಜಾತೀಯತೆ ಹಾಳು ಗೋಡೆಯಂತೆ ಸ್ಥಿರವಾಗಿ ನಿಂತಿದೆ. ಏಕೆಂದರೆ, ಒಬ್ಬ ದಲಿತ ಎಂತಹ ವಿದ್ಯಾವಂತ, ಸಾಹಿತಿ, ಕಲಾವಿದ ಅಥವಾ ರಾಜಕೀಯ ಮುತ್ಸದ್ದಿಯಾದರೂ ಜಾತಿಯಿಂದಾಗಿ ಅವನು ಹೀನನೇ. ಹೀಗಿರುವಾಗ ಗ್ರಾಮೀಣ ದಲಿತನ ಸ್ಥಿತಿಯನ್ನು ಯಥಾವತ್ತಾಗಿ ವಿವರಿಸಿದರೆ ಅದು ಕೆಲವರಿಗೆ ಉತ್ಪ್ರೇಕ್ಷೆಯಂತೆ ಕಾಣಬಹುದು.

ಪಟ್ಟಣಪ್ರದೇಶದ ಸಾರ್ವಜನಿಕ ಸ್ಥಳಗಳಲ್ಲಿ ಜಾತೀಯತೆಯ ಭೀಕರತೆಯು ಅಷ್ಟಾಗಿ ಕಾಣದಿರಬಹುದು. ಆದರೂ ದಲಿತನ ಜಾತಿ ತಿಳಿದರೆ ಕೆಲವು ಬಡಾವಣೆಗಳಲ್ಲಿ ಅವನಿಗೆ ಬಾಡಿಗೆಗೆ ಮನೆಯೂ ದೊರಕುವುದಿಲ್ಲ; ಸಾರ್ವಜನಿಕ ಕೊಳವೆಗಳಲ್ಲಿ ನೀರು ಪಡೆಯಲಾಗುವುದಿಲ್ಲ. ಆದರೆ ಇತ್ತೀಚಿನ ದಲಿತ ಸಂಘಟನೆಗಳ ಚಟುವಟಿಕೆಗಳ ನಿಮಿತ್ತ ದಲಿತ ಒಂದಿಷ್ಟು ತಲೆ ಎತ್ತಿ ನಡೆಯುವಂತಾಗಿದೆ. ಜಾತಿಗೆ ಸಂಬಂಧಿಸಿದಂತೆ ಸಂಕಷ್ಟಗಳೇನಾದರೂ ಎದುರಾದರೆ ಯಾವುದಾದರೊಂದು ಮಾಧ್ಯಮದ ಮೊರೆ ಹೋಗಬಹುದು. ಆದರೆ ಹಳ್ಳಿಗಾಡಿನ ದಲಿತನ ಸ್ಥಿತಿಯಂತೂ ನಿಜಕ್ಕೂ ಚಿಂತಾಜನಕ.

ಗ್ರಾಮೀಣ ಪ್ರದೇಶದಲ್ಲಿ ಜಾತೀಯತೆ ತಲೆತಲಾಂತರಗಳಿಂದ ಬದಲಾವಣೆಯಾಗದೆ ಯಾವ ಅಡೆತಡೆಯಿಲ್ಲದೆ ಸ್ವಯಂಚಾಲಿತ ಯಂತ್ರದಂತೆ ಮುಂದುವರಿಯುತ್ತಲೇ ಬಂದಿದೆ. ಇದು ದಲಿತರ ಬದುಕಿನಲ್ಲಿ ಒಂದು ಅವಿಭಾಜ್ಯ ಅಂಗವಾಗಿ ಹೊಂದಿಕೊಂಡುಬಿಟ್ಟಿದೆ. ಹಾಗೆಯೇ ಇದೆಲ್ಲಾ ಸಂಪ್ರದಾಯದ ಒಂದು ಅಂಶವೆಂದು ಬಗೆದಿರುವ ಅಮಾಯಕ ಗ್ರಾಮೀಣ ದಲಿತರು ಯಾವುದರ ಬಗ್ಗೆಯೂ ಹೆಚ್ಚು ತಲೆಕೆಡಿಸಿಕೊಳ್ಳುವುದಿಲ್ಲ. ಪ್ರಶ್ನೆ ಕೇಳವುದಿಲ್ಲ. ಅದಕ್ಕಾಗಿ ಇವರ ಬಗ್ಗೆ ಏನಿದ್ದರೂ ವಿದ್ಯಾವಂತ ದಲಿತರು ಕಾರ್ಯಪ್ರವೃತ್ತರಾಗಬೇಕು. ಏಕೆಂದರೆ, ಗ್ರಾಮೀಣ ದಲಿತನ ಹಿಂದುಳಿದಿರುವಿಕೆಗೆ ಸಂಪರ್ಕ ಮಾಧ್ಯಮಗಳ ಕೊರತೆ ಹಾಗೂ ಸಂಪ್ರದಾಯ ವಾದಿಗಳ ಸ್ವಾರ್ಥಗಳಿಂದಾಗಿ ಘಟಿಸಿದ ಯಾವ ದುರ್ಘಟನೆಯೂ ಕೂಡಲೇ ಅಲ್ಲಿನ ಅಧಿಕಾರಿಗಳ ಅಥವಾ ಸರ್ಕಾರದ ಗಮನಕ್ಕೆ ಬರುವುದಿಲ್ಲ. ಹೀಗಾಗಿ ಗ್ರಾಮೀಣ ದಲಿತರ ಮೇಲಿನ ದೌರ್ಜನ್ಯ, ಹಲ್ಲೆ, ಅತ್ಯಾಚಾರ ಮೊದಲಾದ ಘಟನೆಗಳು ಸುದ್ದಿಯಾಗದೆ ಅಲ್ಲಲ್ಲೇ ಮರೆಯಾಗುತ್ತವೆ.

ಹೀಗೆ ಗ್ರಾಮೀಣ ದಲಿತರು ಎಂದಿನಂತೆ ಮೂಢನಂಬಿಕೆಗಳ ಮಡಿಲಲ್ಲಿ ವಿದ್ಯೆ ಇಲ್ಲದೆ ಅಲ್ಲೇ ಕೊಳೆಯುತ್ತಿರುತ್ತಾರೆ. ಇದೆಲ್ಲದರ ಜೊತೆಗೆ ಜಾತಿ, ಅಸ್ಪೃಶ್ಯತೆ, ಮೇಲು-ಕೀಳು ಎನ್ನುವ ವಿಷಯಗಳು ಭೀಕರವಾಗಿ ಬೆಳೆದುನಿಂತಿವೆ. ಎಲ್ಲಾ ವಿಚಾರಗಳು ಭೂತಗಳಂತೆ ಅವರನ್ನು ಕಾಡುತ್ತಿವೆ. ಮುಖ್ಯವಾಗಿ ಗ್ರಾಮೀಣ ದಲಿತರ ಅಧೋಗತಿಗೆ ಅವರ ಅನಕ್ಷರತೆ, ದಾರಿದ್ರ್ಯ, ಅಮಾಯಕತೆ, ಅಸಹಾಯಕತೆ,

ಸಂಪರ್ಕದ ಕೊರತೆ ಮೊದಲಾದವುಗಳೊಂದಿಗೆ ಅವರಲ್ಲೇ ಗಾಢವಾಗಿ ಬೇರುಬಿಟ್ಟಿರುವ ಮೌಢ್ಯ ಕಂದಾಚಾರಗಳೇ ಒಂದು ಮುಖ್ಯ ಕಾರಣ. ಹಳ್ಳಿಗಾಡುಗಳ ಮೂಲಭೂತ ವ್ಯವಸ್ಥೆಯಿಂದಾಗಿ ಅವರು ಮೌಢ್ಯದಿಂದ ಬೇಗನೆ ಹೊರಬರಲಾರರು. ಹಾಗೆ ಒಮ್ಮೆ ಅವರು ಮನಸ್ಸು ಮಾಡಿದರೂ ಮೌಢ್ಯ ಅವರನ್ನು ಬಿಡುವುದಿಲ್ಲ. ಹಿಂದೂ ಧರ್ಮದ ಸಂಸ್ಕೃತಿಯೇ ಅಷ್ಟು ಪ್ರಬಲವಾದುದೇನೋ ತಿಳಿಯದಾಗಿದೆ. ಈಗೀಗ ಗ್ರಾಮೀಣ ದಲಿತರು ಹಿಂದೂ ಸಂಸ್ಕೃತಿಯ ಹರಿಕಾರರಾಗುತ್ತಿರುವುದು ತುಂಬ ಅಪಾಯಕಾರಿ. ಇಂಥ ಅಪಾಯದಲ್ಲಿ ಸಿಕ್ಕು ಮೇಲುವರ್ಗದವರ ಅಥವಾ ಗ್ರಾಮದೇವತೆಯ ಸಂತುಷ್ಟಿಗಾಗಿ ಕುರಿ-ಕೋಣಗಳ ತಲೆ ಕಡಿದು ಮೌಢ್ಯದ ಕ್ರೌರ್ಯಕ್ಕೆ ತಾವೇ ಬಲಿಯಾಗುತ್ತಿರುವುದು ಅವರಿಗೆ ಮನವರಿಕೆಯಾಗುತ್ತಿಲ್ಲ.

## ಗೊಣಗು

ತೊಂಡಲೆವ ಸುನಾಮಿಗಳದೇನು
ಅಬ್ಬರ!
ತನ್ನಡಿಯ ಹಸಿದ ಮೀನಿನ
ಆರ್ತತೆಯೂ ಕೇಳದಂತೆ.

**ಡಾ|| ಎಸ್. ಮಾರುತಿ**
ಅತಿಥಿ ಉಪನ್ಯಾಸಕರು
ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು
ಶಿವಮೊಗ್ಗ

ಇಂಥ ಸಂಕೀರ್ಣ ಪರಿಸ್ಥಿತಿಯಲ್ಲಿ ಪ್ರಜ್ಞಾವಂತ ದಲಿತರು ಹಾಗೂ ನಮ್ಮ ನಾಯಕರು ಈ ದೇಶದ ಎಲ್ಲಾ ಹೊಸ ಸಾಧ್ಯತೆಗಳಿಗೆ ಮೈಗೂಡಿಸಿಕೊಂಡು ನಿಲ್ಲಬೇಕಾಗಿರುವ ಕಾಲ ಬಂದಿದೆ. ದಲಿತ ಚಳುವಳಿಗಳು ಕೇವಲ ನಗರಪ್ರದೇಶಕ್ಕೆ ಸೀಮಿತವಾಗಿರದೆ ಹಳ್ಳಿಹಳ್ಳಿಗಳಲ್ಲೂ ಡಾ|| ಅಂಬೇಡ್ಕರ್ ಅವರ ಕನಸುಗಳನ್ನು ತಲುಪಿಸಬೇಕಾಗಿದೆ. ಆ ಭಾವನೆಗಳ ಮೂಲಕ ಅವರ ಹಕ್ಕುಗಳ ಕುರಿತು ತಿಳಿಹೇಳುವ ಕೆಲಸ ಹಿಂದೆಂದಿಗಿಂತಲೂ ಇಂದು ತುಂಬ ಅವಶ್ಯಕವಾಗಿದೆ.

ನಾನೇಕೆ ಈ ಮಾತನ್ನು ವಿಶೇಷವಾಗಿ ಪ್ರಸ್ತಾಪಿಸುತ್ತಿದ್ದೇನೆ ಎಂದರೆ, ಹಿಂದಿನ ಕೇಂದ್ರ ಸರ್ಕಾರದ ಮಹಿಳಾ ಮತ್ತು ಮಕ್ಕಳ ಸಮಾಜ ಕಲ್ಯಾಣ ಮಂತ್ರಿಯಾಗಿದ್ದ ಶ್ರೀಮತಿ ಮನೇಕಾ ಗಾಂಧಿಯವರು ಅದೇ ಖಾತೆಯಿಂದ ದಲಿತರಿಗಾಗಿ ಮೀಸಲಿಟ್ಟ ೩೦೦ಕೋಟಿ ರೂಪಾಯಿಗಳನ್ನು ಪ್ರಾಣಿಗಳ ಕ್ಷೇಮಾಭಿವೃದ್ಧಿಗಾಗಿ ವರ್ಗಾಯಿಸಿ ಬಿಟ್ಟರಂತೆ. ಈ ದೇಶದಲ್ಲಿ ಪ್ರಾಣಿಗಳಿಗಿರುವ ಗೌರವ ಮನುಷ್ಯರಿಗೆ ಇಲ್ಲ ಎನ್ನುವುದು ಮತ್ತೊಮ್ಮೆ ಸ್ಪಷ್ಟವಾಯಿತು. ಈ ವಿಷಯವನ್ನು ಇನ್ನೂ ಸಹ ಸಂಸತ್ತಿನಲ್ಲಿರುವ ನಮ್ಮ ದಲಿತ ನಾಯಕರು ಪ್ರಶ್ನಿಸಿಲ್ಲ. ಇದಲ್ಲದೆ, ಕಂಬಾಲಪಲ್ಲಿಯಂತಹ ಹಲವಾರು ಗ್ರಾಮೀಣ ದಲಿತರ ದಹನ ನಡೆದರೂ ಅದರ ಬಗ್ಗೆ ದಲಿತ ಸಂಸದರು ಗಮನಿಸಿಲ್ಲ. ಉರಿಯುತ್ತಿರುವ ದಲಿತರ ಬೆಂಕಿಯಲ್ಲಿ ಮೈಕಾಯಿಸಿಕೊಳ್ಳುವುದೇ ಅವರ ವೃತ್ತಿಯಾಗಿದೆ. ಯಾರು ಏನೇ ಆದರೂ ಅವರಿಗೆ ಅಧಿಕಾರ ಮಾತ್ರ ಹೋಗಬಾರದು, ಅಷ್ಟೇ.

ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ದಲಿತ ವರ್ಗದ ಅಭಿವೃದ್ಧಿಗಾಗಿ ಮೀಸಲಿಟ್ಟ ಎಷ್ಟೋ ಹಣ ಅವರ ಸವಲತ್ತುಗಳಿಗೆ ಸದುಪಯೋಗವಾಗದೆ ದುರ್ಬಳಕೆಯಾಗುತ್ತಿದೆ ಅಥವಾ ಇಲ್ಲವಾದರೆ ಸರ್ಕಾರಕ್ಕೆ ಮರಳಿ ಹೋಗುತ್ತಿದೆ. ಇದನ್ನು ನಾವು ಗಮನಿಸಬೇಕಿದೆ. ಗ್ರಾಮೀಣ ದಲಿತರಿಗೆ ಲಭ್ಯವಾಗದಿರುವ ವಿವರಗಳು ಸಹಕಾರಗಳ ಕೊರತೆಯೇ ಈ ಎಲ್ಲಾ ಸೋಲುಗಳಿಗೆ ಮೂಲ ಕಾರಣ ಎನ್ನಬಹುದು. ಅದಕ್ಕಾಗಿ ಇಂದು ಗ್ರಾಮೀಣ ದಲಿತ ಅತ್ಯಂತ ಕ್ಲಿಷ್ಟಕರವಾದ ಜೀವನವನ್ನು ಸಾಗಿಸುತ್ತಿದ್ದಾನೆ. ಕಾರಣ ಸರ್ಕಾರದಿಂದ ಸಿಗಬೇಕಾದ ಹಲವಾರು ಸವಲತ್ತುಗಳು ಅವನ ಕೈತಪ್ಪಿಹೋಗುತ್ತಿವೆ. ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳು ಸಹ ಸಂಪೂರ್ಣ ಜವಾಬ್ದಾರರಾಗಿದ್ದಾರೆ. ಸಾಮಾನ್ಯವಾಗಿ ಒಂದು ಕಚೇರಿಯಲ್ಲಿ ಗ್ರಾಮೀಣ ದಲಿತ ತನ್ನ ಸವಲತ್ತುಗಳ ಬಗ್ಗೆ ವಿಚಾರಿಸಿದಾಗ ಅದಕ್ಕೆ ಸಂಬಂಧಪಟ್ಟ ಅಧಿಕಾರಿ ಸರಿಯಾದ ರೀತಿಯಲ್ಲಿ ಸ್ಪಂದಿಸುತ್ತಿಲ್ಲ. ಅಲ್ಲದೆ ಗ್ರಾಮ ಪಂಚಾಯತ್, ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದ ಅಧಿಕಾರಿಗಳು ಸಹ ದಲಿತರ ಹಲವಾರು ಸವಲತ್ತುಗಳನ್ನು ಸರಿಯಾಗಿ ಫಲಾನುಭವಿಗಳಿಗೆ ಮುಟ್ಟಿಸುತ್ತಿಲ್ಲ. ತಮ್ಮ ಕರ್ತವ್ಯವನ್ನೇ ಮರೆತು ಪ್ರಬಲ ವ್ಯಕ್ತಿಗಳ ಪಾಲಿಗೆ ಆ ಸವಲತ್ತುಗಳನ್ನು ನೀಡುವುದು ಸಾಮಾನ್ಯವಾಗಿಬಿಟ್ಟಿದೆ. ಇಂಥ ಕರ್ತವ್ಯಲೋಪ ಅಧಿಕಾರಿಗಳ ಕುರಿತು ಸರ್ಕಾರ ಕಠಿಣವಾದ ಕ್ರಮ ಜರುಗಿಸಿರುವುದು ತುಂಬ ವಿರಳ. ಸಂಬಂಧಿಸಿದ ಅಧಿಕಾರಿಗಳು ದಲಿತರ ಏಳಿಗೆಗೆ ಪ್ರಯತ್ನಿಸಬೇಕು. ಈ ಪ್ರಯತ್ನಗಳಲ್ಲಿ ಪ್ರಾಮಾಣಿಕತೆ, ಇಚ್ಛಾ ಶಕ್ತಿಗಳು ಇಲ್ಲವಾದರೆ ಸಂವಿಧಾನದಿಂದ ಲಭಿಸಿರುವ ಸವಲತ್ತುಗಳು ಇದ್ದಾದರೂ ಏನು ಪ್ರಯೋಜನ?

ಗ್ರಾಮೀಣ ದಲಿತರಿಗೆ ಸರ್ಕಾರದ ಸವಲತ್ತುಗಳು ಸರಿಯಾದ ರೀತಿಯಲ್ಲಿ ದೊರಕದಿರುವುದಕ್ಕೆ ಪ್ರಮುಖ ಕಾರಣಗಳನ್ನು ಹೀಗೆ ಗುರುತಿಸಬಹುದು.

೧. ಗ್ರಾಮೀಣ ದಲಿತರಿಗೆ ಯೋಜನೆಗಳ ಬಗ್ಗೆ ಪರಿಪೂರ್ಣ ಜ್ಞಾನವಿಲ್ಲದಿರುವುದು.
೨. ಅಲ್ಪ ಸ್ವಲ್ಪ ಯೋಜನೆಗಳ ಬಗ್ಗೆ ಅವರಿಗೆ ಅರಿವಿದ್ದರೂ ಅವುಗಳನ್ನು ಪಡೆಯಲು ಅಸಹಾಯಕರಾಗಿರುವುದು.
೩. ನಿಜವಾದ ಫಲಾನುಭವಿಗಳಿಗೆ ಸವಲತ್ತುಗಳನ್ನು ಕೊಡದೆ ಶ್ರೀಮಂತ ಹಾಗೂ ಸ್ಪೃಶ್ಯ ಜನಾಂಗಕ್ಕೆ ವರ್ಗಾಯಿಸುವುದು.
೪. ಸರ್ಕಾರದ ಯೋಜನೆಗಳು ಎಷ್ಟರ ಮಟ್ಟಿಗೆ ದಲಿತರಿಗೆ ಉಪಯೋಗವಾಗಿವೆ ಎಂಬುದು ಸರ್ಕಾರದ ಗಮನಕ್ಕೇ ಬಾರದಿರುವುದು.
೫. ಇವುಗಳ ಬಗ್ಗೆ ಪ್ರಜ್ಞಾವಂತ ದಲಿತ ಸರಿಯಾದ ರೀತಿಯಲ್ಲಿ ಮಾರ್ಗದರ್ಶನ ನೀಡದಿರುವುದು.

ಇದಕ್ಕಾಗಿ ದಲಿತ ಸಂಘಟನೆಗಳು ಹಾಗೂ ವಿದ್ಯಾವಂತ ದಲಿತರು ಅಸಹಾಯಕರಾದ ಗ್ರಾಮೀಣ ದಲಿತರ ಕಡೆಗೆ ಗಮನ ಹರಿಸಿ ಅವರನ್ನು ಸಮಾಜದ ಪ್ರಮುಖವಾಹಿನಿಗೆ ತರಲು ಶ್ರಮಿಸಬೇಕು.

೧೯೫೦ರಲ್ಲಿ ಭಾರತವು ಸಂವಿಧಾನವನ್ನು ಅಂಗೀಕರಿಸಿದಾಗ ಪರಿಶಿಷ್ಟ ಜಾತಿ ಪಂಗಡಗಳಿಗೆ ಅಂದರೆ ದಲಿತರಿಗೂ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಮಾನತೆ ಒದಗಿಸಲು ಡಾ|| ಅಂಬೇಡ್ಕರ್ ಶ್ರಮಿಸಿದರು. ಅವರ ನಂತರ ಇದರ ಜವಾಬ್ದಾರಿಯನ್ನು ನಾವೆಷ್ಟು ಹೊರುತ್ತಿದ್ದೇವೆ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ಇಂದು ಪ್ರತಿಯೊಂದು ಗ್ರಾಮೀಣ ದಲಿತ ಸಮುದಾಯದಿಂದ ಪ್ರತಿನಿಧಿಸಿ ಬಂದ ಎಷ್ಟೋ ಉದ್ಯೋಗವಂತ ದಲಿತರು ಅವರದೇ ಸಮುದಾಯದ ಬಗ್ಗೆ ಗಮನಹರಿಸದೆ ತಮ್ಮ ಸ್ವಾರ್ಥ ಜೀವನದ ಬಗ್ಗೆ ಮಾತ್ರ ಮಹತ್ವ ಕೊಡುತ್ತಿರುವುದು ನಿಜಕ್ಕೂ ದುರಂತ. ಈ ದುರಂತ ಇನ್ನು ತಪ್ಪಬೇಕು. ಗ್ರಾಮೀಣ ದಲಿತನ ಸರ್ವಾಂಗೀಣ ಅಭಿವೃದ್ಧಿಗಾಗಿ ನಾವೆಲ್ಲರೂ ಕಂಕಣಬದ್ಧರಾಗಿ ನಿಲ್ಲಬೇಕು. ದೇಶದ ಅತ್ಯಂತ ಕೆಳಮಟ್ಟದ ವ್ಯಕ್ತಿಯಾದ ಗ್ರಾಮೀಣ ದಲಿತನ ಏಳಿಗೆಯಾಗುವವರೆಗೂ ಗ್ರಾಮಗಳ ಸುಧಾರಣೆಗೆ ಅರ್ಥವಿರುವುದಿಲ್ಲ. ಗ್ರಾಮಗಳ ಸುಧಾರಣೆಯಾಗುವವರೆಗೂ ದೇಶದ ಬೆಳವಣಿಗೆ ಸಾಧ್ಯವಿಲ್ಲ.

ಇಲ್ಲಿ ಒಂದು ಮಹತ್ವದ ಅಂಶವನ್ನು ಮನಗಾಣಬೇಕು. ಅದೆಂದರೆ, ಗ್ರಾಮೀಣ ದಲಿತರನ್ನು ಕತ್ತಲ ಬದುಕಿನಿಂದ ಸಮಾಜದ ಮುಖ್ಯವಾಹಿನಿಗೆ ತರಬೇಕಾದರೆ ದಲಿತ ಚಳವಳಿಗಳು ಇನ್ನೂ ಹೆಚ್ಚಿನ ಬದಲಾವಣೆಯತ್ತ ಸಾಗಬೇಕು. ವಿಶೇಷವಾಗಿ ವಿದ್ಯಾವಂತ ದಲಿತ, ಉದ್ಯೋಗವಂತ ದಲಿತ ಹಾಗೂ ದಲಿತ ರಾಜಕಾರಣಿಗಳಲ್ಲಿ ತ್ಯಾಗ ಮನೋಭಾವ ಹೆಚ್ಚಬೇಕಿದೆ. ಈ ನಿಟ್ಟಿನಲ್ಲಿ ಡಾ|| ಅಂಬೇಡ್ಕರ್ ನಮಗೆ ಮಾದರಿ ಎನಿಸಿದ್ದಾರೆ. ಅವರು ಮಾಡಿದಂತಹ ತ್ಯಾಗ ಬಲಿದಾನಗಳು ನಮ್ಮ ಸಂಘಟಕರಲ್ಲಿ, ನಮ್ಮ ನಾಯಕರಲ್ಲಿ, ಚಿಂತಕರಲ್ಲಿ ಮೂಡಿಬರಬೇಕಾಗಿದೆ.

**ಡಾ|| ರಾಜೇಂದ್ರ ಬಿ. ದೊಡ್ಡಮನಿ**
ಮಾತೃ ಛಾಯಾ ನಿವಾಸ, ಪ್ಲಾಟ್ ನಂ ೩೩, ಸಿ.ಐ.ಬಿ. ಕಾಲೋನಿ, ಗುಲಬರ್ಗಾ - ೫೮೫ ೧೦೩



ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮ ಕ್ರಿಯಾಶೀಲತೆ ಮತ್ತು ದೇಶಭಕ್ತಿಯನ್ನು ಮೆರೆದು, ಆರಂಭದ ಮಹಿಳಾ ಚಳುವಳಿಯ ಅಧ್ವರ್ಯುಗಳಲ್ಲಿ ಒಬ್ಬರಾದ ಕಾಮ್ರೇಡ್ ಕನಕ್ ಮುಖರ್ಜಿಯವರು ಇದೇ ಮಾರ್ಚ್ ೯, ೨೦೦೫ ರಂದು ನಿಧನರಾದರು. ಪ್ರಗತಿಪರ ಹಾಗೂ ಕಮ್ಯುನಿಸ್ಟ್ ಚಳುವಳಿಗೆ ಕನಕ್ ಮುಖರ್ಜಿಯವರು ಸಲ್ಲಿಸಿದ ಸೇವೆಯನ್ನು ಸ್ಮರಿಸುತ್ತಾ 'ಹೊಸತು' ಅವರ ನಿಧನಕ್ಕೆ ಗೌರವಪೂರ್ವಕವಾಗಿ ಸಂತಾಪ ಸೂಚಿಸುತ್ತದೆ.

# ಹದಿನೈದು ಮಂದಿ ಕೊಲೆಗಡುಕರು ಮಾಡಿದ ಪವಾಡ

■ ಮೂಲ: ಬೆನ್ ಹೆಚ್    ಅನುವಾದ: ಎಲ್. ವಿ. ಶಾಂತಕುಮಾರಿ

**ವೈ**ದ್ಯ ಮಹಾಶಯರುಗಳ ಗುಪ್ತಮಂತ್ರಾಲೋಚನೆಯ ಸಭೆಗಳನ್ನು ಯಾವಾಗಲೂ ಒಂದು ರೀತಿಯ ರಹಸ್ಯ ಪ್ರಭೆ ಆವರಿಸಿಕೊಂಡಿರುತ್ತದೆ. ಈ ವೈದ್ಯ ಭ್ರಾತೃಗಳು, ತಮಗೆ ಎಷ್ಟು ತಿಳಿದಿದೆ, ಎಷ್ಟು ತಿಳಿದಿಲ್ಲ ಎಂಬುದನ್ನು ಸಾಮಾನ್ಯ ನಾಗರಿಕನಿಂದ ದೂರವಿಡುವುದಕ್ಕಾಗಿಯೇ, ತಮ್ಮ ರಹಸ್ಯ ಕೂಟಗಳ ಸುತ್ತ ಇಂತಹ ನಿಗೂಢತೆಯನ್ನು ಹಬ್ಬಿಸಿಕೊಂಡಿರಬಹುದೆಂದು ಯಾರಿಗಾದರೂ ಸಹ ಆಶ್ಚರ್ಯ ಮತ್ತು ಸಂದೇಹಗಳುಂಟಾಗುತ್ತವೆ.

ನ್ಯೂಯಾರ್ಕ್ ನಗರದಲ್ಲಿರುವ, ತಮ್ಮನ್ನು ಎಕ್ಸ್-ಕ್ಲಬ್ ಎಂದು ಕರೆದುಕೊಳ್ಳುವ ಅತ್ಯಂತ ಪ್ರಸಿದ್ಧ ವೈದ್ಯರುಗಳ ಗುಂಪು ನಡೆಸುತ್ತಿರುವ ಕೂಟವು, ಈ ತಲೆಮಾರಿನ ಅತ್ಯಂತ ನಿಗೂಢ ವೈದ್ಯಕೀಯ ಗುಪ್ತ ಸ್ನೇಹಕೂಟಗಳಲ್ಲಿ ಒಂದಾಗಿದೆ. ಕಳೆದ ಇಪ್ಪತ್ತು ವರ್ಷಗಳಿಂದಲೂ ಪ್ರತಿ ಮೂರು ತಿಂಗಳಿಗೊಮ್ಮೆ, ಈ ಚಿಕಿತ್ಸಕರ ಚಿಕ್ಕಗುಂಪು ವಾಲ್ಟನ್ ಹೋಟೆಲಿನ ಮುಚ್ಚಿದ ಬಾಗಿಲುಗಳ ಹಿಂದೆ ಕುಳಿತು, ಮುಂಜಾವಿನವರೆಗೂ, ಯಾವುದೋ ಅಜ್ಞಾತ, ಅದ್ಭುತ ಕಾರ್ಯದ ಬಗ್ಗೆ ಚರ್ಚೆ, ವಿಶ್ಲೇಷಣೆಗಳಲ್ಲಿ ನಿರತವಾಗಿರುತ್ತಿತ್ತು.

ಈ ಎಕ್ಸ್-ಕ್ಲಬ್‌ನ, ನಾಟಕೀಯವಾದಂತಹ ಕಡೆಯ ಸಭೆಯು, ಮಳೆ ಹೊಯ್ಯುತ್ತಿದ್ದ ಒಂದು ನೀರಸ ರಾತ್ರಿ ನಡೆಯಿತು. ಇಂತಹ ವೈಪರೀತ್ಯದ ಬೇಸರದ ಹವಾಮಾನವಿದ್ದರೂ, ಯಾವುದೋ ಒಂದು ಹೊಸ ಆಕರ್ಷಣೆಯಿಂದಾಗಿ, ಸಂಘದ ಎಲ್ಲ ಗಳಿ ಮಂದಿ ಸದಸ್ಯರೂ ಕೂಟಕ್ಕೆ ಹಾಜರಾಗಿದ್ದರು. ಹದಿನೈದನೆಯ ಸದಸ್ಯನಾಗಿ ಅಂದು, ಸಂಘಕ್ಕೆ ಹೊಸ ವೈದ್ಯನೊಬ್ಬನ ಸೇರ್ಪಡೆಯಾಗುವುದಿತ್ತು. ಡಾ॥ ಸ್ಯಾಮುಯೆಲ್ ವಾರ್ನರ್, ಮಾನ್ಯತೆ ಗಳಿಸಿಕೊಂಡಂತಹ ವೈದ್ಯಕೀಯ ರಂಗದ ಪ್ರತಿಭಾಶಾಲಿ ಎಂದು ಹೇಳಲು, ಅಸಾಮಾನ್ಯ ಎನ್ನುವಷ್ಟು ಕಡಿಮೆ ವಯಸ್ಸಿನವನಾಗಿದ್ದ. ಡಾ॥ ವಾರ್ನರ್ ಎಕ್ಸ್-ಕ್ಲಬ್‌ಗೆ ಸದಸ್ಯನಾಗಿ ಆಯ್ಕೆಯಾದುದಕ್ಕಿಂತ ಹೆಚ್ಚು ಪರಿಪೂರ್ಣ ಮನ್ನಣೆಯನ್ನು, ತನ್ನ ಮಾಂತ್ರಿಕ ಕೈಚಳಕಕ್ಕಾಗಿಯೂ ಪಡೆದಿರಲಿಲ್ಲ, ಏಕೆಂದರೆ, ತಮ್ಮ ಸಂಘದಲ್ಲಿ ಒಬ್ಬನಾಗಿ ಸೇರಿಕೊಳ್ಳುವಂತೆ ಅವನನ್ನು ಆಹ್ವಾನಿಸಿದ ಆ ಹದಿನಾಲ್ಕು ಜನ ಹಿರಿಯ ವೈದ್ಯರು ವಿವಿಧ ವೈದ್ಯಕೀಯ ವಿಭಾಗದ ಮುಖ್ಯಸ್ಥರೂ, ಪರಿಣತರೂ, ಧುರೀಣರೂ ಆಗಿದ್ದವರು. ನಿಜ ಹೇಳಬೇಕೆಂದರೆ, ಡಾ॥ ವಾರ್ನರ್ ಆರಾಧಿಸುತ್ತಿದ್ದ ವೈದ್ಯಕೀಯ ರಂಗದ ಅರ್ಧದಷ್ಟು ಮಂದಿ ಜೀವಂತ ವೈದ್ಯ ಮುಂದಾಳುಗಳನ್ನೊಳಗೊಂಡಿತ್ತು ಆ ಎಕ್ಸ್-ಕ್ಲಬ್.

ಇನ್ನು ಆ ಕ್ಲಬ್ಬಿನ ಸಭೆಯ ಕಾರ್ಯಸೂಚಿ ಪತ್ರ; ಸಂಘದ ಶ್ರೇಷ್ಠ ಸದಸ್ಯರುಗಳೊಡನೆ ಶುಭಾಶಯಗಳ ವಿನಿಮಯದ ನಂತರ ಡಾ॥ ವಾರ್ನರ್ ಒಂದು ಮೂಲೆಯಲ್ಲಿ ಕುಳಿತುಕೊಂಡು ತಂದಿಟ್ಟ ಪಾನೀಯವನ್ನು ನಿರಾಕರಿಸಿದನು. ಅವನ ಮುಖ ಉದ್ವಿಗ್ನಗೊಂಡಿತ್ತು. ಕ್ರೀಡಾಪಟುವಿನಂತಹ ಅವನ ಬಲಿಷ್ಠ ಶರೀರ, ಸಭೆಗಲ್ಲ, ಯಾವುದೋ ಸ್ಪರ್ಧೆಗೆ ಅಣಿಯಾಗಿದೆಯೋ ಎಂಬ ರೀತಿಯಲ್ಲಿ ಕುರ್ಚಿಯ ಮೇಲೆ ನೆಟ್ಟಗೆ ಸ್ಥಿರಗೊಂಡಿತ್ತು.

ಒಂಬತ್ತು ಗಂಟೆಗೆ ಸರಿಯಾಗಿ ಹಿರಿಯರೂ, ರೋಗನಿರ್ಣಯ ತಜ್ಞರೂ ಆದ ಮಾನ್ಯ ಡಾ॥ ವಿಲಿಯಂ ಟಿಕ್ ಅವರು, ಎಕ್ಸ್-ಕ್ಲಬ್‌ನ ಸಭೆಯ ಅಧಿವೇಶನ ಆರಂಭವಾಯಿತೆಂದು ಪ್ರಕಟಿಸಿದರು. ಹೊಸ ಸದಸ್ಯ ಡಾ॥ ವಾರ್ನರ್ ಅವರನ್ನು ಕುರಿತು ಡಾ॥ ಟಿಕ್ ಹೇಳಿದರು, "ಡಾ॥ ವಾರ್ನರ್, ಈ ಎಕ್ಸ್-ಕ್ಲಬ್‌ಗೆ ಕೇವಲ ಒಂದೇ ಒಂದು



ಉದ್ದೇಶವಿದೆ. ಪ್ರತಿ ಮೂರು ತಿಂಗಳಿಗೊಮ್ಮೆ ಇಲ್ಲಿಯ ಸದಸ್ಯರು, ಹಿಂದಿನ ಸಭೆ ನಡೆದ ನಂತರದ ಸಮಯದಲ್ಲಿ, ತಾವು ಮಾಡಿರಬಹುದಾದ ಒಂದು ಕೊಲೆಯನ್ನು ಒಪ್ಪಿಕೊಳ್ಳಲು ಇಲ್ಲಿ ಸೇರುತ್ತಾರೆ.''

''ನಾನು ಸೂಚಿಸುತ್ತಿರುವುದು ವೈದ್ಯಕೀಯ ಕೊಲೆಗಳ ಬಗ್ಗೆ. ನಮ್ಮಲ್ಲಿ ಯಾರಾದರೂ ಒಬ್ಬರು – ಕೇವಲ ಮೂರ್ಖತೆಯಿಂದಲ್ಲ – ಆದರೆ ಭಾವನೆಗಳ ಒತ್ತಡದಿಂದ ಮಾಡಿರಬಹುದಾದ ಕೊಲೆಯ ತಪ್ಪೊಪ್ಪಿಗೆಯನ್ನು ಕೇಳುವುದು ನಿಜಕ್ಕೂ ಸಮಾಧಾನ ಕೊಡುವಂತಹುದು. ಯಾವುದೇ ಒಬ್ಬ ವೈದ್ಯ, ತನ್ನ ತಪ್ಪಾದ ರೋಗ ನಿರ್ಣಯದಿಂದಾಗಲೀ ಅಥವಾ ಸೈದ್ಧಾಂತಿಕವಾಗಿ ಸಾಧಿಸಿ ತೋರಿಸಲು ಸಾಧ್ಯವಾಗುವಂತಹ ತಪ್ಪಾದ ಔಷಧೋಪಚಾರಗಳಿಂದಾಗಲೀ ಅಥವಾ ಶಸ್ತ್ರಚಿಕಿತ್ಸಾ ಕ್ರಮದಿಂದಾಗಲೀ, ಗುಣಹೊಂದಿ ಚೆನ್ನಾಗಿ ಬಾಳಬಹುದಾಗಿದ್ದಂತಹ ರೋಗಿಯನ್ನು ಕೊಂದಿದ್ದರೆ, ಅಂತಹ ಸಂಗತಿಗಳ ಬಗೆಗೆ ನಾವು ಆಸಕ್ತಿ ಹಾಗೂ ಕಳಕಳಿ ಹೊಂದಿದ್ದೇವೆ.''

ಹೊಸ ಸದಸ್ಯ ತುಸು ಅಸಹನೆಯಿಂದ ಗೊಣಗಿಕೊಂಡ : ''ಇದು ನನ್ನ ಮೊದಲ ಸಭೆಯೆಂದು ನಾನು ಸಂತೋಷಿಸುತ್ತೇನೆ.'' ಹೀಗೆ ಹೇಳಿದವನು ತನ್ನ ದನಿಯನ್ನು ಎತ್ತರಿಸಿ ನುಡಿದ,

''ಆದರೆ ನಾನು ಅತಿ ಮುಖ್ಯ ವಿಷಯವೊಂದನ್ನು ಹೇಳಬೇಕಾಗಿದೆ.''

''ಏನು ? ಒಂದು ಕೊಲೆಯೇ ?'' ಟಿಕ್ ಕೇಳಿದರು.

''ಹೌದು'' ಹೊಸ ಸದಸ್ಯ ಉತ್ತರಿಸಿದ.

''ಬಹಳ ಒಳ್ಳೆಯದು.'' ಆ ಹಿರಿಯ ಪ್ರೊಫೆಸರ್ ತಲೆಯಾಡಿಸಿ ಹೇಳಿದರು.

''ನೀವು ಹೇಳುವುದನ್ನು ಕೇಳಲು ನಮಗೆ ಬಹಳ ಸಂತೋಷವಾಗುತ್ತಿದೆ. ಆದರೆ ಕಾರ್ಯಕ್ರಮ ಸೂಚಿಯಲ್ಲಿ, ನಿಮ್ಮದಕ್ಕಿಂತ ಮೊದಲೇ ನಾವು ಎರಡು ಕೊಲೆಗಳನ್ನು ಕೇಳುವುದಿದೆ.''

ಆ ಸಮಯದಲ್ಲಿ ಸಂಘದ ಹಲವಾರು ಸದಸ್ಯರು ಈ ಯುವ ಶಸ್ತ್ರಚಿಕಿತ್ಸಕನ ಈ ಉದ್ವಿಗ್ನತೆಯಲ್ಲಿ, ಪ್ರಥಮ ರಂಗ ಪ್ರವೇಶದ ಭಯಕ್ಕಿಂತಲೂ ಮಿಗಿಲಾದ ಬೇರೆ ಏನೋ ಇರುವುದನ್ನು ಗಮನಿಸಿದರು. ಈ ಎಕ್ಸ್-ಕ್ಲಬ್‌ನ ಸಭೆಗೆ (ತನ್ನ ಮೊದಲನೆಯ ಸಭೆಗೆ) ಸ್ಯಾಮ್ ವಾರ್ನರ್, ತನ್ನೊಳಗೆ ಕುದಿಯುತ್ತಿರುವ ಯಾವುದೋ ಉಗ್ರ ಹಾಗೂ ನಿಗೂಢವಾದ ಸಮಸ್ಯೆಯೊಡನೆ ಬಂದಿದ್ದಾನೆಂಬ ನಿಶ್ಚಿತ ಅಭಿಪ್ರಾಯ ಕೋಣೆಯ ತುಂಬ ನಿಧಾನವಾಗಿ ತುಂಬಿಕೊಂಡಿತು.

ಪ್ರಸಿದ್ಧ ನರರೋಗತಜ್ಞ ಡಾ|| ಫಿಲಿಪ್ ಕುರ್ಟಿಫ್, ಡಾ|| ವಾರ್ನರ್‌ನ ಭುಜದ ಮೇಲೆ ತನ್ನ ಕೈಗಳನ್ನಿಟ್ಟು ಶಾಂತನಾಗಿ ಹೇಳಿದ : ''ಅದೇನೇ ಆಗಿರಲಿ, ನಾವೆಲ್ಲರೂ ಕೂಡ ಹೆಚ್ಚು ಕೆಡುಕನ್ನು ಮಾಡಿದ್ದೇವೆ.'' ಆಗ ಹಿರಿಯ ಟಿಕ್, ಆಣತಿ ಮಾಡುವವರಂತೆ ಹೇಳಿದರು, ''ಕುರ್ಟಿಫ್, ನೀವು ಸ್ಯಾಮ್ ವಾರ್ನರ್‌ನ ಕೈ ಹಿಡಿದುಕೊಳ್ಳಬೇಕಾದರೆ, ದಯವಿಟ್ಟು ನಿಶ್ಶಬ್ದವಾಗಿ ಕೈಹಿಡಿದುಕೊಳ್ಳಿ. ಇದು ಅಪರಾಧ ಪ್ರಜ್ಞೆಯ ವೈದ್ಯರುಗಳಿಗಾಗಿ ಇರುವ ಶುಶ್ರೂಷಾ ಗೃಹವಲ್ಲ. ಇದು ತಪ್ಪುಗಳಿಗಾಗಿ ಇರುವ ಚಿಕಿತ್ಸಾಗೃಹ. ನಮ್ಮ ಉದ್ದೇಶ ಸಂಪೂರ್ಣವಾಗಿ ವೈಜ್ಞಾನಿಕವಾದದ್ದು. ಸರಿ, ಈ ರಾತ್ರಿಯ ಮೊದಲನೆಯ ವಿಷಯವು ಡಾ|| ವೆಂಡೆಲ್ ಡೇವಿಸ್ ಅವರಿಂದ ಮಂಡಿಸಲ್ಪಡುತ್ತದೆ.''




ಸುಭಗ, ಸುಸಂಸ್ಕೃತನಾದ ಆ ಜಠರ ತಜ್ಞ ಎದ್ದು ನಿಲ್ಲುತ್ತಿದ್ದಂತೆ, ಕೋಣೆಯಲ್ಲಿ ಮೌನ ಆವರಿಸಿತು. ಆತ ಆರಂಭಿಸಿದ, ''ಕಳೆದ ಬೇಸಿಗೆಯಲ್ಲಿ ಒಂದು ದಿನ ನಾನು ಉಗಿಕೊಳವೆಗಳನ್ನು ಜೋಡಿಸುವ ಹೊರೋವಿಟ್ಸ್ ಎಂಬುವನ ಮನೆಗೆ ಹೋಗಬೇಕಾಯಿತು. ಸೆನೆಟರ್ ಬೆಲ್ ಅವರು ತಮ್ಮ ಕ್ಷೇತ್ರದ ಬಡಜನತೆಗಾಗಿ ಒಂದು ಪಿಕ್‌ನಿಕ್ ಪಾರ್ಟಿಯನ್ನು ಏರ್ಪಡಿಸಿದ್ದರು. ಆ ಪಾರ್ಟಿಯಲ್ಲಿ ತಿಂದಂತಹ ತಿನಿಸುಗಳ ಪರಿಣಾಮವಾಗಿ, ಹೊರೋವಿಟ್ಸ್‌ನ ಮೂರು ಮಕ್ಕಳೂ ವಿಷಾಹಾರ ಸೇವನೆಗೆ ಒಳಗಾಗಿದ್ದರು. ಆ ಸೆನೆಟರ್, ತಾನೇ ಆತಿಥೇಯನಾಗಿದ್ದರಿಂದ ಆ ಘಟನೆಗೆ ತಾನೇ ಹೊಣೆಯೆಂದುಕೊಂಡರು. ಅವರ ಮನಃಪೂರ್ವಕವಾದ ಕಳಕಳಿಯ ಕರೆಯ ಮೇರೆಗೆ ನಾನು ಹೊರೋವಿಟ್ಸ್‌ನ ಮನೆಗೆ ಹೋದೆ. ಅಲ್ಲಿ ಒಂಬತ್ತು ಮತ್ತು ಹನ್ನೊಂದು ವರ್ಷದ ಎರಡು ಮಕ್ಕಳೂ ಸಾಕಷ್ಟು ವಾಂತಿ ಮಾಡಿಕೊಳ್ಳುತ್ತಿದ್ದುದನ್ನು ಗಮನಿಸಿದೆ. ಆ ಮೂರು ಮಕ್ಕಳೂ ಪಿಕ್‌ನಿಕ್ಕಿನಲ್ಲಿ ತಿಂದಿದ್ದಂತಹ ತಿನಿಸುಗಳ ಪಟ್ಟಿಯನ್ನು ಆ ಮಕ್ಕಳ ತಾಯಿ ನನಗೆ ಕೊಟ್ಟಳು. ಆ ಪ್ರಮಾಣ ನನ್ನ ಮನಸ್ಸನ್ನು ತತ್ತರಿಸುವಂತಿತ್ತು. ಅವರುಗಳಿಗೆ ಸರಿಯಾದ ಪ್ರಮಾಣದಲ್ಲಿ ನಾನು ಹರಳೆಣ್ಣೆ ಯನ್ನು ಔಷಧವಾಗಿ ಕುಡಿಸಿದೆ. ಮೂರನೆಯ ಮಗು, ಏಳು ವರ್ಷದವನು, ಉಳಿದವರಷ್ಟು ಅಸ್ವಸ್ಥನಾಗಿದ್ದಂತೆ ತೋರಲಿಲ್ಲ. ಆದರೆ ಸ್ವಲ್ಪ ಮಂಕಾಗಿದ್ದ, ಸಣ್ಣಗೆ ಜ್ವರವಿತ್ತು ಮತ್ತು ಹೊಟ್ಟೆನೋವು ವಾಕರಿಕೆಗಳಿದ್ದವು. ಆದರೆ ವಾಂತಿ ಮಾಡಿಕೊಳ್ಳುತ್ತಿರಲಿಲ್ಲ. ಅವನು ಕೂಡ ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ವಿಷಾಹಾರ ಸೇವಿಸಿ ದ್ದಾನೆಂದೆನಿಸುತ್ತಿತ್ತು. ಹೇಗಾದರಾಗಲಿ ಎಂದು ಆ ಹುಡುಗನಿಗೂ ಕೂಡ, ಅದೇ ಪ್ರಮಾಣದ ಹರಳೆಣ್ಣೆಯನ್ನು ನಿಗದಿಪಡಿಸಿದೆ.

''ಆ ಏಳು ವರುಷದ ಹುಡುಗನ ಸ್ಥಿತಿಯಿಂದ ಗಾಬರಿಗೊಂಡ ತಂದೆ, ಮಧ್ಯರಾತ್ರಿಯಲ್ಲಿ ನನ್ನನ್ನು ಕರೆದ. ಉಳಿದ ಇಬ್ಬರು ಮಕ್ಕಳೂ ಚೇತರಿಸಿ ಕೊಳ್ಳುತ್ತಿರುವುದಾಗಿಯೂ, ಆ ಚಿಕ್ಕ ಹುಡುಗನಲ್ಲಿಯೂ ನಿಧಾನವಾಗಿ ವಿಷಾಹಾರ ಸೇವನೆಯ ಪರಿಣಾಮ ಕಂಡುಬಂದಿರುವುದಾಗಿಯೂ ಬೆಳಗಿನ ವೇಳೆಗೆ ಖಂಡಿತ ಗುಣ ಹೊಂದುವನೆಂದೂ, ಏನೂ ಚಿಂತಿಸಬೇಕಾಗಿಲ್ಲವೆಂದೂ ನಾನು ತಿಳಿಸಿದೆ. ಹಾಗೂ ರೋಗ ಪ್ರತಿಬಂಧಕವಾದ ಹರಳೆಣ್ಣೆಯ ಪ್ರಮಾಣವನ್ನು ಎಲ್ಲರಿಗೂ ನಿಗದಿ ಪಡಿಸಿದ್ದಕ್ಕಾಗಿ ನನ್ನ ಬಗೆಗೆ ನಾನೇ ಸುಪ್ರೀತಗೊಂಡೆ.

''ಮರುದಿನ, ಆ ಎರಡು ದೊಡ್ಡ ಹುಡುಗರೂ ಸಂಪೂರ್ಣ ಗುಣಮುಖ ರಾಗಿದ್ದರು. ಆದರೆ ಆ ಏಳು ವರ್ಷದ ಚಿಕ್ಕ ಹುಡುಗ, ಅತಿ ಅಸ್ವಸ್ಥನಾದಂತೆ ಕಾಣಿಸುತ್ತಿದ್ದ. ಮಗುವಿಗೆ ಸುಮಾರು ೪೧ ಡಿಗ್ರಿ ಸೆಂಟಿಗ್ರೇಡಿನಷ್ಟು ಜ್ವರವಿತ್ತು. ಅವನು ಸಂಪೂರ್ಣವಾಗಿ ನಿರ್ಜಲನಾಗಿದ್ದ. ಕಣ್ಣುಗಳು ಗುಳಿಬಿದ್ದು ಸುತ್ತಲೂ ಒಂದು ವರ್ತುಲವಿದ್ದಂತೆ ಕಾಣಿಸುತ್ತಿತ್ತು. ಕಣ್ಣುಗಳ ನೋಟ ಕಿರಿದಾಗಿದ್ದು ಮೂಗಿನ ಹೊಳ್ಳೆಗಳು ವಿಶಾಲಗೊಂಡಿದ್ದವು. ರಕ್ತದಲ್ಲಿ ಆಮ್ಲಜನಕದ ಕೊರತೆಯಿಂದಾಗಿ ತುಟಿಗಳು ನೀಲಿಯಾಗಿದ್ದವು ಹಾಗೂ ಚರ್ಮ ತಣ್ಣಗಾಗಿ ಅಂಟುತ್ತಿರುವಂತಿತ್ತು.''

ಡಾ|| ಡೇವಿಡ್ ಕೆಲಕಾಲ ಮಾತು ನಿಲ್ಲಿಸಿದರು.

ಪ್ರಸಿದ್ಧ ಶ್ವಾಸಕೋಶತಜ್ಞ ಡಾ|| ಮಿಲ್ಟನ್ ಮಾರಿಸ್ ಕೇಳಿದರು,

''ಒಂದೆರಡು ಗಂಟೆಗಳ ಒಳಗೇ ಆ ಮಗು ಸತ್ತಿತು ತಾನೆ ?''

ಹೌದು ಎಂಬಂತೆ ಡಾ|| ಡೇವಿಡ್ ಕತ್ತನ್ನು ಆಡಿಸಿದರು.

ಡಾ|| ಮಿಲ್ಟನ್ ಮಾರಿಸ್ ಗಂಭೀರವಾಗಿ ಹೇಳಿದರು, ''ಸರಿ, ನೀವು ಮೊದಲ ಬಾರಿ ಆ ಮಗುವನ್ನು ನೋಡಿದಾಗ ಆ ಮಗು ಬಹುಶಃ ತೀವ್ರವಾದ ಅಪೆಂಡಿಸೈಟಿಸ್‌ನಿಂದ ಬಳಲುತ್ತಿತ್ತೆಂದು ತೋರುತ್ತದೆ, ಹರಳೆಣ್ಣೆಯು ಮಗುವಿನ ಅಪೆಂಡಿಕ್ಸನ್ನು ಛಿದ್ರ ಮಾಡಿರುತ್ತದೆ. ಬೆಳಿಗ್ಗೆ ನೀವು ಮಗುವನ್ನು ನೋಡಲು ಹೋಗುವ ವೇಳೆಗೆ ಪೆರಿಟೋನಿಟಿಸ್ ಆರಂಭವಾಗಿರುತ್ತೆ.'' ಡಾ|| ಡೇವಿಸ್ ನಿಧಾನವಾಗಿ ಹೇಳಿದರು, ''ಹೌದು, ಖಂಡಿತ ಅದು ಹಾಗೆಯೇ ಆದದ್ದು.'' ಹಿರಿಯ ವೈದ್ಯ ಟಿಕ್ ''ಓ, ಹರಳೆಣ್ಣೆಯಿಂದ ಕೊಲೆ'' ಎನ್ನುತ್ತಾ ಕಿಸಿಕಿಸಿ ನಕ್ಕರು, ಮತ್ತೆ ಹೇಳಿದರು, ''ಈಗಿನ ಸರದಿ ಡಾ|| ಕೆನೆತ್‌ವುಡ್ ಅವರದು.''

ಹೆಸರಾಂತ ಸ್ಕಾಟಿಶ್ ಶಸ್ತ್ರಚಿಕಿತ್ಸಕ ಕೆನೆತ್‌ವುಡ್ ಎದ್ದುನಿಂತು, ತಮ್ಮ ಆಸ್ಪತ್ರೆಯ ಸಹೋದ್ಯೋಗಿ ಹಾಗೂ ಈ ಸಂಘದ ಹೊಸ ಸದಸ್ಯನೆಡೆಗೆ ತಿರುಗಿಕೊಂಡು ಹೇಳತೊಡಗಿದರು, ''ಸ್ಯಾಮ್, ಈ ತೀಕ್ಷ್ಣವಾದ ಮೂತ್ರಕೋಶದ ಕಲ್ಲುಗಳ ವಿಷಯ ನಿನಗೆ ತಿಳಿದೇ ಇದೆ. ಸುಮಾರು ಸರಿ ರಾತ್ರಿಯ ನಂತರ, ನನ್ನ ಆ ರೋಗಿಯನ್ನು ಕರೆತಂದರು. ಬಲಭಾಗದ ಹೊಟ್ಟೆಯ ಮೇಲ್ಭಾಗದಲ್ಲಿ ತೀವ್ರವಾದ ನೋವಿನಿಂದ ನರಳುತ್ತಿದ್ದಳು ಆ ರೋಗಿ. ನೋವು ಬೆನ್ನು ಮತ್ತು ಬಲ ಭುಜಗಳಲ್ಲಿಯೂ ಪ್ರಸರಿಸಿತು. ಇವು ಪಿತ್ತಕೋಶದಲ್ಲಿ ಕೆಲವೊಮ್ಮೆ ಉಂಟಾಗುವ ಪಿತ್ತಕಲ್ಲುಗಳ ನೋವಿನ ಸಂಪೂರ್ಣ ಲಕ್ಷಣಗಳಾಗಿದ್ದವಾಗಿ, ನಾನು ಅವಳಿಗೆ ನೋವಿಗಾಗಿ ಔಷಧಿಗಳನ್ನು ಕೊಟ್ಟೆ. ಆದರೆ ಬೆಳಗಿನ ವೇಳೆಗೆ ನೋವು ಅತ್ಯಂತ ತೀವ್ರವಾಗಿ ಪಿತ್ತಕೋಶ

ಛಿದ್ರಗೊಂಡಿತ್ತೆಂಬುದು ನಿಶ್ಚಿತವಾಗಿತ್ತು. ತಕ್ಷಣ ನಾನು ಶಸ್ತ್ರಚಿಕಿತ್ಸೆ ನಡೆಸಿದೆ. ಒಂದು ಗಂಟೆಯ ನಂತರ ಅವಳು ಅಸುನೀಗಿದಳು. ಅವಳ ಮೂತ್ರಕೋಶದಲ್ಲಿ ಯಾವುದೇ ತೊಂದರೆಯಿರಲಿಲ್ಲ.''

''ಅತ್ಯಂತ ಕಿರಿಯ ಅಪರಾಧ. ಶವಪರೀಕ್ಷೆ ಏನನ್ನು ತೋರಿಸಿತು ?'' ಡಾ|| ಸ್ವೀನಿ ಕೇಳಿದರು. ಕೆನೆತ್‌ವುಡ್ ಹೇಳಿದರು, ''ಸ್ವಲ್ಪ ತಡೆಯಿರಿ. ಅದನ್ನು ನೀವಿನ್ನೂ ಲೆಕ್ಕಾಚಾರ ಮಾಡಬೇಕಾಗಿದೆ.'' ಸ್ವಲ್ಪ ಸಮಯದ ನಂತರ ಡಾ|| ಕುರ್ಟಿಫ್ ಕೇಳಿದರು, ''ನೀವು ಆಕೆಯ ಪೂರ್ವ ವೃತ್ತಾಂತವನ್ನು ಕೇಳಿದ್ದಿರಾ ?''

ವುಡ್ ಉತ್ತರಿಸಿದರು, ''ಇಲ್ಲ, ಅದೊಂದು ತುರ್ತು ಪರಿಸ್ಥಿತಿಯಲ್ಲಿ ಮಾಡಬೇಕಾಗಿದ್ದ ಶಸ್ತ್ರ ಚಿಕಿತ್ಸೆಯಾಗಿತ್ತು.''

''ಓಹ್'' ಹಿರಿಯ ಟಿಕ್ ಭುಸುಗುಟ್ಟಿದರು, ''ಸರಿ, ಈಗ ಅರ್ಥವಾಯಿತು. ಡಾ|| ವುಡ್ ಅವರು ನೋವಿನ ಮೂಲವನ್ನು ತಪ್ಪಾಗಿ ತಿಳಿದುಕೊಂಡು ಒಬ್ಬ ಮಹಿಳೆಯ ಕೊಲೆ ಮಾಡಿದರು. ಸರಿ, ಮೂತ್ರಕೋಶದ ಕಲ್ಲುಗಳಲ್ಲದೆ, ಬೇರೆ ಯಾವ ರೋಗವು ನಮ್ಮ ಹೆಸರಾಂತ ಶಸ್ತ್ರ ಚಿಕಿತ್ಸಕರು ವಿವರಿಸಿರುವಂತಹ ನೋವನ್ನು ಉಂಟು ಮಾಡಬಹುದು ?''

''ಹೃದಯ'' ಡಾ|| ಮಾರಿಸ್ ತಟ್ಟನೆ ಉತ್ತರಿಸಿದರು.

ಡಾ|| ವುಡ್ ಹೇಳಿದರು, ''ನೀವು ಉತ್ತೇಜಿತರಾಗುತ್ತಿದ್ದೀರಿ. ಶವಪರೀಕ್ಷೆಯಲ್ಲಿ ಬಲಭಾಗದ ಕರೋನರಿ ಶುದ್ಧ ರಕ್ತನಾಳ ಸ್ವಲ್ಪ ಅತಿಕ್ರಮಣವೂ ಕಂಡುಬಂದಿತು.''

''ಸರಿ, ಇದೊಂದು ಕೇವಲ ಎರಡನೆಯ ವರ್ಷದ ವೈದ್ಯವಿದ್ಯಾರ್ಥಿಯಿಂದಾದ ಕೊಲೆ'', ಹಿರಿಯ ಟಿಕ್ ಕೋಪದಿಂದ ಉಚ್ಚರಿಸಿದರು, ಮತ್ತು ಮಾತನ್ನು ಮುಂದುವರೆಸಿದರು, ''ಮಹಾಶಯರೇ, ಈ ಎರಡೂ ಶೈಶವದ ಅಪರಾಧಗಳಿಂದ, ವಿಜ್ಞಾನ ಮತ್ತು ಮೂರ್ಖತೆ ಒಟ್ಟೊಟ್ಟಿಗೇ ಕೈ ಕೈ ಹಿಡಿದು ಸಾಗುತ್ತವೆ ಎಂಬುದನ್ನು ಬಿಟ್ಟು, ನಾವು ಬೇರೆ ಏನನ್ನೂ ಕಲಿಯಲಾಗಲಿಲ್ಲ. ಆದಾಗ್ಯೂ ಇಂದು ನಮ್ಮೊಟ್ಟಿಗೆ ವೈದ್ಯಕೀಯ ಗರಗಸವನ್ನು ಅತ್ಯಂತ ಜಾಣತನದಿಂದ ತಿರುಗಿಸಬಲ್ಲ ಒಬ್ಬ ಯುವ ಪ್ರತಿಭಾವಂತನಿದ್ದಾನೆ. ಅವನೇನಾದರೂ ಒಂದು ಕೊಲೆ ಮಾಡಿರುವುದಾದರೆ ಅದು ಖಂಡಿತವಾಗಿಯೂ ನನ್ನ ಕೆಲವರು ವೈದ್ಯಕೀಯ ವಿದ್ಯಾರ್ಥಿನಿಯರು 'ಆಹಾ ಜೇನಿನಂತೆ ಮಧುರ' ಎಂದು ಹೇಳಲೇ ಬೇಕಾದಂತಹುದು ಎಂದು ನಾನು ಭರವಸೆಕೊಡಬಲ್ಲೆ. ತನ್ನ ಅಪರಾಧದಿಂದಾಗಿ ಬೆವರುತ್ತಾ, ಎಲ್ಲವನ್ನೂ ಹೇಳಿಬಿಡಬೇಕೆಂಬ ಆಕಾಂಕ್ಷೆಯಿಂದ, ಒಬ್ಬ ನಿಜವಾದ ಅಪರಾಧಿಯಂತೆ ಚಡಪಡಿಸುತ್ತಾ ಇಲ್ಲಿ ಕುಳಿತಿದ್ದಾನೆ. ಮಹಾಶಯರೆ, ನಾನೀಗ ನಮ್ಮ ಹೊಸ ಮತ್ತು ಅತ್ಯಂತ ಕಿರಿಯ ಅಪರಾಧಿ ಡಾ|| ಸ್ಯಾಮುಯೆಲ್ ವಾರ್ನರ್‌ನನ್ನು ನಿಮ್ಮ ಮುಂದೆ ಪ್ರಸ್ತುತ ಪಡಿಸುತ್ತೇನೆ.''

ಡಾ|| ವಾರ್ನರ್ ಒದ್ದೆಯಾಗಿದ್ದ ಕರವಸ್ತ್ರದಿಂದ ಕುತ್ತಿಗೆಯನ್ನು ಒರೆಸಿಕೊಂಡು ಹೇಳಿದನು, ''ಆ ರೋಗಿ ಒಬ್ಬ ಯುವಕ, ಕೇವಲ ಹದಿನೇಳು ವರ್ಷದವನು ಹಾಗೂ ಆಶ್ಚರ್ಯಕರ ಎನಿಸುವಂಥ ಬುದ್ಧಿವಂತ. ಅವನು ಕವನಗಳನ್ನು ರಚಿಸುತ್ತಿದ್ದನು. ನಾನು ಅವನನ್ನು ನೋಡುವ ಎರಡು ವಾರಗಳ ಮುಂಚಿನಿಂದಲೂ ಅಸ್ವಸ್ಥನಾಗಿದ್ದನು. ಅಷ್ಟು ತೀವ್ರವಾಗಿ ಅಸ್ವಸ್ಥನಾಗಿದ್ದುದನ್ನು ಕಂಡು ಅವನನ್ನು ಕೂಡಲೇ ಆಸ್ಪತ್ರೆಗೆ ದಾಖಲು ಮಾಡಿಸಿದೆ. ಹೊಟ್ಟೆಯ ಎಡಭಾಗದಲ್ಲಿ ತೀವ್ರವಾದ ನೋವಿನಿಂದಾಗಿ ಕಾಯಿಲೆ ಆರಂಭವಾಗಿತ್ತು. ಮೊದಲೇ ನನ್ನನ್ನು ಕರೆಯಬೇಕೆಂದಿದ್ದವನು, ಆದರೆ, ಮೂರು ದಿನಗಳ ನಂತರ ನೋವು ಉಪಶಮನವಾದದ್ದರಿಂದ, ತಾನು ಆರೋಗ್ಯವಾಗಿದ್ದೇನೆಂದುಕೊಂಡು ರೋಗಿ ಸುಮ್ಮನಾಗಿದ್ದ. ಆದರೆ ಆ ನೋವು ಎರಡು ದಿನಗಳ ನಂತರ ಮರುಕಳಿಸಿತು. ಹಾಗೂ ಅವನು ಜ್ವರದಿಂದಲೂ ನರಳತೊಡಗಿದ. ಜೊತೆಗೆ ಅತಿಸಾರವು ಆರಂಭವಾಯಿತು. ಮಲದಲ್ಲಿ ಕೀವು ಮತ್ತು ರಕ್ತಗಳಿದ್ದವು. ಆದರೆ ಏಕಾಣುಜೀವಿಯಾಗಲೀ (ಅಮೀಬಾ) ಅಥವಾ ಬೇರೆ ಯಾವುದೇ ರೋಗ ಕಾರಕವಾದ ಸೂಕ್ಷ್ಮಾಣು ಜೀವಿಗಳಾಗಲೀ, ಅವನನ್ನು ನನ್ನ ಬಳಿಗೆ ಕರೆತಂದಾಗ ಇರಲಿಲ್ಲ. ಪೆಥಾಲಜಿಯ (ರೋಗ ನಿದಾನಶಾಸ್ತ್ರ) ವರದಿಯನ್ನು ಓದಿದ ನಂತರ, ಇದು ಜಠರದ ಹುಣ್ಣುಗಳಿಂದಾಗಿರುವ ಉದರಶೂಲೆ ಎಂದು ರೋಗ ನಿರ್ಣಯ ಮಾಡಿದೆ (ulcerative colitis). ಅವನ ರೋಗ ಲಕ್ಷಣಗಳು ಅಪೆಂಡಿಸೈಟಿಸ್‌ಗೆ ಸಂಬಂಧಿಸಿದಂತೆ ಕಂಡುಬರಲಿಲ್ಲ. ನಾನು ರೋಗಿಗೆ ಕೇವಲ ಸ್ವಚ್ಛ ದ್ರವಾಹಾರ ಹಾಗೂ ಸಲ್ಫಾಸೆಲಾಜೈನ್ ಇಷ್ಟನ್ನು ಮಾತ್ರವೇ ಕೊಡುತ್ತಾ ಬಂದೆ. ಈ ರೀತಿಯ ಚಿಕಿತ್ಸೆ ನೀಡಿದಾಗ್ಯೂ ರೋಗಿಯ ಸ್ಥಿತಿ ಉಲ್ಬಣಗೊಂಡಿತು. ಅವನಲ್ಲಿ ಉದರ-ಜಠರಗಳು ಮೆದುಗೊಳ್ಳತೊಡಗಿದವು, generalised abdominal tenderness ಆರಂಭವಾಯಿತು. ಹೀಗೆ ಎರಡು ವಾರಗಳ ಎಚ್ಚರಿಕೆಯ ಚಿಕಿತ್ಸೆಯ ನಂತರ ರೋಗಿ ಮೃತನಾದ...'' ''ಪರಿಪೂರ್ಣ ಅಪರಾಧ.'' ಡಾ|| ವುಡ್ ಕೇಳಿದರು : ''ಶವಪರೀಕ್ಷೆ ನಿನ್ನ ನಿರ್ಣಯ ತಪ್ಪೆಂದು ತೋರಿಸಿತಲ್ಲವೇ ?''

ಡಾ|| ವಾರ್ನರ್ ಹೇಳಿದ, ''ನಾನು ಶವ ಪರೀಕ್ಷೆಯನ್ನು ಮಾಡಲಿಲ್ಲ. ಆ ಹುಡುಗನ ತಂದೆ ತಾಯಿ ನನ್ನಲ್ಲಿ ಸಂಪೂರ್ಣ ನಂಬಿಕೆ ಇಟ್ಟಿದ್ದರು, ಆ ಹುಡುಗನೂ ಕೂಡ ಅಷ್ಟೇ. ಆ ಹುಡುಗನ ಜೀವ ಉಳಿಸಲು ನನಗೆ ಏನೇನು ಸಾಧ್ಯವಿತ್ತೋ, ಅವನ್ನೆಲ್ಲಾ ನಾನು ಮಾಡುತ್ತಿದ್ದೇನೆಂದು ಅವರೆಲ್ಲರೂ ನಂಬಿದ್ದರು.''

ಡಾ|| ಹ್ಯೂಮ್ ಕೇಳಿದರು, ''ಹಾಗಿದ್ದರೆ ರೋಗ ನಿರ್ಣಯದಲ್ಲಿ ನೀನು ತಪ್ಪು ಮಾಡಿದ್ದೆ ಎಂದು ಹೇಗೆ ತಿಳಿಯುತ್ತೀಯಾ ?''

ಡಾ|| ವಾರ್ನರ್ ಕುಪಿತಗೊಂಡು ಹೇಳಿದ, ''ಸರಳ, ವಾಸ್ತವತೆಯಿಂದ. ಆ ರೋಗಿ ಗುಣವಾಗುವ ಬದಲು ಮೃತನಾದನೆಂಬ ಸರಳ ಸತ್ಯದಿಂದ. ತಪ್ಪು ರೋಗ ನಿರ್ಣಯದಿಂದಾಗಿ ನಾನು ಅವನನ್ನು ಕೊಂದುಬಿಟ್ಟಿದ್ದೆ.''

ಡಾ|| ಸ್ವೀನಿ ಹೇಳಿದರು, ''ಅತ್ಯಂತ ತರ್ಕಬದ್ಧ ಮುಕ್ತಾಯ.''

ತಮ್ಮ ಮೇಜಿನ ಹಿಂಭಾಗದಿಂದ ಹಿರಿಯ ಟಿಕ್ ಗಹಗಹಿಸಿ ನಕ್ಕರು, ''ಸರಿ ಮಹಾಶಯರೇ ನಮ್ಮ ಈ ಪ್ರತಿಭಾವಂತ ಹೊಸ ಸದಸ್ಯ, ಖಂಡಿತವಾಗಿ, ಒಬ್ಬ ದೊಡ್ಡ ಕವಿಯನ್ನು ಮುಗಿಸಿದ್ದಾನೆ, ಅವನ ರೋಗ

## ಗಳಿಗೆ

ಹಗಲು ಬಿದ್ದುಕೊಂಡಿದೆ
ಉಪ್ಪರಿಗೆಯ ಮೇಲೆ
ಹಿಂಡು ಕಣ್ಣೊಳಗೆ ಬೆಳಕು ಕದಲಾಡಿದೆ

ಮುಗಿಬಿದ್ದ ಕತ್ತಲಿಗೆ
ಕನಸು ಜೊತೆಯಾಗಿ
ರಾತ್ರಿ ಕನವರಿಸದೆ ಚಿತ್ತಾರ ಬಿಡಿಸಿದೆ
ಮಣ್ಣು ಕಣ್ಣೊಡೆಯದೆ
ನೆಲದ ಎದೆಯ ಮೇಲೆ
ಹಸಿರು ಎಡೆ ಬಿಚ್ಚಿದೆ.

ಕುಡಿ ಮೂಡದ ಗಿಡದಿಂದ
ಮೊಗ್ಗೊಂದು ಇಣುಕಿ ನೋಡಿದೆ

ಹಗಲ ಬೊಗಸೆಯ ತುಂಬ
ಕತ್ತಲಿನ ಬಿಕ್ಕಳಿಕೆ
ಕತ್ತಲ ಕಣ್ಣೊಳಗೆ ಹಗಲ ನರಳಿಕೆ
ಈ ಎರಡರ ನಡುವೆ ತಾಲೀಮು ನಡೆಸುವ
ಬೆಳದಿಂಗಳು ಹೂ ಮುಡಿದಿದೆ

ಮಳೆ ಉದುರದೆ
ಕಡಲ ತಡಿಯ ತೆರೆಗಳು
ನೆಗೆದಾಡಿ ಕಪ್ಪೆ ವಟಗುಟ್ಟಿತು
ದಾರಿ ನಡಿಗೆಯಿಲ್ಲದೆ
ಹೆಜ್ಜೆ ಗುರುತಗಳನ್ನಪ್ಪಿಕೊಂಡು
ಅಸ್ಪಷ್ಟ ಹೆಜ್ಜೆಗಳು ತೇಲಾಡಿತು

ತುಟಿ ಎರಡಾಗದೆ
ಅವನ ಬಿಗಿ ಅಪ್ಪುಗೆಗೆ
ಬಿಕ್ಕಳಿಕೆ ತುಟಿಯಾಚೆ ತಡಬಡಿಸಿದೆ

ಹೊಲಿದ ರೆಪ್ಪೆಗಳು ಅರಳದೆ
ಬೆರಗು ಬೆಳಗಿನ ಚಿತ್ರ
ಕಣ್ಣೊಳಗೆ ಕದಲದೆ ನೋಡುತ್ತಿದೆ

ಲಕ್ಕೂರು ಸಿ. ಆನಂದ
'ಪದ್ಮಗೌರಿ', ಪೊಲೀಸ್ ಠಾಣೆ ಎದುರು
ಲಕ್ಕೂರು ಅಂಚೆ, ಮಾಲೂರು ತಾಲ್ಲೂಕು
ಕೋಲಾರ ಜಿಲ್ಲೆ - ೫೬೩ ೧೬೦

ನಿರ್ಣಯದ ದೋಷಾರೋಪಣೆಗಳ ವಿಚಾರಣೆ ಈಗ ಆರಂಭವಾಗುತ್ತದೆ.''

ಡಾ॥ ರಾಸನ್ ಕೇಳಿದರು, ''ಆ ರೋಗಿ ಸತ್ತು ಎಷ್ಟು ದಿನಗಳಾದವು ?''

ಡಾ॥ ವಾರ್ನರ್ ಉತ್ತರಿಸಿದ, ''ಕಳೆದ ಬುಧವಾರ. ಏಕೆ ?''

ಡಾ॥ ಕುರ್ಟಿಫ್ ಕೇಳಿದರು, ''ಆ ಹುಡುಗನ ತಂದೆ ತಾಯಿಗಳು ನಿನ್ನಲ್ಲಿ ನಂಬಿಕೆ ಇಟ್ಟಿದ್ದರು ಎಂದು ಹೇಳುತ್ತೀಯ. ಆದರೂ ಯಾವುದೋ ವಿಷಯವಾಗಿ ಅತ್ಯಂತ ವಿಲಕ್ಷಣ ಎನಿಸುವಂತೆ ಚಿಂತಿತನಾಗಿದ್ದಿ ಎನಿಸುತ್ತದೆ. ಏಕೆ, ಪೊಲೀಸಿನವರಿಂದ ತನಿಖೆ ಏನಾದರೂ ನಡೆಯುತ್ತಿದೆಯೇನು ?'' ಡಾ॥ ವಾರ್ನರ್ ಹೇಳಿದ, ''ಖಂಡಿತ ಇಲ್ಲ. ನಾನೊಂದು ಪರಿಪೂರ್ಣ ಅಪರಾಧವನ್ನು ಮಾಡಿದ್ದೇನೆ. ಕೇಳಿ.'' ಅವನು ಮುಂದುವರೆಸಿದ, ''ನಿಮ್ಮಂತಹ ವೈದ್ಯರುಗಳಿಗೂ ಕೂಡ ನನ್ನ ರೋಗನಿರ್ಣಯ ತಪ್ಪು ಎಂದು ಸಮರ್ಥಿಸಲಾಗುವುದಿಲ್ಲ''

ಈ ದುರಭಿಮಾನದ ಸವಾಲು ಅನೇಕ ಸದಸ್ಯರುಗಳನ್ನು ಕುಪಿತಗೊಳಿಸಿತು. ಡಾ॥ ವುಡ್, ತಮ್ಮ ಕಣ್ಣುಗಳನ್ನು ಡಾ॥ ವಾರ್ನರ್‌ರ ಮುಖದಲ್ಲಿ ನೆಡುತ್ತಾ ನಿಧಾನವಾಗಿ ಹೇಳಿದರು, ''ಹಾಗಿದ್ದರೆ ಇಲ್ಲಿ ಏನೋ ಒಂದು ಸಿಕ್ಕು ಇದೆ.''

ಡಾ॥ ವಾರ್ನರ್ ತಟ್ಟನೇ ಹೇಳಿದ, ''ಒಂದೇ ಒಂದು ಸಿಕ್ಕು ಎಂದರೆ ಈ ಕೇಸಿನ ಜಟಿಲತೆ ಮತ್ತು ಸಂಕೀರ್ಣತೆ. ನಿಮ್ಮಂತಹ ಮಹಾಶಯರು ಖಂಡಿತ ವಾಗಿ ನಾನು ಈ ರಾತ್ರಿ ಇಲ್ಲಿ ಕೇಳಿದಂತಹ ಸರಳ ಅಪರಾಧಗಳನ್ನು ಇಷ್ಟಪಡುತ್ತೀರಿ.''

ಡಾ॥ ಸ್ಟೀನಿ ಮೃದುವಾಗಿ ಹೇಳಿದರು, ''ಡಾ॥ ವಾರ್ನರ್‌ನ ಕೇಸು ಅತಿ ದಡ್ಡತನದಿಂದ ಸಂಶೋಧಿಸಿದ ರೋಗ ನಿರ್ಣಯಕ್ಕೊಂದು ಒಳ್ಳೆಯ ಉದಾಹರಣೆ. ಅವನು ಪ್ರಸ್ತುತಪಡಿಸಿರುವ ಲಕ್ಷಣಗಳು ಅನೇಕ ರೋಗಗಳನ್ನು ಸೂಚಿಸಬಹುದು.''

ಡಾ॥ ವಾರ್ನರ್ ಕೋಪದಿಂದ ಕೆಂಪಾದ ಮತ್ತು ಡಾ॥ ಸ್ಟೀನಿಯವರನ್ನು ಕೇಳಿದ, ''ನಿಮ್ಮ ಈ ಅಪಮಾನಕರ ಮಾತುಗಳನ್ನು ಸ್ವಲ್ಪ ವೈಜ್ಞಾನಿಕವಾಗಿ ಸಮರ್ಥಿಸಿಕೊಳ್ಳಲು ಮನಸ್ಸು ಮಾಡುವಿರಾ ?''

ಡಾ॥ ಡೇವಿಸ್ ಹೇಳಿದರು, ''ನೀನು ಕೊನೆಯ ಲಕ್ಷಣವಾಗಿ ಉದರ ಮತ್ತು ಜಠರಗಳು ಮೆದು ಗೊಳ್ಳುವುದನ್ನು ತಿಳಿಸಿದೆ, ಅದು ಪೆರಿಟೋನಿಟಿಸ್ ಅನ್ನು ಸೂಚಿಸುತ್ತದೆ.''

ಡಾ॥ ಸ್ಟೀನಿ ತಮ್ಮ ಮಾತನ್ನು ಸೇರಿಸಿದರು : ''ಮತ್ತು ಅದು ಹುಣ್ಣು ಅಲ್ಲದಿರುವ ಬೇರೆ ಯಾವುದೋ ಒಂದು ಛಿದ್ರವನ್ನು ಸೂಚಿಸುತ್ತದೆ.''

ಡಾ॥ ವಾರ್ನರ್ ಒದ್ದೆಯಾದ ತನ್ನ ಕರವಸ್ತ್ರದಿಂದ ಮುಖವನ್ನು ಒರೆಸಿಕೊಳ್ಳುತ್ತಾ ಮೆದುವಾಗಿ ಹೇಳಿದ, ''ಹೊರವಸ್ತುವಿನಿಂದ ಆಗುವ ಛಿದ್ರದ ವಿಷಯವಾಗಿ ನಾನು ಎಂದೂ ಯೋಚಿಸಲೇ ಇಲ್ಲ.''

ಡಾ॥ ಕುರ್ಟಿಫ್ ನಗುತ್ತಾ ಹೇಳಿದರು, ''ನೀನು ಯೋಚಿಸಬೇಕಾಗಿತ್ತು.''

ಹಿರಿಯ ಟಿಕ್ ಮಧ್ಯೆ ತಡೆದು ಹೇಳಿದರು, ''ಸರಿ, ಸರಿ, ನಾವು ಸುಮ್ಮನೆ ವಿಷಯ ಬಿಟ್ಟು ಮಾತನಾಡುವುದು ಬೇಡ. ಹಾಗಾದರೆ, ಆ ಛಿದ್ರಕ್ಕೆ ಯಾವುದು ಕಾರಣವಾಯಿತು ?''

ಡಾ॥ ಕುರ್ಟಿಫ್ ಉತ್ತರಿಸಿದರು, ''ಆ ಹುಡುಗ ಹದಿನೇಳು ವರ್ಷದವನು, ಪಿನ್ನುಗಳನ್ನು ನುಂಗಲು ತೀರಾ ದೊಡ್ಡವನು.''

ಡಾ॥ ವುಡ್ ಹೇಳಿದರು, ''ಹಾಗಾದರೆ ಬಹುಶಃ ಅದು ಕೋಳಿಯ ಮೂಳೆ ಆಗಿರಲಾರದು. ಕೋಳಿಯ ಮೂಳೆಯು ಅನ್ನನಾಳದಲ್ಲಿ ಸಿಕ್ಕಿಹಾಕಿಕೊಳ್ಳುತ್ತಿತ್ತು ಮತ್ತು ಜಠರದ ತನಕ ತಲುಪುವ ಸಾಧ್ಯತೆಯೇ ಇರುತ್ತಿರಲಿಲ್ಲ.''

ಆಗ ಹಿರಿಯ ಟಿಕ್ ಹೇಳಿದರು, ''ನೋಡು ವಾರ್ನರ್, ಎಲ್ಲ ಸಾಧ್ಯತೆಗಳನ್ನೂ ನಾವು ಕಿರಿದು ಗೊಳಿಸಿದ್ದೇವೆ. ಹರಡುತ್ತಿರುವ ಜಠರದ ಮೆದುತ್ವ ಹರಡುತ್ತಿರುವ ಸೋಂಕನ್ನು ಸೂಚಿಸುತ್ತದೆ. ಈ ರೋಗ ಹಿಡಿದಿರುವ ಜಾಡು ಬಹುಪಾಲು ಹುಣ್ಣಿನಿಂದ ಆಗಿರ ದಂತಹ ಛಿದ್ರವನ್ನು ಸೂಚಿಸುತ್ತದೆ ಮತ್ತು ಆ ರೀತಿಯ ಛಿದ್ರವಾಗುವುದು ಎಂದರೆ, ಯಾವುದೇ ವಸ್ತುವನ್ನು ನುಂಗಿದ್ದರಿಂದ ಆಗುವುದು. ಪಿನ್ನುಗಳು ಮತ್ತು ಕೋಳಿ ಮೂಳೆಯನ್ನು ಅಲ್ಲವೆಂದು ತಳ್ಳಿ ಹಾಕಿದ್ದೇವೆ. ಇನ್ನು ಕೇವಲ, ನಿರ್ದಿಷ್ಟವಾದಂತಹ ಒಂದೇ ಒಂದು ಊಹೆಯನ್ನು ನಾವು ಮಾಡ ಬಹುದಾಗಿದೆ.''

ಡಾ॥ ಸ್ಟೀನಿ ತಕ್ಷಣ ಹೇಳಿದರು, ''ಮೀನಿನ ಮೂಳೆ.''

''ಖಂಡಿತವಾಗಿ.'' ಟಿಕ್ ಹೇಳಿದರು.

ಎಲ್ಲ ದನಿಗಳೂ ಈ ರೋಗ ಕಾರಣದ ನಿರ್ಣಯವನ್ನು ಸಮರ್ಥಿಸುತ್ತಿರುವುದನ್ನು ಡಾ॥ ವಾರ್ನರ್ ಉದ್ವಿಗ್ನನಾಗಿ ಕೇಳುತ್ತಾ ನಿಂತಿದ್ದ. ಹಿರಿಯ ಟಿಕ್ ತಮ್ಮ ತೀರ್ಮಾನವನ್ನು ಹೇಳಿದರು, ''ಡಾ॥ ಸ್ಯಾಮ್ ವಾರ್ನರ್ ತನ್ನ ರೋಗಿಯನ್ನು ಒಂದು ಶಸ್ತ್ರ ಚಿಕಿತ್ಸೆಯ ಮೂಲಕ ಒಳಗಿದ್ದ ಮೀನಿನ ಮೂಳೆಯನ್ನು ತೆಗೆದು ಬದುಕಿಸುವ ಬದಲು ಅಲ್ಸರೇಟಿವ್ ಕೊಲೈಟಿಸ್ ಚಿಕಿತ್ಸೆಮಾಡಿ ಅವನನ್ನು ಕೊಂದಿದ್ದಾನೆ.''

ಡಾ॥ ವಾರ್ನರ್ ವೇಗವಾಗಿ ಕೋಣೆಯ ಅತ್ತ ಕಡೆ ಅಲಮಾರಿನ ಹತ್ತಿರ, ತನ್ನ ಹ್ಯಾಟು ಮತ್ತು ಕೋಟು ಗಳನ್ನು ತಗುಲಿಹಾಕಿದ್ದ ಕಡೆಗೆ ನಡೆದ.

ಡಾ॥ ವುಡ್ ಅವನನ್ನು ಕೂಗಿ ಕೇಳಿದರು, ''ನೀನೆಲ್ಲಿ ಹೋಗುತ್ತಿದ್ದೀಯಾ ? ನಾವು ಈಗಿನ್ನೂ ಸಭೆಯನ್ನು ಆರಂಭಿಸುತ್ತಿದ್ದೇವೆ.''

ಡಾ॥ ವಾರ್ನರ್ ತನ್ನ ಕೋಟು, ಹ್ಯಾಟುಗಳನ್ನು ಧರಿಸುತ್ತಾ ನಗುತ್ತಿದ್ದ ಅವನು ಹೇಳಿದ, ''ನನಗೆ ಹೆಚ್ಚು ಸಮಯವಿಲ್ಲ. ಈ ಕೇಸಿನಲ್ಲಿ ಯಾವುದೇ ಸಿಕ್ಕು, ನಿಗೂಢತೆ ಇದೆಯೆಂದು ನೀವು ಹೇಳಿದ್ದು ಸರಿ. ಆ ನಿಗೂಢತೆ ಏನೆಂದರೆ, ನನ್ನ ರೋಗಿ ಇನ್ನೂ ಬದುಕಿದ್ದಾನೆ. ಅವನಿಗೆ ನಾನು ಎರಡು ವಾರ ಗಳಿಂದಲೂ, ಹುಣ್ಣುಗಳಿಂದಾಗಿರುವ ಉದರಶೂಲೆಗೆ ಚಿಕಿತ್ಸೆ ಮಾಡುತ್ತಿದ್ದೇನೆ ಮತ್ತು ಇಂದು ಮಧ್ಯಾಹ್ನ ನಾನು ರೋಗ ನಿರ್ಣಯದಲ್ಲಿ ತಪ್ಪು ಮಾಡಿದ್ದೇನೆಂದು ಅರಿತುಕೊಂಡೆ. ಹಾಗೂ ಇನ್ನು ಇಪ್ಪತ್ನಾಲ್ಕು ಗಂಟೆಗಳಲ್ಲಿ ಅವನಿಗೆ ನಿಜವಾಗಿ ಏನಾಗಿದೆಯೆಂದು ನಾನು ಕಂಡುಕೊಳ್ಳದಿದ್ದರೆ, ಅವನು ಸತ್ತೇಹೋಗುತ್ತಾನೆಂದೂ ಅರಿತೆ. ನಿಮ್ಮೆಲ್ಲರಿಗೂ, ನಿಮ್ಮ ನಿರ್ಣಯಕ್ಕಾಗಿ ಅನಂತ ವಂದನೆಗಳು. ನನ್ನ ರೋಗಿಯ ಜೀವ ಉಳಿಸಲು ಅದು ಸಹಾಯ ಮಾಡುವುದು.''

ಅರ್ಧ ಗಂಟೆಯ ನಂತರ ಎಕ್ಸ್-ಕ್ಲಬ್‌ನ ಎಲ್ಲ ಸದಸ್ಯರೂ ಸೇಂಟ್ ಮೊಬೇಲ್ ಆಸ್ಪತ್ರೆಯಲ್ಲಿ ಡಾ॥ ವಾರ್ನರ್ ಶಸ್ತ್ರಚಿಕಿತ್ಸೆ ಮಾಡುವುದನ್ನು ನೋಡುತ್ತಾ, ಕಾಯುತ್ತಾ, ನಿಂತಿದ್ದರು. ಯಾರೊಬ್ಬರೂ ಮಾತನಾಡಲಿಲ್ಲ. ನಿಮಿಷಗಳು ಕಳೆದವು. ನರ್ಸ್‌ಗಳು ಶಸ್ತ್ರಚಿಕಿತ್ಸಾ ಸಲಕರಣೆಗಳನ್ನು ಶಸ್ತ್ರಚಿಕಿತ್ಸಕನಿಗೆ ಮೌನವಾಗಿ ಕೊಡುತ್ತಿದ್ದರು. ರಕ್ತ ಅವರ ಕೈಗಳ ಮೇಲೆಲ್ಲಾ ಸಿಡಿಯುತ್ತಿತ್ತು. ಹದಿನಾಲ್ಕು ಮಂದಿ ಪ್ರಖ್ಯಾತ ವೈದ್ಯರು, ಮುಖವೆಲ್ಲಾ ಬಿಳಿಚಿಕೊಂಡು, ಪ್ರಜ್ಞಾಹೀನ ನಾಗಿದ್ದ, ಮೀನಿನ ಮೂಳೆಯನ್ನು ನುಂಗಿಬಿಟ್ಟಿದ್ದ ಆ ಹುಡುಗನ ಮುಖದತ್ತ ಭರವಸೆಯಿಂದ ನೋಡಿದರು. ಯಾವ ಮಹಾರಾಜನೇ ಆಗಲೀ, ಧರ್ಮಗುರು ಪೋಪ್ ಆಗಲೀ, ಇದಕ್ಕೂ ಹೆಚ್ಚಿನ ವೈದ್ಯ ಪ್ರತಿಭೆಗಳು ತನ್ನ ಸುತ್ತಲೂ ಹೀಗೆ ಸಾಮೂಹಿಕವಾಗಿ ಉಸಿರು ಬಿಗಿ ಹಿಡಿದು ನಿಂತಿರುವ ಸಂದರ್ಭವನ್ನು ಕಲ್ಪಿಸಿಕೊಳ್ಳಲಾರ.

ಒಮ್ಮೊಮ್ಮೆ ಬೆವರುತ್ತಿದ್ದ ಆ ಶಸ್ತ್ರಚಿಕಿತ್ಸಕ, ತನ್ನ ಗ್ಲೋವ್ಸ್ ಹಾಕಿದ್ದ ಬೆರಳುಗಳಲ್ಲಿ ಅದೇನನ್ನೋ ಎತ್ತಿಹಿಡಿದ.

ಪಕ್ಕದಲ್ಲಿದ್ದ ನರ್ಸ್‌ಗೆ ಹೇಳಿದ, ''ಇದನ್ನು ತೊಳೆದು, ಇಲ್ಲಿರುವ ಮಹಾಶಯರಿಗೆ ತೋರಿಸು.''



ಹಿರಿಯ ವೈದ್ಯ ಟಿಕ್ ಮುಂದೆ ಹೆಜ್ಜೆಯಿಟ್ಟು ನರ್ಸ್‌ನ ಕೈಯಿಂದ ಆ ವಸ್ತುವನ್ನು ತೆಗೆದುಕೊಂಡರು.

''ಓ, ಮೀನಿನ ಮೂಳೆ !'' ಅವರು ಹೇಳಿದರು.

ಇಡೀ ಎಕ್ಸ್-ಕ್ಲಬ್ ಅದರ ಸುತ್ತಲೂ ವರ್ಣಿಸಲಸಾಧ್ಯವಾದ ಸಂಪತ್ತು ಅದು ಎನ್ನುವಂತೆ ಸುತ್ತುವರಿದು ನಿಂತಿತು. ಮೂರು ವಾರಗಳ ನಂತರ ರೋಗಿ ಸಂಪೂರ್ಣವಾಗಿ ಚೇತರಿಸಿಕೊಂಡ.

*('Miracle of the Fifteen Murderers' ಎಂಬ, Ben Hetchನ ಸಣ್ಣಕಥೆಯ ಅನುವಾದ)*

ಅನುವಾದ : **ಎಲ್. ವಿ ಶಾಂತಕುಮಾರಿ**
೧೫೪೮, ೪ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
ಪೂರ್ಣಪ್ರಜ್ಞ ಲೇಔಟ್, ಬೆಂಗಳೂರು - ೫೬೦ ೦೮೫

# ಹನುಮಂತನು ಕಪಿಯೆ?

ಆದಿಕವಿ ವಾಲ್ಮೀಕಿಗೆ ಈ ವಿಷಯದಲ್ಲಿ ಅನುಮಾನವೇ ಇರಲಿಲ್ಲ. ರಾಮಾಯಣದಲ್ಲಿ ಅವನು ಹನುಮಂತನನ್ನು 'ಕಪಿ', 'ಮಹಾನ್ ಕಪಿ' ಎಂದೇ ಕರೆದಿದ್ದಾನೆ. ಅವನನ್ನು ಅನೇಕ ಸಾರಿ 'ವಾನರ' ಎಂದೂ ಕರೆದಿರುವುದುಂಟು. ಆದರೆ ಅವನರ್ಥ 'ಕಪಿ' ಎಂದೇ. ವನವಾಸಿಗಳಾದ ಮಾನವರು ಎಂದಲ್ಲ. ವಾಲ್ಮೀಕಿಯು ಹನುಮಂತನಿಗೆ ಕಪಿ ಮೂತಿ ಮಾತ್ರ ವಲ್ಲ, ಅವನಿಗೆ ಬಾಲವನ್ನೂ ಕೊಟ್ಟಿದ್ದಾನೆ. ಈ ಬಾಲದ ಪ್ರತಾಪದಿಂದಲೇ ಹನುಮಂತ ಲಂಕೆಯನ್ನು ಸುಟ್ಟಿದ್ದು!

ಹನುಮಂತನು 'ಮಹಾನ್ ಕಪಿ'; ಆದರೆ ವಾಲ್ಮೀಕಿ ಮಹಾನ್ ಕವಿ! ಆದ್ದರಿಂದಲೇ ತನ್ನ ಕವಿತಾ ಸಾಮರ್ಥ್ಯ ದಿಂದ ಹನುಮಂತನನ್ನು ರಾಮನಷ್ಟೇ ಜನಪ್ರಿಯ ಮತ್ತು ಪೂಜಾರ್ಹ ವ್ಯಕ್ತಿಯನ್ನಾಗಿ ರೂಪಿಸಿದ್ದಾನೆ.

ರಾಮಾಯಣ ಒಂದು ಮಹಾಕಾವ್ಯ, ಕಾವ್ಯದಲ್ಲಿ ಕಪಿಯೂ ಒಂದು ಮಹಾನ್ ಪಾತ್ರ ವಹಿಸುವುದು ಆಶ್ಚರ್ಯವೇನಲ್ಲ. 'ಪಂಚತಂತ್ರ'ದಲ್ಲಿ ಪ್ರಾಣಿಗಳು ಮಾತನಾಡುತ್ತವೆ; ಮನುಷ್ಯರ ಹಾಗೆ ವರ್ತಿಸುತ್ತವೆ.



ನಮಗೆ ಇದು ಅಸಂಬದ್ಧ ಎನಿಸುವುದಿಲ್ಲ. ಇವುಗಳನ್ನು ರಚಿಸಿದ ಕವಿಗಳ ಪ್ರತಿಭೆ ಎಷ್ಟು ಪ್ರಕಾಶಮಾನ ವಾಗಿತ್ತೆಂದರೆ, ಓದುಗರು ಇದು ವಾಸ್ತವವೇ, ಸಾಧ್ಯವೇ ಎಂಬುದನ್ನು ಮರೆತು ಕಥೆಯಲ್ಲಿ ತಲ್ಲೀನರಾಗಿ ಬಿಡುತ್ತಾರೆ. ಆಗ ನಮ್ಮ ನಂಬಿಕೆಗಳನ್ನು ತಡೆಹಿಡಿದು, ಮರೆತೇಬಿಡುತ್ತೇವೆ. ಇದನ್ನೇ ವಿಮರ್ಶಕರು 'willing suspension of disbelief' ಎಂದು ಕರೆಯುವುದು. ಪ್ರತಿಭಾನ್ವಿತವಾದ ಅವಾಸ್ತವಿಕತೆಯ ಹಿಂದೆ 'ನಿಜವಾದ' ವಾಸ್ತವಿಕತೆ ಇರುತ್ತದೆ. ಕಾಲ್ಪನಿಕವಾದದ್ದು ನಿಜವಾಗೂ ಸೋಗುಹಾಕಿಕೊಂಡಿರುವ ಸತ್ಯ. Fiction is nothing but facts in disguise ಎಂದು ಹೇಳುವುದು ಇದನ್ನೇ.

ಆದರೂ ವಿಮರ್ಶಕರು ಮಹಾನ್ ಕಾವ್ಯಗಳನ್ನೂ ಸಹ ಒಂದು ವಾಸ್ತವಿಕ ಚಾರಿತ್ರಿಕ ದೃಷ್ಟಿಕೋನದಿಂದ ನೋಡುವುದನ್ನು ಬಿಟ್ಟಿಲ್ಲ. ಇದರ ಮೂಲ ಉದ್ದೇಶ ಕಾವ್ಯದಲ್ಲಿ ಚಾರಿತ್ರಿಕ ಅಂಶಗಳು ಎಷ್ಟರಮಟ್ಟಿಗೆ ಇವೆ ಎಂದು. ಪಾಶ್ಚಿಮಾತ್ಯ ವಿಮರ್ಶಕರಲ್ಲಿರುವಂತೆ ನಮ್ಮ ಪೂರ್ವಿಕರಲ್ಲಿ ಚಾರಿತ್ರಿಕ ದೃಷ್ಟಿ ಇರಲಿಲ್ಲ. ಆದರೆ ಪುರಾಣೇತಿಹಾಸಗಳಲ್ಲಿ ಅನೇಕಾನೇಕ ಚಾರಿತ್ರಿಕಾಂಶಗಳು ಅಡಗಿವೆ. ನಮ್ಮ ಪೂರ್ವಿಕರು 'ರಾಮಾಯಣ', 'ಮಹಾಭಾರತ'ಗಳನ್ನು ಇತಿಹಾಸವೆಂದೇ ಕರೆದರು. 'ಇತಿಹಾಸ' ಎಂದರೆ 'ಇತಿ-ಹ-ಆಸ'= 'ಹಾಗೆ ನಿಜವಾಗೂ ಇತ್ತು' ಎಂದರ್ಥ. ಆ ಎರಡು ಮಹಾಕೃತಿಗಳಲ್ಲಿ ಚಾರಿತ್ರಿಕಾಂಶ ಬಹುತೇಕವಾಗಿ ಅಡಗಿದ್ದರೂ ಅವು ಇತಿಹಾಸಗಳಲ್ಲ – ಮಹಾಕಾವ್ಯಗಳು ಎಂಬುದು ಈಗಿನ ವಿಮರ್ಶಕರ ಅಭಿಪ್ರಾಯ. ರಾಮಾಯಣದ ಮೂಲಕಥೆ ನಿಜವಾಗಿ ನಡೆದದ್ದಿರಬಹುದು. ಯುವರಾಜನಾಗಿ ಪಟ್ಟಾಭಿಷಿಕ್ತನಾಗಬೇಕಾಗಿದ್ದ ರಾಜನ ಹಿರಿಯ ಮಗ ತನ್ನ ತಂದೆ, ತನ್ನ ಮಲತಾಯಿ ಚಿಕ್ಕಮ್ಮನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲೆಂದು, ಆಕೆಯ ಅಪೇಕ್ಷೆಯಂತೆ ಹದಿನಾಲ್ಕು ವರ್ಷ ದೇಶಭ್ರಷ್ಟನಾಗಿ ಕಾಡಿಗೆ ಹೋದ; ಜೊತೆಯಲ್ಲೇ ಆತನ ಹೆಂಡತಿ, ತಮ್ಮ ಇಬ್ಬರೂ ಹೊರಟರು. ಅಲ್ಲಿ ತನ್ನ ಹೆಂಡತಿಯನ್ನು ಅಪಹರಿಸಿದ ರಾಕ್ಷಸನನ್ನು, ಕಾಡಿನಲ್ಲೇ ವಾಸಿಸುತ್ತಿದ್ದ ವಾನರರ ಸಹಾಯದಿಂದ ಸಂಹಾರಮಾಡಿ, ಪತ್ನೀ ಸಮೇತನಾಗಿ ತನ್ನ ರಾಜ್ಯಕ್ಕೆ ಹಿಂದಿರುಗಿ ಪಟ್ಟಾಭಿಷಿಕ್ತನಾದ. ಈ ಕಥೆ ನಡೆದ ಸಂಗತಿಯಾಗಿರಲು ಸಾಧ್ಯ. ಇದೊಂದು ಮಹಾತ್ಯಾಗ, ಸಾಹಸ, ಶೌರ್ಯದ ಕಥೆ. ಈ ಮೂಲಕಥೆಯನ್ನು ಆಗ, ಈಗಿನಂತೆಯೇ, ಲಾವಣಿಯಾಗಿ ಹಾಡಿಕೊಂಡು ಜನಗಳನ್ನು ರಮಿಸುವುದು ಪದ್ಧತಿಯಾಗಿತ್ತು. ಪುಸ್ತಕ, ರೇಡಿಯೋ, ಟೀವಿಗಳಿಲ್ಲದ ಆ ಕಾಲದಲ್ಲಿ ಈ ಲಾವಣಿಗಳು ಜನಪ್ರಿಯವಾಗಿದ್ದವು. ರಾಮಾಯಣದ ಮೂಲಕಥೆಯೂ ಹೀಗೆ ಒಂದು ಲಾವಣಿಯಾಗೇ ವಾಲ್ಮೀಕಿಯ ಕಿವಿಗೆ ಬಿದ್ದಿರಬೇಕು ಎಂಬುದು, ಉತ್ತರ ರಾಮಾಯಣದಲ್ಲಿ ಲವ, ಕುಶರು ರಾಮಾಯಣದ ಲಾವಣಿಯನ್ನು ಹಾಡಿಕೊಂಡು ರಾಮನ ಆಸ್ಥಾನಕ್ಕೆ ಬರುತ್ತಾರೆ ಎಂಬ ಸಂಗತಿಯಿಂದ ಊಹಿಸಬಹುದು. ಲಾವಣಿಯಲ್ಲಿ ಬರುವ 'ವಾನರ' ವಾಲ್ಮೀಕಿಯ ಕೈಯಲ್ಲಿ 'ಕಪಿ' ಆಗಿರುವ ಸಂಭವ ಇದೆ.

ಹನುಮಂತನು ಕಪಿ ಅಲ್ಲ, ರಾಮಲಕ್ಷ್ಮಣರಂತೆಯೇ ಆರ್ಯಮಾನವ ಎಂದು ಕೆಲವು ವಿದ್ವಾಂಸರು ವಾದಿಸಿದ್ದಾರೆ. ಈ ವಾದವನ್ನು ಪುಷ್ಟೀಕರಿಸುವ ಕೆಲವು ಸಂಗತಿಗಳೂ ಇವೆ.

ಮೊದಲಾಗಿ, ಹನುಮಂತನು ರಾಮಲಕ್ಷ್ಮಣರನ್ನು ಪ್ರಪ್ರಥಮವಾಗಿ ಭೇಟಿಯಾದ ಸಂದರ್ಭ. ಬ್ರಾಹ್ಮಣ ಬ್ರಹ್ಮಚಾರಿಯ ವೇಷ ಹಾಕಿಕೊಂಡು ಬಂದ ಹನುಮಂತನನ್ನು ಕಂಡ ಲಕ್ಷ್ಮಣನಿಗೆ ಸ್ವಲ್ಪ ಅನುಮಾನ. ಆದರೆ ತನ್ನ ಪರಿಚಯ ಮಾಡಿಕೊಂಡ ಹನುಮಂತನ ಮಾತುಗಳನ್ನು ಕೇಳಿ ರಾಮನಿಗೆ ಅತ್ಯಂತ ಸಂತೋಷವಾಯಿತು. ಲಕ್ಷ್ಮಣನನ್ನು ಕುರಿತು ರಾಮ ಆಗ ಹೇಳುತ್ತಾನೆ: ''ಋಗ್ವೇದವನ್ನು ಅಭ್ಯಾಸ ಮಾಡಿ ವಿದ್ವಾಂಸನಾಗಿರದಿದ್ದರೆ, ಸಾಮವೇದವನ್ನು ಪೂರ್ಣವಾಗಿ ಕಲಿಯದಿದ್ದರೆ, ಈ ರೀತಿ (ಸ್ಫುಟವಾಗಿ) ಮಾತನಾಡಲು ಶಕ್ಯವಾಗುತ್ತಿರಲಿಲ್ಲ. ನಿಜಕ್ಕೂ ವ್ಯಾಕರಣವನ್ನು ಪೂರ್ತಿಯಾಗಿ ಆತನು ಅಭ್ಯಾಸ ಮಾಡಿರಬೇಕು. ಅಷ್ಟೊಂದು ದೀರ್ಘವಾಗಿ ಆತ ಮಾತನಾಡಿದ್ದರೂ, ಒಂದಾದರೂ ಅಪಶಬ್ದ ಅವನ ಬಾಯಿಂದ ಹೊರಡಲಿಲ್ಲ'' ಹನುಮಂತನ ಇನ್ನೂ ಅನೇಕ ಲಕ್ಷಣಗಳನ್ನು ಗಮನಿಸಿ, ರಾಮನಿಗೆ ಇವನಲ್ಲಿ ನಂಬಿಕೆಯುಂಟಾಗಿ, ಸುಗ್ರೀವನ ಭೇಟಿಗೆ ಒಪ್ಪುತ್ತಾನೆ.

ಹೀಗೆ ಸಂಸ್ಕೃತ ಭಾಷೆಯಲ್ಲಿ ಸ್ಫುಟವಾಗಿ, ಸಕಲಶಾಸ್ತ್ರ ಪಾರಂಗತನಾದ ರಾಮನಿಗೆ ಸಂತೋಷವಾಗುವಂತೆ ಮಾತನಾಡಲು ಸೊಟ್ಟಮೂತಿಯ ಕಪಿಗೆ ಸಾಧ್ಯವಾಗುತ್ತಿತ್ತೆ?

ಎರಡನೆಯದಾಗಿ, ಈ ಕಪಿ ಸಂಕುಲದಲ್ಲಿನ ಹೆಣ್ಣು ಗಂಡುಗಳ ನಡುವಿನ ರೂಪಭೇದವನ್ನು ನೋಡಿ. ಎಲ್ಲ ಹೆಣ್ಣುಗಂಡುಗಳಲ್ಲಿ ರೂಪಭೇದ ಇದ್ದೇ ಇರುತ್ತದೆಯಷ್ಟೆ! ಆದರೆ ಈ ಕಪಿ ಎನಿಸಿಕೊಂಡ ಹೆಣ್ಣುಗಂಡುಗಳೋ, ಗಂಡುಗಳೆಲ್ಲ ಕಪಿರೂಪವಾಗಿದ್ದರೆ, ಹೆಣ್ಣುಗಳು ಮಾತ್ರ ಸುರಸುಂದರಿಯರು! ಆರ್ಯಸ್ತ್ರೀಯರ ರೂಪವುಳ್ಳವರು! ಇವರ ಜೊತೆಯಲ್ಲೇ ಇದ್ದ ಜಾಂಬವಂತನು (ಕರಡಿ ರೂಪದವನು) ಕೃಷ್ಣಾವತಾರದ ಕಾಲದಲ್ಲಿ ಕೃಷ್ಣನ ಜೊತೆ ಯುದ್ಧಮಾಡಿ, ಸೋತು ತನ್ನ ಮಗಳು ಜಾಂಬವತಿಯನ್ನು ಅವನಿಗೆ ಕೊಟ್ಟು ಲಗ್ನ ಮಾಡುತ್ತಾನೆ. ಜಾಂಬವತಿ ಕರಡಿ ರೂಪದವಳಾಗಿದ್ದರೆ ಕೃಷ್ಣ ಅವಳನ್ನು ಲಗ್ನವಾಗುತ್ತಿದ್ದನೆ? ಅವಳೂ ಆರ್ಯಸ್ತ್ರೀಯ ಹಾಗಿದ್ದು ಸುಂದರಿಯಾಗಿರಲೇ ಬೇಕು. ವಾಲ್ಮೀಕಿ ವಾಲಿಯ ಪತ್ನಿ ತಾರೆಯನ್ನು 'ತಾರಾಧಿಪನಿಭಾಮ್' ಅಂದರೆ ಚಂದ್ರನ ಹಾಗೆ (ಸುಂದರವಾದ) ಮುಖವುಳ್ಳವಳು ಎಂದಿರುವುದನ್ನು ಸ್ಮರಿಸಿಕೊಳ್ಳಬಹುದು.

**ಉತ್ತರ ಭಾರತದಲ್ಲಿ ಹನುಮಂತನನ್ನು 'ಬಜರಂಗ ಬಲೀ' ಎಂದು ಕರೆಯುತ್ತಾರೆಂಬುದನ್ನು ನಾವು ಸ್ಮರಿಸಿಕೊಳ್ಳಬಹುದು. ಇದರಿಂದ ಸ್ಪಷ್ಟವಾಗುವ ವಿಷಯ ಏನೆಂದರೆ, 'ವಾನರ' ಎಂಬುದು ಒಂದು ಆರ್ಯಕುಲದ ಹೆಸರೇ ಹೊರತು 'ಕಪಿ' ಎಂದಲ್ಲ. ಹೀಗೆ ಮೃಗ ಪಕ್ಷಿಗಳ ಹೆಸರನ್ನು ಕುಲನಾಮವಾಗಿಟ್ಟುಕೊಳ್ಳುವುದು ಸಂಪ್ರದಾಯವಾಗಿ ಬೇರೆ ಬೇರೆ ಜನಾಂಗಗಳಲ್ಲೂ ಇದೆ.**

**ಟಿ. ಎಸ್. ಸಂಜೀವರಾವ್**

ಇವೆಲ್ಲಕ್ಕಿಂತ ಹೆಚ್ಚಾಗಿ ಮೂರನೆಯ ಕಾರಣ ಇದೆ. 'ರಾಮಾಯಣಗಳ ರಾಮಾಯಣ-ಚಿಂತನ ಮಂಥನ' ಎಂಬ ಕೈದಾಳ ರಾಮಸ್ವಾಮಿ ಅವರ ವೈಚಾರಿಕ ಪುಸ್ತಕದಲ್ಲೂ, ಅವರ ಪುತ್ರ ಕೈ.ರಾ. ಗಣೇಶ ಅವರ 'ಶ್ರೀರಾಮಕಥೆಯ ಸಹಜ ಚಿತ್ರ' ಎಂಬ ಪುಸ್ತಕದಲ್ಲೂ ಸೀತಾರಾಮಲಕ್ಷ್ಮಣರು ತಮ್ಮ ವನವಾಸದ ಸಮಯದಲ್ಲಿ ಅಯೋಧ್ಯೆಯಿಂದ 'ಲಂಕೆ'ಗೆ ಕೇವಲ ೩೭೩ ಮೈಲಿ (೫೯೭ ಕಿ.ಮೀ.)ಗಳಷ್ಟು ನಡೆದು ಬಂದಿದ್ದಾರೆಂದು ಆಧಾರಪೂರ್ವಕವಾಗಿ ಸಮರ್ಥಿಸಿದ್ದಾರೆ. ಅಂದರೆ 'ಲಂಕೆ' ಈಗಿನ ಲಂಕೆ ಅಲ್ಲವೇ ಅಲ್ಲ, ಅದು ಮಧ್ಯಪ್ರದೇಶದಲ್ಲಿನ ಸಾತ್ಪುರ ಬೆಟ್ಟದ ಸಾಲಿಗೂ ವಿಂಧ್ಯ ಪರ್ವತಕ್ಕೂ ನಡುವೆ ನರ್ಮದಾ ನದಿಗೆ ಹತ್ತಿರವಾಗಿದ್ದ, ಇಂದಿನ ಇಂದ್ರಾಣಿ ಬೆಟ್ಟ (ರಾಮಾಯಣದ ತ್ರಿಕೂಟಾಚಲ)ದ ಮೇಲೆಯೇ ಲಂಕೆ ಇದ್ದುದು ಎಂದು ಹೇಳುತ್ತಾರೆ. ಹಾಗೆಯೇ ಮಾತಂಗವನದಿಂದ ಲಂಕೆಗೆ ಹೋಗುವ ಮಾರ್ಗದಲ್ಲಿ ಸಿಕ್ಕುವ ಇಂದಿನ ಸಿಂಗೋರ್‌ಘರ್ ಕೋಟೆ ಅಂದಿನ ಋಷ್ಯಮೂಕ. ನಂತರ ಸಿಕ್ಕುವ ಇಂದಿನ ಗೋರ್ಕಗುಹೆ ಆಗಿನ ಕಿಷ್ಕಿಂಧೆ ಎಂದು ಗಣೇಶ ಅವರು ಪ್ರತಿಪಾದಿಸಿದ್ದಾರೆ. ರಾಮಾಯಣದಲ್ಲಿ ಗೋದಾವರಿ ನದಿಯ ಪ್ರಸ್ತಾಪವಿದೆಯೇ ಹೊರತು ಅದರ ನಂತರ ಬರುವ ಭೀಮಾ, ತುಂಗಭದ್ರ, ಕಾವೇರಿ ಮೊದಲಾದ ನದಿಗಳ ಮಾತೇ ಇಲ್ಲ ವಾಲ್ಮೀಕಿಗೆ ಇವೆಲ್ಲಾ ಅಪರಿಚಿತ.

ಕಿಷ್ಕಿಂಧೆ (ಗೋರ್ಕಗುಹೆ)ಯಲ್ಲಿ ವಾಸಿಸುತ್ತಿದ್ದ ವಾಲಿ, ಸುಗ್ರೀವ, ಹನುಮಂತರು ಮತ್ತು ಅವರ ಪರಿವಾರದವರು 'ಕಪಿ'ಗಳಲ್ಲ, 'ವಾನರ' ಎಂಬ ಒಂದು ಮಾನವ ಕುಲ ಸಂಕುಲದವರು ಎಂದು ಪ್ರತಿಪಾದಿಸಲಾಗಿದೆ. ''ವಾನರರು ಕಪಿ ಜಾತಿಗೆ ಸೇರಿದವರಲ್ಲ; ಅವರಿಗೆ ಬಾಲಗಳೂ ಇರಲಿಲ್ಲ'' ಎಂದು ಗಣೇಶ ಅವರು ಪ್ರತಿಪಾದಿಸಿದ್ದಾರೆ. ಮಹಾರಾಷ್ಟ್ರ, ಉತ್ತರ ಕರ್ನಾಟಕದಲ್ಲಿ ಜನ ಈಗಲೂ ಪೇಟ ಧರಿಸಿ, ಆ ಪೇಟಕ್ಕೆ ಒಂದು ಉದ್ದವಾದ ಚುಂಗು ಬಿಟ್ಟಿರುತ್ತಾರೆ. ಹಾಗೆಯೇ ಹಿಂದಿನ ಕಾಲದ ವಾನರರು ನಡುವಿಗೆ ಕಟ್ಟುತ್ತಿದ್ದ ಕಚ್ಚೆಗೆ ಉದ್ದವಾದ ಚುಂಗು ಬಿಟ್ಟಿರುತ್ತಿದ್ದರೆ, ಅದನ್ನೇ ಬಾಲವೆಂದು ಕರೆದಿರುವ ಸಂಭವ ಇದೆ. ಡಾ|| ಎನ್. ಬಿ. ಪಾಟೀಲ್ ಎಂಬ ವಿದ್ವಾಂಸರೂ ಸಹ, ''ಹನುಮಾನ್ ಹಾಗೂ ಅವನ ಕುಲದವರು 'ವಾನರರು' (ಅಂದರೆ ಕಪಿಗಳು) ಅಲ್ಲವೇ ಅಲ್ಲ. ಅವರು ಎಲ್ಲ ವಿಧದಲ್ಲೂ ಮಾನವರೇ. ಆರ್ಯ ಸಂಸ್ಕೃತಿಯನ್ನೇ ಹೋಲುವ ಒಂದು ಸಂಸ್ಕೃತಿಯನ್ನು ಅವರು ಪ್ರತಿನಿಧಿಸುತ್ತಿದ್ದರು'' ಎಂದು ಹೇಳಿದ್ದಾರೆ. ರಾಮಸ್ವಾಮಿ ಶಾಸ್ತ್ರಿ ಎಂಬ ಇನ್ನೊಬ್ಬ ಪಂಡಿತರ ಪ್ರಕಾರ, ''ವಾನರರು ಆರ್ಯರೇ; ವಿಂಧ್ಯಪರ್ವತ ಶ್ರೇಣಿಯ ದಕ್ಷಿಣದಲ್ಲಿ ನೆಲೆಸಿದ್ದ ಆರ್ಯರು ಅಲ್ಲಿ ನೆಲೆಸಿದ ಮೇಲೆ ಉತ್ತರಭಾರತದ ಆರ್ಯರೊಡನೆ ಅವರ ಸಂಬಂಧ ಕಡಿದುಹೋಯಿತು.'' ಶರತ್ ಚಂದ್ರರಾವ್ ಎಂಬ ಮತ್ತೊಬ್ಬ ಪಂಡಿತರ ಪ್ರಕಾರ, ''ಉರಾವೋ ಹಾಗೂ ಮುಂಡ ಆದಿವಾಸಿಗಳಲ್ಲಿ ತಿಗ್ಗ, ಹಲ್ಮನ್, ಬಜರಂಗ್ ಮತ್ತು ಗದಿ ಎಂಬ ಕುಲನಾಮಗಳಿವೆ. ಈ ನಾಮಗಳೆಲ್ಲದರ ಅರ್ಥ 'ವಾನರರು' ಎಂದು. ಪಶ್ಚಿಮ ಬಂಗಾಳದ ಸಿಂಗ್‌ಭೂಮ್‌ನಲ್ಲಿ ವಾಸಿಸುವ 'ಭುಯಿ' ಕುಲದವರು ಹನುಮಂತನ ವಂಶದವರೆಂದು ಹೇಳಿಕೊಳ್ಳುತ್ತಾರೆ.'' ಉತ್ತರ ಭಾರತದಲ್ಲಿ ಹನುಮಂತನನ್ನು 'ಬಜರಂಗ ಬಲೀ' ಎಂದು ಕರೆಯುತ್ತಾರೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಇವುಗಳಿಂದ ಸ್ಪಷ್ಟವಾಗುವ ವಿಷಯ ಏನೆಂದರೆ, 'ವಾನರ' ಎಂಬುದು ಒಂದು ಆರ್ಯಕುಲದ ಹೆಸರೇ ಹೊರತು 'ಕಪಿ' ಎಂದಲ್ಲ. ಹೀಗೆ ಮೃಗ ಪಕ್ಷಿಗಳ ಹೆಸರನ್ನು ಕುಲನಾಮವಾಗಿಟ್ಟುಕೊಳ್ಳುವುದು ಸಂಪ್ರದಾಯವಾಗಿ ಬೇರೆ ಬೇರೆ ಜನಾಂಗಗಳಲ್ಲೂ ಇದೆ. ಇದನ್ನು ಮಾನವಶಾಸ್ತ್ರದ ಅಧ್ಯಯನದ ಸಂದರ್ಭದಲ್ಲಿ ಎಲ್ಲ ಸುಪ್ರಸಿದ್ಧ ಮಾನವ ಸಮಾಜ ವಿಶ್ಲೇಷಣ ಪಂಡಿತರೂ 'ಟೋಟೆಮ್' (totem) ಎಂದು ಕರೆದಿದ್ದಾರೆ. ಹೀಗೆ ಭಾರತದಲ್ಲಿ ವಾನರ, ಜಾಂಬವಂತ (ಕರಡಿ), ಜಟಾಯು, ಸಂಪಾತಿ, ಸುಪಾರ್ಶ್ವ (ಪಕ್ಷಿಗಳು) ಎಂಬ ಟೋಟೆಮ್ಮಿನ ಕುಲದ ಮಾನವರು ಇದ್ದರೆಂದು ಊಹಿಸಬೇಕಾಗಿದೆ. 'ನಾಗ' ಎಂಬ ಟೋಟೆಮ್‌ನ ಜನಸಂಕುಲ ಈಗಲೂ ಇದೆಯಷ್ಟೆ; ಇವರು ಪೂರ್ವದಲ್ಲಿ ಸುಂದರ ನಗರಗಳನ್ನು ಕಟ್ಟಿ ರಾಜ್ಯ ಆಳಿದವರು. ತಕ್ಷಶಿಲಾ, ನಾಗಪುರ, ನಾಗರಕೋಯಿಲ್, ನಾಗರಹವೇಲಿ, ನಾಗಾರ್ಜುನ ಎಂಬ ಹೆಸರುಗಳೇ ಇದಕ್ಕೆ ಸಾಕ್ಷಿ.

ಕಪಿಗಳು ನಾಲ್ಕು ಕಾಲುಗಳ ಪ್ರಾಣಿಗಳಷ್ಟೆ. ಮುಂದಿನ ಎರಡು ಕಾಲುಗಳನ್ನು ಅವು ಕೈಗಳಂತೇ ಉಪಯೋಗಿಸುತ್ತವೆ. ಆದರೆ ಹಿಂದಿನ ಎರಡು ಕಾಲುಗಳ ಮೇಲೆ ನೆಟ್ಟಗೆ ನಿಂತುಕೊಳ್ಳುವುದು, ಓಡಾಡುವುದು ಅವಕ್ಕೆ ಸಾಧ್ಯ, ಆದರೆ ಕಷ್ಟ. ಇಂಥಾ ಕಪಿಗಳು, ಎಷ್ಟೇ ಬಲಶಾಲಿಗಳಾಗಿರಲಿ, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತು ತಂದು ಸಮುದ್ರಕ್ಕೆ ಸೇತುವೆ ಕಟ್ಟಿದರೆಂಬುದನ್ನು ನಂಬಲು ನಮಗೆ ಇನ್ನೂ ಕಷ್ಟ! ವಾಲ್ಮೀಕಿ ಹೇಳಿರುವ ಈ ಮಾತಿಗೆ ಚಾರಿತ್ರಿಕ ಆಧಾರವಿದೆ ಎಂದರೆ, ಈ 'ಕಪಿ'ಗಳು 'ವಾನರ' ಎಂಬ ಮಾನವ ಕುಲದ ಜನ ಎಂದೇ ಹೇಳಬೇಕಾಗುತ್ತದೆ. ಇದು ಚಾರಿತ್ರಿಕವಲ್ಲ, ಕವಿ ಕಲ್ಪನಾಸೃಷ್ಟಿ ಎನ್ನುವುದಾದರೆ ಬೇರೆ ಮಾತಿಲ್ಲ. ವಾಲ್ಮೀಕಿಯ ಕಲ್ಪನೆ ಎಷ್ಟು ಅದ್ಭುತ, ಸುಂದರ ಎಂದರೆ ಅದು ಭಾರತೀಯರನ್ನು ಮಾತ್ರ ಅಲ್ಲ ಬೇರೆ ಬೇರೆ ದೇಶಗಳ ಜನಗಳ ಹೃದಯಗಳನ್ನೂ ಸೂರೆಗೊಂಡಿದೆ. ಅತ್ಯುತ್ತಮ ಕಾವ್ಯದಲ್ಲಿ ವಾಸ್ತವಕ್ಕಿಂತ ಅವಾಸ್ತವವೇ ಹೆಚ್ಚು ಪರಿಣಾಮಕಾರಿಯಾಗಿರುತ್ತೆ ಎಂಬುದಕ್ಕೆ ಈ ಹನುಮಾನ್ ಕಲ್ಪನೆಯೇ ಒಂದು ನಿದರ್ಶನ.

ಆದರೆ, ವಾಲ್ಮೀಕಿ ವಾನರರನ್ನು 'ಕಪಿ'ಗಳೆಂದೇ ವರ್ಣಿಸಿದನಲ್ಲ, ಇದು ಏಕೆ?

ವಾಲ್ಮೀಕಿ ಮಹಾಕವಿ. ಕವಿಗಳಿಗೆ ಸಹಜವಾದ ಉತ್ಪ್ರೇಕ್ಷೆ ಅಲಂಕಾರಗಳು ವಾಲ್ಮೀಕಿಯಲ್ಲಿ ಅಗಾಧವಾಗಿದ್ದವು. ಅದರ ಪರಿಣಾಮ – ಭಾರತೀಯರೆಲ್ಲರಿಗೂ ಆದರ್ಶಪ್ರಾಯವಾದ, ಹಳ್ಳಿ ಹಳ್ಳಿಯಲ್ಲೂ ದೇವಸ್ಥಾನಗಳಲ್ಲಿ ಪೂಜೆಗೊಂಡು ರಾರಾಜಿಸುತ್ತಿರುವ, ಅಪ್ರತಿಮ ಶಕ್ತಿ, ಸಾಹಸಗಳಿಗೆ ಹೆಸರಾದ ಹನುಮಂತ.

ಹನುಮಾನ್ ಎಂದು ಮಾರುತಿಗೆ ಹೆಸರು ಬಂದಿರುವುದೂ ಅವನು ಕಪಿಯಲ್ಲ, ರಾಮಲಕ್ಷ್ಮಣರ ಹಾಗೆ ಮಾನವ ಎಂದು ಒಂದು ವಾದವಿದೆ. ಹನುಮಾನ್ ಎಂದರೆ ಹನು ಉಳ್ಳವನು ಎಂದರ್ಥ. ಹನು ಎಂದರೆ ದವಡೆ. ಎಲ್ಲರಿಗೂ ದವಡೆ ಇರುತ್ತೆ! ಕೋತಿಗಳಿಗೂ ಇರುತ್ತೆ! ಆದರೆ ದವಡೆಯುಳ್ಳವನು ಎಂದರೆ ಸುಂದರವಾದ ಅಥವಾ ಎದ್ದುಕಾಣುವ ದವಡೆಯುಳ್ಳವನು ಎಂದು. ಹನುಮಂತನ ದವಡೆಗೆ ಪ್ರಾಮುಖ್ಯತೆ ಬಂದಿರುವುದು ಪೌರಾಣಿಕ ಕಥೆಯೊಂದರಿಂದ. ಹನುಮಂತನು ಎಳೆಯವನಿದ್ದಾಗ ಆಗ ತಾನೆ ಉದಯವಾಗುತ್ತಿದ್ದ ಸೂರ್ಯನನ್ನು ನೋಡಿ, ಇದೊಂದು ಕೆಂಪು ಹಣ್ಣು ಎಂದು ಭ್ರಮಿಸಿ ಅದರ ಕಡೆ ಹಾರಿದನಂತೆ. ಅದೇ ಕಾಲದಲ್ಲಿ ಸೂರ್ಯನನ್ನು ನುಂಗಲು ಬರುತ್ತಿದ್ದ ರಾಹುವನ್ನು ಕಂಡು, ಇದೂ ಒಂದು ಹಣ್ಣು ಎಂದುಕೊಂಡು ಅದರ ಕಡೆ ಹಾರಿದನಂತೆ. ರಾಹು ಹೆದರಿಕೊಂಡು ಬೇರೆ ಕಡೆ ತಪ್ಪಿಸಿಕೊಂಡ. ಆಗ ಬಾಲ ಹನುಮಂತನ ದೃಷ್ಟಿ ಇಂದ್ರನ ಐರಾವತದ ಕಡೆ ಹೊರಳಿತು. ಅದನ್ನೂ ಒಂದು ಹಣ್ಣು ಎಂದು ಭ್ರಮಿಸಿ ಆ ಕಡೆ ಹಾರುವಾಗ, ಇಂದ್ರನಿಗೆ ಕೋಪ ಬಂದು ತನ್ನ ವಜ್ರಾಯುಧದಿಂದ ಹನುಮಂತನ ಮುಖಕ್ಕೆ ಹೊಡೆದನಂತೆ. ಆ ಏಟಿಗೆ ಹನುಮಂತನ ಎಡ ದವಡೆ ಒಡೆದುಹೋಯಿತಂತೆ. ಆನಂತರ ಹನುಮಂತನಿಗೆ ಒಡೆದುಹೋದ ದವಡೆಯುಳ್ಳವನು – ಅಂದರೆ 'ಹನುಮಂತ' ಎಂದು ಹೆಸರಾಯಿತಂತೆ. ಡಾ|| ಎನ್. ಬಿ. ಪಾಟೀಲರು, ''ಇದು ಸರಿಯಲ್ಲ, ಹನುಮಂತನ ದವಡೆ ಒಡೆದು ಹೋಗಿದ್ದರೆ ಅವನನ್ನು 'ಹನುಹತ' ಅಥವಾ 'ಹನುಭಿನ್ನ' ಎಂದು ಕರೆಯಬೇಕಿತ್ತು! 'ಹನುಮಂತ' ಎಂದರೆ (ಭಾರಿ) ದವಡೆಯವನು ಎನ್ನುವುದೇ ಸರಿ,'' ಎಂದು ಹೇಳಿದ್ದಾರೆ. ಅಂದರೆ, ವಾನರರು ದೊಡ್ಡ ದವಡೆಯವರಾಗಿದ್ದರೆ?

ಅದೇನೆ ಇರಲಿ, ಹನುಮಂತನು ಭಾರತೀಯರಿಗೆಲ್ಲ ಆರಾಧ್ಯ ದೈವ. ಹಳ್ಳಿ ಹಳ್ಳಿಯಲ್ಲೂ ಅವನನ್ನು ಪೂಜಿಸುವ ದೇವಸ್ಥಾನಗಳಿವೆ. ಅವನು ಹಳ್ಳಿಯನ್ನು ಕಾಪಾಡುತ್ತಾನೆ, ಎಲ್ಲರ ಸೌಖ್ಯವನ್ನೂ ನೋಡಿಕೊಳ್ಳುತ್ತಾನೆ ಎಂಬ ನಂಬಿಕೆ ಜನಗಳಲ್ಲಿ ಗಾಢವಾಗಿ ಬೇರೂರಿದೆ.

ಹನುಮಂತನು ವಾನರ ಎಂಬ ಕಾಲಕ್ಕೆ ಸೇರಿದ ಮಾನವನೋ, ಕಪಿಯೋ? ಕವಿ ವಾಲ್ಮೀಕಿ ಸೃಷ್ಟಿಸಿರುವ ಹನುಮಂತನಂತೂ ಹಿಂದೂಗಳ ಆರಾಧ್ಯ ದೈವವಾಗಿ ಪರಿಣಮಿಸಿದ್ದಾನೆ. ಅಸಾಧಾರಣ ದೇಹಬಲ, ಧೈರ್ಯ, ಸಾಹಸ, ಸೇವಕನಲ್ಲಿರಬೇಕಾದ ಭಕ್ತಿ ಮತ್ತು ಇತರ ಅನುಪಮ ಗುಣಗಳಿಂದ ಜನಗಳ ಪ್ರೀತಿ, ಮೆಚ್ಚುಗೆಗಳನ್ನು ಗಳಿಸಿ ಅಮರನಾಗಿದ್ದಾನೆ.

**ಟಿ. ಎಸ್. ಸಂಜೀವರಾವ್**
ಇ.ಡಬ್ಲ್ಯು.ಎಸ್. ೪೩೪, ಕೆ. ಎಚ್. ಬಿ. ಕಾಲೋನಿ, ಎರಡನೇ ಹಂತ, ೪ನೇ ಮುಖ್ಯ ರಸ್ತೆ,
ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

## ವಾಸ್ತವ

ಅವಳ ಹರಯದ ಕಾಂತಿಯನ್ನು
ಅವಳ ಕೈಗನ್ನಡಿಯೇ ಪ್ರತಿನಿತ್ಯ ಹೀರಿ;
ಮುಪ್ಪಾಗಿಸಿದ್ದು
ಅವಳ ಅರಿವಿಗೆ ಬರಲೇ ಇಲ್ಲ....!

**ಮಂಜುಶೆಟ್ಟರ್**
ಈರಪ್ಪ ಎಂ. ಕಂಬಳಿ, ಡಿ-೧೫೪,
ಜೀವನಭೀಮಾನಗರ, ಬೆಂಗಳೂರು

# ಮರೆಯಲಾಗದ ಪ್ರವಾಸದ ನೆನಪು



ಪ್ರವಾಸದ ಸಂದರ್ಭದಲ್ಲಿ ಎದುರಾಗುವ ಸಮಸ್ಯೆಗಳು ಒಂದೆರಡಲ್ಲ, ಅನೇಕ ಕಡೆ ಶೌಚ ಕಾರ್ಯಕ್ಕೆ ಸರಿಯಾದ ವ್ಯವಸ್ಥೆ ಇರುವುದಿಲ್ಲ, ನಗರಗಳಿಂದ ಪ್ರವಾಸ ಹೋಗುವವರಿಗೆ, ಅದರಲ್ಲೂ ಸ್ತ್ರೀಯರಿಗೆ ಇದು ಮುಖ್ಯ ಸಮಸ್ಯೆಯಾಗುತ್ತದೆ. ನಿಮ್ಮ ಪ್ರವಾಸ ಒಂದು ಮರೆಯಲಾಗದ ಸವಿನೆನಪಾಗಿ ಉಳಿಯಬೇಕಲ್ಲ! ಲೇಖಕರು ಪ್ರವಾಸ ಮಾಡುತ್ತಲೇ ಇಂಥ ತೊಡಕುಗಳ ನಿವಾರಣೆಗೆ ಕೆಲವು ಸಲಹೆಗಳನ್ನು ನೀಡುತ್ತಾರೆ.

ಜಗದೀಶ್ ಬಳಗೆರೆ

**ಕಾ**ರಿನಿಂದಿಳಿದು ಟ್ರಿನ್ ಎಂದು ಕರೆಗಂಟೆಯನ್ನು ಒತ್ತಿದಾಗ ಅಮ್ಮ ಬಂದು ''ಅಬ್ಬ ಎಲ್ಲರೂ ಬಂದ್ರಾ'' ಎಂದು ಸ್ವಾಗತಿಸಿದಳು. ತಿಂಡಿ, ತೀರ್ಥ ಮುಗಿಸಿದಾಗ ''ಹೇಗಿತ್ತು ಪ್ರವಾಸ'' ಎಂದಾಗ, ತುಂಬಾ ಮಜವಾಗಿತ್ತು. ಹೊಸ ರೀತಿಯ ಅನುಭವ ಎಂದಾಗ ಅಮ್ಮನಿಗೆ ತಡೆಯಲಾಗಲಿಲ್ಲ. ನಮ್ಮಮ್ಮ ತುಂಬಾ ಸ್ನೇಹಮಯಿ. ಅಲ್ಲದೇ ನನಗೂ ಅಮ್ಮನೊಂದಿಗೆ ತುಂಬಾ ಸಲಿಗೆ. ಸರಿ; ನನ್ನ ಅನುಭವವನ್ನೆಲ್ಲಾ ಬಿಚ್ಚಿ ಹೇಳಿದೆ. ಮಕ್ಕಳೂ ಜೊತೆಗೂಡಿಸಿದರು. ನಿಮ್ಮೊಂದಿಗೂ ಹಂಚಿಕೊಳ್ಳುವ ತವಕ. ನೀವೂ ಕೇಳಿಬಿಡಿ.

ನಾವು ಆರು ಜನ (ಮೂವರು ದಂಪತಿಗಳು), ಆರು ಮಕ್ಕಳು ಒಂದು ವ್ಯಾನ್‌ನಲ್ಲಿ ಜೋಗ ಜಲಪಾತಕ್ಕೆ ಪ್ರವಾಸ ಹೊರಟೆವು. ಜಲಪಾತದಲ್ಲಿ ಭಾರಿ ನೀರಿದ್ದುದರಿಂದ ಜನವೋ ಜನ. ನಮಗಂತೂ ಇಳಿದುಕೊಳ್ಳಲು ಯಾವ ಸೌಕರ್ಯವೂ ಸಿಗಲಿಲ್ಲ. ಜನಜಂಗುಳಿ ಬೇರೆ, ಉಳಿಯಲು ಜಾಗವಿಲ್ಲ. ಮೈಯೆಲ್ಲಾ ಪರಚಿಕೊಳ್ಳುವಂತಾಗಿ ಜಲಪಾತದ ಸವಿಯನ್ನು ಸವಿಯಲಾಗಲಿಲ್ಲ. ಮನಸ್ಸಿಗೆ ಯೋಚನೆ ಬಂತೆಂದರೆ ಯಾವುದೂ ಹಿತವಿರುವುದಿಲ್ಲ ಅಲ್ಲವೇ, ನಮಗೂ ಹಾಗೇ ಆಯಿತು. ಏನೋ ಒಂದು ರೀತಿಯ ಹಿಂಸೆ, ಮುಜುಗರ. ಆದರೂ ಇಷ್ಟು ದೂರ ಬಂದು ಹಾಗೇ ಹೋಗಲು ಯಾರಿಗೂ ಇಷ್ಟವಿರಲಿಲ್ಲ. ಹೇಗಾದರೂ ಪ್ರವಾಸದ ಸವಿಯನ್ನು ಸವಿಯಲೇಬೇಕೆಂದು ಮನಸ್ಸು ಮಾಡಿಯಾಗಿತ್ತು. ನಮ್ಮದೇ ಗಾಡಿ ಇದ್ದುದರಿಂದ ಎಲ್ಲರಲ್ಲೂ ಒಂದು ಮೊಂಡು ಧೈರ್ಯ ಬಂದಿತ್ತು. ಊಟಕ್ಕೆ ಯೋಚನೆ ಇರಲಿಲ್ಲ. ಮನೆಯಿಂದ ತಂದ ತಿಂಡಿಗಳೂ ಸಾಕಷ್ಟಿತ್ತು. ಹೋಟೆಲ್ಗಳೂ ದಂಡಿಯಾಗಿದ್ದವು. ಮಲಗಲು ಏನಿಲ್ಲದಿದ್ದರೂ ಗಾಡಿಯಿತ್ತು, ಇಲ್ಲವಾದರೆ ರಾತ್ರಿ ಪ್ರಯಾಣ. ನಮಗಿದ್ದ ದೊಡ್ಡ ತೊಂದರೆಯೆಂದರೆ ಶೌಚಾಲಯದ್ದು, ಅದರಲ್ಲೂ ಹೆಂಗಸರಿಗೆ. ಇದೊಂದು ತೊಂದರೆ ನಿವಾರಣೆಯಾದರೆ ನಮಗೆ ಬೇರಾವ ಯೋಚನೆಯೂ ಇರಲಿಲ್ಲ. ಇದಕ್ಕೆ ತಕ್ಕಂತೆ ನಮಗೆ ಯಾವ ಹೋಟೆಲ್‌ನಲ್ಲೂ ಕೊಠಡಿಗಳೇ ಸಿಗಲಿಲ್ಲ.

ಹೆಂಗಸರು, ಮಕ್ಕಳನ್ನು ಜಲಪಾತದ ಸೊಬಗನ್ನು ಸವಿಯಲು ಬಿಟ್ಟು ನಾನು, ಶಂಕರ, ಹೇಮಂತ ಮೂರೂ ಜನ ಜಲಪಾತದ ವೈಭವವನ್ನು ಸವಿಯುತ್ತಲೇ ನಮ್ಮ ಅಂದಿನ ಕಾರ್ಯಕ್ರಮವನ್ನು ರೂಪಿಸಲು ಪ್ರಾರಂಭಿಸಿದೆವು. ಶೌಚಾಲಯದ್ದೇ ಮುಖ್ಯ ತೊಂದರೆಯಾಗಿದ್ದುದರಿಂದ ನಮ್ಮ ಯೋಚನಾಲಹರಿ ಅದರ ಬಗ್ಗೆಯೇ ಇತ್ತು. ಪ್ರವಾಸಿ ಬಂಗಲೆಯ ಶೌಚಾಲಯ ನಮಗೆ ಹಿಡಿಸಲಿಲ್ಲ, ಬೇರೆ ಹೋಟೆಲ್‌ಗಳಲ್ಲಿ ಅಷ್ಟೊಂದು ಜನರ ನಡುವೆ ಕೇವಲ ಶೌಚಾಲಯಕ್ಕೆ ಬೇಡುವುದು ಯಾರಿಗೂ ಬೇಕಿರಲಿಲ್ಲ. ಇನ್ನು ಸಾಮಾನ್ಯ ಶೌಚಾಲಯಗಳ ಸ್ಥಿತಿಯಂತೂ ದೇವರಿಗೇ ಪ್ರೀತಿ. ಯಾವುದಾದರೂ ಮನೆಗೆ ಹೋಗಿ ಕೇಳಿಕೊಂಡರೆ ಹೇಗೆ ಎಂಬ ಯೋಚನೆ ಬಂತು. ಸ್ವಲ್ಪ ಕಸಿವಿಸಿಯೆನ್ನಿಸಿದರೂ ನಮ್ಮ ಹೆಂಗಸರು ಮಕ್ಕಳ ಧಾರ್ಷ್ಟಿಕ ಬುದ್ಧಿಯ ಮೇಲೆ ನಮಗೆ ಅಪಾರ ನಂಬಿಕೆ ಇತ್ತು. ಒಂದೆರಡು ಮನೆಯನ್ನು ನೋಡುವುದು, ಸರಿಹೋಗದಿದ್ದರೆ ಪ್ರಯಾಣಮಾಡುತ್ತಲೇ ಹೇಗೋ ಹೊಂದಿಕೊಂಡರೆ ಆಯಿತು ಎಂದು ತೀರ್ಮಾನಿಸಿದೆವು. ಹೆಂಗಸರಿಗೆ ನಮ್ಮ ಯೋಚನೆಯನ್ನು ತಿಳಿಸಿದಾಗ ಮೊದಲು ಆ, ಊ ಎಂದರೂ ನಂತರ ಸಂದರ್ಭವರಿತು ಕಮಕ್‌ಕಿಮಕನ್ನದೇ ತೆಪ್ಪಗೆ ಒಪ್ಪಿದರು.

ಪ್ರವಾಸವೆಂದರೆ ಎಷ್ಟೆಲ್ಲ ಸೌಕರ್ಯವಿರಬೇಕು, ಏನೆಲ್ಲಾ ಅನುಕೂಲಗಳನ್ನು ಕಲ್ಪಿಸಿಕೊಡುತ್ತಾರೆ, ಇಲ್ಲಿ ಹೇಗಿದೆ ಎಂದು ಯೋಚಿಸತೊಡಗಿದೆ. ಕೇವಲ ಒಂದು ಶೌಚಾಲಯ ವ್ಯವಸ್ಥೆಗೆ ಏನೆಲ್ಲಾ ಪರದಾಡಬೇಕಾಗಿದೆ ಎಂದು ಯೋಚಿಸಿದೆ. ಒಂದು ಉತ್ತಮ ಶೌಚಾಲಯ ವಿದ್ದಿದ್ದರೆ ? ಪ್ರವಾಸಿಗರಿಗಾಗಿಯಾದರೂ ಯಾರಾದರೂ ಏನಾದರೂ ಮಾಡಲೇಬೇಕು ಎಂಬ ಆಲೋಚನೆ ಬಂತು. ಈಗ ಅದಕ್ಕೆಲ್ಲಾ ಸಮಯವಿರಲಿಲ್ಲ. ಮುಂದಿನದನ್ನು ಯೋಚಿಸಬೇಕಿತ್ತು. ಸರಿ, ಎಲ್ಲರೂ ಗಾಡಿಯಲ್ಲೇ ಕುಳಿತು ಮನೆಗಳ ಸರ್ವೆ ಮಾಡಲು ಹೊರಟೆವು. ಹೊರಗಿನಿಂದಲೇ ಪರವಾಗಿಲ್ಲ ಎನ್ನಿಸಿದ್ದನ್ನು ಗುರುತು ಮಾಡಿಕೊಂಡು ನಂತರ ಒಂದೊಂದಾಗಿ ವಿಚಾರಿಸುವುದು ಎಂದು ತೀರ್ಮಾನಿಸಲಾಯಿತು.

'ಪ್ರಥಮ ಚುಂಬನಂ ದಂತ ಭಗ್ನಃ' ಎಂಬಂತೆ ಮೊದಲ ಮನೆಯಲ್ಲಿಯೇ ನಮ್ಮ ಉಪಾಯವೆಲ್ಲಾ ತಲೆಕೆಳಗಾಯಿತು. ಆದರೂ ಛಲ ಬಿಡದ ತ್ರಿವಿಕ್ರಮನಂತೆ ಮುಂದಿನ ಮನೆಯತ್ತ ಹೊರಟೆವು. ಇಲ್ಲಿ ಸ್ವಾಗತ ದೊರೆತರೂ ನಮಗೆ ಯಾವ ಅನುಕೂಲವೂ ಆಗಲಿಲ್ಲ. ಆದರೂ ನಮ್ಮ ಆಶಾವಾದ ನಮ್ಮನ್ನು ಮುಂದಿನ ಮನೆಗೆ ತಂದು ಬಿಟ್ಟಿತು. ಇಲ್ಲಿ ನಮ್ಮ ಪ್ರಯತ್ನ ಫಲಿಸಿತು. ಹಿರಿಯ ದಂಪತಿ, ಅವರ ಮಗ ಸೊಸೆ, ಇಬ್ಬರು ಮೊಮ್ಮಕ್ಕಳು ಆ ಮನೆಯಲ್ಲಿದ್ದರು. ನಮ್ಮ ಪರಿವಾರವನ್ನು ನೋಡಿಯೇ ಅವರಿಗೆ ನಂಬಿಕೆ ಬಂದು ನಮ್ಮ ಕಷ್ಟದ ಅರಿವಾಗಿರಬೇಕು. ಆದರದ ಸ್ವಾಗತ ನೀಡಿ ತಮ್ಮಲ್ಲಿಯೇ ಇದ್ದು ಹೋಗಿ ಎಂದು ವಿಶ್ವಾಸದಿಂದ ಹೇಳಿದಾಗ ನಮ್ಮ ಹೃದಯ ತುಂಬಿಬಂತು.

ನಮ್ಮಲ್ಲಿಯೇ ಹಾಸಿಗೆ, ಹೊದ್ದಿಕೆಗಳಿವೆ. ಒಂದು ದಿನ ಮನೆಯಿಂದಾಚೆ ಗಾಡಿಯಲ್ಲೇ ಕಳೆಯಬೇಕು ಎಂಬ ಆಸೆಯಿಂದಲೇ ಇಲ್ಲಿಗೆ ಬಂದಿರುವುದಾಗಿ ಒಂದು ಸಣ್ಣ ಸುಳ್ಳನ್ನು ಸೇರಿಸಿ ಅವರನ್ನು ನಂಬಿಸಿದೆವು. ನಾವು ೧೨ ಮಂದಿಗೆ ಅವರ ಮನೆ ಖಂಡಿತಾ ಇಕ್ಕಟ್ಟಾಗಿ

ರುತ್ತಿತ್ತು. ಆದರೆ ಮನೆ ಮಾತ್ರ ಸುಂದರವಾಗಿದ್ದು ಚಿತ್ರದಲ್ಲಿ ಬರೆದಂತಿತ್ತು. ಚಿಕ್ಕ ಚೊಕ್ಕ ಮನೆ, ಮುಂದೆ ವಿಶಾಲವಾದ ಜಾಗ, ದೂರದಲ್ಲಿ ಕಾಡು, ಸುತ್ತಲೂ ಹೊಲಗದ್ದೆಗಳು, ಜುಳುಜುಳು ಹರಿಯುತ್ತಿದ್ದ ತೊರೆ, ಮಲೆನಾಡಿನ ಈ ನಿತ್ಯನೂತನ ದೃಶ್ಯ ನಮಗೆ ಉಲ್ಲಾಸ ನೀಡಿತು. ಈ ದೃಶ್ಯ, ಮನೆಯಿಂದಾಚೆ ಮಲಗುವ ಅನುಭವ ಮಕ್ಕಳಿಗೆ (ನಮಗೂ ಸಹ) ಮುದ ನೀಡಿದವು. ಈಗಲೇ ರಾತ್ರಿಯಾಗಬಾರದೇ ಎಂದು ಮಕ್ಕಳು ಜಪಿಸಿದವು. ಆ ಮನೆಗೆ ಕಾಡಿನಮನೆಯೆಂದು ನಾಮಕರಣವೂ ಆಗಿಹೋಯಿತು. ಆಚೆ ಮಲಗಿದರೆ ಭಯವಿಲ್ಲವಲ್ಲ ಎಂದು ನನ್ನ ಹೆಂಡತಿ ಆ ಮನೆಯವರೊಂದಿಗೆ ತನ್ನ ಒಳಗಿನ ಭಯವನ್ನು ಕಕ್ಕಿಬಿಟ್ಟಳು. ಇಲ್ಲೆಲ್ಲಾ ಮಳೆಯದ್ದೊಂದೇ ಭಯ, ಈಗ ಬೆಳದಿಂಗಳ ಕಾಲ, ಆರಾಮವಾಗಿರಬಹುದು ಎಂದು ಧೈರ್ಯ ತುಂಬಿದ ಆ ಮನೆಯವರು, ಬೇಕಿದ್ದರೆ ಹೆಂಗಸರು ಒಳಗೆ ಮಲಗಬಹುದು ಎಂದರು. ತಕ್ಷಣವೇ ಒಳಗೆ ಮಲಗುತ್ತೇವೆ ಎಂದು ಒಮ್ಮೆಗೇ ಒಪ್ಪದೇ ಹೆಂಗಸರು ನಮ್ಮ ಮಾನ ಕಾಪಾಡಿದರು.

ಈ ವೇಳೆಗೆ ಆ ಮನೆಯಾಕೆ ಕಾಫಿ ಹಿಡಿದು ಪ್ರತ್ಯಕ್ಷರಾದರು. ನಮಗೆ ಸಂಕೋಚ. ತಕ್ಷಣ ನಮ್ಮೊಂದಿಗೆ ತಂದಿದ್ದ ಕುರುಕುಗಳನ್ನು ಕಾಫಿಯೊಂದಿಗೆ ಸೇರಿಸಿ ಎಲ್ಲರೂ ಸವಿದೆವು. ಊಟಕ್ಕೆ ನಾವು ನಿಲ್ಲುವುದಿಲ್ಲವೆಂದರೂ ಬಂದವರನ್ನು ಹಾಗೆ ನಾವು ಬಿಡಲಾರೆವು ಎಂದು ನಮ್ಮನ್ನು ಕಟ್ಟಿಹಾಕಿದರು. ಸರಿ ಇಂದು ನಿಮ್ಮ ಮಲೆನಾಡಿನ ಭೋಜನದೊಂದಿಗೆ ಬೆಂಗಳೂರಿನ ರುಚಿಯೂ ಸೇರಿಸುತ್ತೇವೆ ಎಂದು ತಿಳಿಸಿ ನಾವು ಜಲಪಾತದ ಬಳಿ ಒಂದು ಸುತ್ತು ಹೋಗಿಬರುವುದಾಗಿ ತಿಳಿಸಿದೆವು. ಆ ಮಕ್ಕಳೂ ಬರಲಿ, ನಮಗೆ ಅವರು ಎಲ್ಲವನ್ನೂ ತೋರಿಸುತ್ತಾರೆ ಎಂದು ನಮ್ಮ ಹುಡುಗರು ದುಂಬಾಲುಬಿದ್ದರು. ನಮ್ಮ ಈ ಗಡಿಬಿಡಿಯಲ್ಲಿ ಮಕ್ಕಳು ಆಗಲೇ ಒಂದಾಗಿಬಿಟ್ಟಿದ್ದರು. ಜಲಪಾತದ ಬಳಿ ಬಂದಾಗ ಆ ಮಕ್ಕಳೇ ನಮಗೆ ಮಾರ್ಗದರ್ಶಿಗಳು. ಶೌಚಾಲಯದ ತೊಂದರೆ ನಿವಾರಣೆಯಾಗಿದ್ದುದರಿಂದ ಈಗ ಜಲಪಾತದ ವೈಭವ ನಮಗೆ ಅತ್ಯಂತ ಸುಂದರವಾಗಿ ಕಾಣುತ್ತಿತ್ತು. ಮನೆಯಿಂದಾಚೆ ಕಳೆಯುವ ಮಧುರ ನೆನಪು ಆ ವೈಭವವನ್ನು ಇಮ್ಮಡಿಸಿತ್ತು. ಆ ಮಕ್ಕಳು ಜಲಪಾತದ ಕೆಳಗಿನ ಗುಂಡಿಗೂ ನಮ್ಮನ್ನು ಇಳಿಸಿಬಿಟ್ಟರು. ಮಕ್ಕಳೇನೋ ಪಾದರಸದಂತೆ ಇಳಿದು ಬಂಡೆಗಳ ನಡುವೆ ಕುಣಿದಾಡಿ ವಾಪಸ್ ಹತ್ತಿದರು. ನಮಗೆ ವಾಪಸ್ ಬರುವಷ್ಟರಲ್ಲಿ ಸಾಕುಸಾಕಾಗಿತ್ತು. ಅದೃಷ್ಟಕ್ಕೆ ನಮ್ಮಲ್ಲಿ ಗ್ಲೂಕೋಸ್ ಇತ್ತು. ಅದಂತೂ ಪೂರ್ತಿ ಖರ್ಚಾಯಿತು. ಆ ಕಾಡುಮನೆಯ ಮಕ್ಕಳಿಗೆ ನಗರವಾಸಿಗಳ ಪಾಡು ಅರ್ಥವಾಗಲೇ ಇಲ್ಲ

ಕತ್ತಲಾಗುತ್ತಾ ಬಂದಂತೆ, ಜನಸಂಚಾರ ಕಡಿಮೆಯಾದಂತೆ, ಜಲಪಾತದ ಶಬ್ದ, ಕಪ್ಪನೆಯ ಕಾಡು, ಮಿಣಿಗುಟ್ಟುವ ದೀಪ ಸ್ವಲ್ಪ ನಡುಕ ತಂದಿತಾದರೂ ಕಾಡುಮನೆಯ ಮಕ್ಕಳ ಚಟುವಟಿಕೆ ನಮಗೆ ಧೈರ್ಯ ನೀಡಿತು. ಅಂತೂ ನಮ್ಮ ಹೊಸ ಅನುಭವಕ್ಕೆ ಕಾತುರರಾಗಿ ಕಾಡಿನ ಮನೆಗೆ ಹೊರಟೆವು. ಮಕ್ಕಳ ಹಾಡು, ಕೇಕೆ, ನಗು ನಮಗೂ ಉಲ್ಲಾಸ ನೀಡಿತು.

ನಾವೆಲ್ಲರೂ ಕಾತುರರಾಗಿ ಕಾಯುತ್ತಾ ಕುಳಿತಿದ್ದ ರಾತ್ರಿ ಬಂದೇಬಿಟ್ಟಿತು. ಬೆಳದಿಂಗಳೂಟಕ್ಕೆ ಸಕಲ ಸಿದ್ಧತೆಗಳನ್ನು ಹೆಂಗಸರು ಮಾಡಿದರು. ಆಶ್ಚರ್ಯವೆಂದರೆ ಮಕ್ಕಳೂ ತಾವಾಗಿಯೇ ಅದರಲ್ಲಿ ಪಾಲ್ಗೊಂಡಿದ್ದು. ಸಂದರ್ಭಗಳು ಹೇಗೆ ಮನುಷ್ಯನನ್ನು ಬದಲಾಯಿಸುತ್ತವೆ ಎಂದು ನಮಗೆ ಆಶ್ಚರ್ಯ. ಊಟದ ರುಚಿಯನ್ನಂತೂ ವರ್ಣಿಸುವುದೇ ಬೇಡ. ಅಷ್ಟೊಂದು ಅಚ್ಚು ಕಟ್ಟಾಗಿತ್ತು. ನಮಗೆ ಎಲ್ಲವೂ ಹೊಸ ರುಚಿಯೇ ಆಗಿತ್ತು. ನಮ್ಮ ಬೆಂಗಳೂರಿನ ಖಾದ್ಯಗಳು ಆ ಮನೆಯವರಿಗೆ ಹೊಸರುಚಿ ಆಗಿ, ಒಟ್ಟಿನಲ್ಲಿ ಎಲ್ಲರಿಗೂ ಸಂತಸ ನೀಡಿತ್ತು. ಊಟ



ಕಲ್ಲುಗಳ ನಡುವೆ ಹರಿಯುವ ನೀರಿನ ಜುಳುಜುಳು ನಿನಾದ ಕಿವಿಗೆ ಇಂಪು ಮನಸ್ಸಿಗೆ ತಂಪು
ವಶಿಷ್ಠಾಶ್ರಮ, ಗೌಹಾತಿ

ಮಾಡಲು ತಕರಾರು ಮಾಡುವ ನಮ್ಮ ಮಕ್ಕಳಂತೂ ನಗುನಗುತ್ತಾ ಭರ್ಜರಿಯಾಗಿ ಎಲ್ಲವನ್ನೂ ಮೇಯ್ದಿದ್ದರು.

ಇನ್ನು ಮಲಗುವ ಸಿದ್ಧತೆಗಳು ಪ್ರಾರಂಭವಾದವು. ಗಾಡಿಯಲ್ಲೇ ಜಮಖಾನ ಹಾಸಿ ಸೀಟಿನ ಮೇಲೆ, ಕೆಳಗೆ ಮಲಗಲು ಸಿದ್ಧರಾದೆವು. ಚಂದ್ರನ ಬೆಳಕಿನಲ್ಲೂ ನಕ್ಷತ್ರಗಳ ರಾಶಿಯನ್ನು ಕಂಡ ಕಿರಣ್ ಆಶ್ಚರ್ಯಚಕಿತನಾಗಿದ್ದ. ಅಯ್ಯೋ ಒಳ್ಳೇ ತಾರಾಲಯದಂತಿದೆ ಎಂದು ಉದ್ಗರಿಸಿದ. ತಾನೂ ನಕ್ಷತ್ರ, ಚಂದ್ರನನ್ನು ನೋಡುತ್ತಾ ಇಲ್ಲೇ ಮಲಗಬೇಕು ಎಂದು ಹಠಹಿಡಿದ. ಮಲಗಿಕೊಂಡು ಆಕಾಶಬಿಟ್ಟು ಸ್ವಲ್ಪ ಸುತ್ತ ನೋಡು ಎಂದಾಗ ದೆವ್ವಗಳಂತೆ ಕಂಡ ಗಿಡಮರಗಳನ್ನು ಕಂಡು ಹೆದರಿಹೋದ. ಅಷ್ಟರಲ್ಲಿಯೇ ಮಕ್ಕಳಲ್ಲಿ ತಾರಾಲಯ, ಮಿಡಿಮಾವು, ಮಿಣುಕುಹುಳ, ಶಬ್ದಮಾಲಿನ್ಯ ಮೊದಲಾದುವುಗಳ ಬಗ್ಗೆ ವಿಚಾರ ವಿನಿಮಯ ನಡೆದಾಗಿತ್ತು. ಪದ ಅಂತ್ಯಾಕ್ಷರಿ, ಇಸ್ಪೀಟುಗಳಿಗೆ ಚೌಕಭಾರ, ಹಳಗುಳಿಮನೆ ವಿನಿಮಯ ವಾಗಿತ್ತು. ಮಿಣುಕು ಹುಳಗಳಂತೂ ನಮ್ಮ ಮಕ್ಕಳನ್ನು ಮೋಡಿ ಮಾಡಿಬಿಟ್ಟಿದ್ದವು. ಅವರಿಗೆ ಜೋಗದ ಜಲಪಾತಕ್ಕಿಂತಾ ಈ ಕಾಡುಮನೆಯೇ ಹೆಚ್ಚು ಮುದ ನೀಡಿತ್ತು. ಜಲಪಾತದ ಗುಂಡಿಗೆ ಇಳಿದು ಹತ್ತಿದ್ದು, ಸುತ್ತಿದ್ದು, ಆಹ್ಲಾದಕರ ವಾತಾವರಣ, ರಾತ್ರಿಯ ನೀರವತೆ, ಕೀಟಗಳ ಶಬ್ದ, ದೂರದಲ್ಲಿ ಜಲಪಾತದ ಸದ್ದು, ಮನೆಯಾಚೆ ಮಲಗಿದ್ದು ಇತ್ಯಾದಿಗಳಿಂದ ನಿದ್ದೆಗೆ ಕೊಂಚ ಭಂಗ ಬಂದರೂ ಅದ್ಯಾವುದೋ ಮಾಯದಲ್ಲಿ ನಿದ್ರಾದೇವಿ ನಮ್ಮನ್ನು ಆವರಿಸಿದ್ದಳು. ಒಂದು ದಿನ ಛಳಿ, ಒಂದು ದಿನ ಸೆಖೆ, ಒಂದು ದಿನ ಮಳೆ ಎಂದು ಪರದಾಡುವ ಬೆಂಗಳೂರು ನಗರವಾಸಿಗಳಾದ ನಮಗೆ ಅಂದು ಸ್ವರ್ಗವೇ ಧರೆಗಿಳಿದು ಬಂದಂತಿತ್ತು. ಮಕ್ಕಳಂಥೂ ಇಲ್ಲೇ ಠಿಕಾಣಿ ಹೂಡುವ ಸನ್ನಾಹ ನಡೆಸಿದ್ದರು. ಮರುದಿನ ಬೆಳಿಗ್ಗೆ ಮತ್ತೆ ಪ್ರಕೃತಿಯು ತನ್ನ ರಮಣೀಯ ಕಾವ್ಯವನ್ನು ತೆರೆದಿಟ್ಟಿದ್ದಳು. ರಾತ್ರಿ ದೆವ್ವಗಳಂತೆ ಕಂಡ ಗಿಡಮರಗಳು ಈಗ ಅಯಸ್ಕಾಂತದಂತೆ ನಮ್ಮನ್ನು ಸೆಳೆಹಿಡಿದವು.

ಬೆಳಿಗ್ಗೆ ನಮಗೆ ಮಲೆನಾಡಿನ ಶೌಚಾಲಯದ ದರ್ಶನವಾಯಿತು. ಗಂಡಸರಿಗೆ ದೂರದಲ್ಲಿ ತೋಟದ ಮಧ್ಯದಲ್ಲಿರುವ ಶೌಚಾಲಯದ ವ್ಯವಸ್ಥೆಯಾಗಿತ್ತು. ಕೊಟ್ಟಿಗೆಯಲ್ಲೇ ಸ್ನಾನದ ಮನೆ ಇದ್ದುದರಿಂದ ಹಸುಗಳ ಎದುರಿಗೇ ಸ್ನಾನಮಾಡಿ ಎಲ್ಲರೂ ನಾಚಿ ನೀರಾದರು. ಅಲ್ಲಿಯ ನೀರು ಕಾಯಿಸುವ ವ್ಯವಸ್ಥೆ, ಕೊಟ್ಟಿಗೆ, ದೂರದಲ್ಲಿರುವ ಸ್ನಾನದ ಮನೆ, ಮಣ್ಣಿನ ಗೋಡೆ, ಗಿಡಕ್ಕೆ ಹರಿಯುವ ಬಚ್ಚಲನೀರು ಇತ್ಯಾದಿ ಮಕ್ಕಳನ್ನು ಕಕ್ಕಾಬಿಕ್ಕಿ ಮಾಡಿದ್ದವು. ಇಡೀ ವ್ಯವಸ್ಥೆಯೇ ಅವರಿಗೆ ಸೋಜಿಗದ ಸಂಗತಿಯಾಗಿತ್ತು. ಅವರ ಸರಳತೆ, ಉಪಚಾರ, ನಡವಳಿಕೆ ನಮ್ಮನ್ನು ಮಂತ್ರಮುಗ್ಧರನ್ನಾಗಿಸಿದ್ದವು. ರೂಂ ಸಿಗಲಿಲ್ಲವೆಂದು ಪರದಾಡುತ್ತಿದ್ದ ನಮಗೆ ಇಂತಹ ತಾರಾ ಹೋಟೆಲಿಗಿಂತಲೂ ಮಿಗಿಲಾದ ಸೌಕರ್ಯ ಸಿಕ್ಕಿದಾಗ 'ಆದದ್ದೆಲ್ಲಾ ಒಳಿತೇ ಆಯಿತು' ಎಂಬ ದಾಸರಪದ ನೆನಪಿಗೆ ಬಂತು.

ಇಷ್ಟೆಲ್ಲಾ ಉಪಚಾರ ನೀಡಿದ ಆ ಸರಳ ಜೀವಿಗಳಿಗೆ ಪ್ರತಿಯಾಗಿ ನೀಡಲು ನಮ್ಮಲ್ಲಿ ಏನೂ ಇರಲಿಲ್ಲ. ಅವರ ಆತಿಥ್ಯವನ್ನು ದುಡ್ಡಿನಿಂದ ಅಳೆಯಲು ಸಾಧ್ಯವೇ ಇಲ್ಲ. ನಗರ ವಾಸಿಗಳಾಗಿ ಕೆಲಸ ಕೆಲಸ ಎಂದು ತುದಿಗಾಲಲ್ಲೇ ರಾತ್ರಿ ಬೆಳಗು ನಿಲ್ಲುವ ನಾವು ಇವರನ್ನು ಇಷ್ಟರಮಟ್ಟಿಗೆ ನೋಡಿಕೊಳ್ಳಲು ಸಾಧ್ಯವೇ ಎಂಬ ಅನುಮಾನ ನಮ್ಮಲ್ಲಿತ್ತು. ಆದರೂ ಅವರನ್ನು ಖಂಡಿತಾ ನಮ್ಮಲ್ಲಿರಬೇಕೆಂದು ಹೃತ್ಪೂರ್ವಕವಾಗಿ ಆಮಂತ್ರಿಸಿದೆವು. ಬೀಳ್ಕೊಡುವಾಗ ಮಕ್ಕಳಿಗಲ್ಲದೇ ನಮಗೂ ಕಣ್ಣಂಚಿನಲ್ಲಿ ನೀರಾಡಿತ್ತು. ಮಕ್ಕಳು ತಾವು ಆಡಲು ತಂದಿದ್ದ ಸ್ಕ್ರಾಬಲ್, ಒಂದು ಗೋಲಿ ಉಳಿಸುವ ಆಟ ಮೊದಲಾದ ನಗರದ ಆಟ ಗಳನ್ನೆಲ್ಲಾ ಅವರಿಗಿತ್ತು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ನಾವು ತಂದಿದ್ದ ಬೆಂಗಳೂರಿನ ತಿಂಡಿ-ತಿನಿಸನ್ನು ಅವರಲ್ಲಿಯೇ ಬಿಟ್ಟು ಅವರಿತ್ತ ಮಲೆನಾಡಿನ ತಿಂಡಿಗಳನ್ನು ಕಟ್ಟಿಕೊಂಡು ಭಾರವಾದ ಮನಸ್ಸಿನಿಂದ ಹೊರಟೆವು. ಈ ಪ್ರವಾಸವಂತೂ ನಮಗೆ ಹೊಸ ಅನುಭವವನ್ನೇ ನೀಡಿತು. ಪ್ರಯಾಣದುದ್ದಕ್ಕೂ ನಾವು ಎಲ್ಲ ನೆನಪುಗಳನ್ನು ಮೆಲಕು ಹಾಕುತ್ತಲೇ ಇದ್ದೆವು.

ಈಗ ನನಗೆ ಪ್ರವಾಸೋದ್ಯಮದ ಬಗ್ಗೆ ಹೊಸ ಕಲ್ಪನೆಯೇ ಮೂಡಿಬಂದಿದೆ. ಪ್ರವಾಸ ವೆಂದರೆ ಕೇವಲ ಪ್ರಕೃತಿಯ ಸೊಬಗೊಂದೇ ಅಲ್ಲ, ನಮ್ಮೊಂದಿಗಿರುವ ಜನ, ನಾವು ಇಳಿದುಕೊಳ್ಳುವ ಸ್ಥಳ, ಜನರ ನಡವಳಿಕೆ ಇದು ತುಂಬಾ ಮುಖ್ಯ ಎಂಬುದು ಮನದಟ್ಟಾಯಿತು. ಒಂದು ಒಳ್ಳೆಯ ಶೌಚಾಲಯ, ಇವೆಲ್ಲವೂ ಮಲಗಲು ಒಂದು ಜಮಖಾನ, ತಿನ್ನಲು ಸರಳವಾದ ಆಹಾರ, ನಾಕು ಮಂದಿ ಮಿತ್ರರು, ಗಲಾಟೆಮಾಡಲು ಮಕ್ಕಳು ಇದ್ದರಂತೂ ಬೇರೇನೂ ಬೇಕಿಲ್ಲ ಎಂಬುದೂ ಅರಿವಾಯಿತು. ಬೆಂಗಳೂರಿನಲ್ಲಿ ಈಗೀಗ ನಿರ್ಮಲ ಶೌಚಾಲಯಗಳು ಬರುತ್ತಿರುವುದು ಒಂದು ಸಮಾಧಾನಕರ ಸಂಗತಿ.

ಆ ಕ್ಷಣವೇ ನನ್ನ ಹಳೆಯ ಮೆಟಾಡರ್‌ಗೆ ಹಿಂಭಾಗದಲ್ಲಿ ಮಡಿಸುವಂತಹ ಸೀಟುಗಳನ್ನು ಹಾಕಿಸಿ, ಒಂದು ಮೃದುವಾದ ಹಾಸಿಗೆಯನ್ನು ಸಿದ್ಧಪಡಿಸಿದೆ. ಈಗ ಅದರಲ್ಲಿ ಬೇಕೆಂದರೆ ಕಾಲುಚಾಚಿಯೋ, ಮಲಗಿಕೊಂಡೋ ಪ್ರಯಾಣ ಮಾಡಬಹುದು. ಎಲ್ಲೆಂದರಲ್ಲಿ ನಿಲ್ಲಿಸಿ ವಿಶ್ರಮಿಸಬಹುದು. ಊಟಕ್ಕೇನೂ ಯೋಚನೆ ಇಲ್ಲ, ಮನೆಯಿಂದಲಾದರೂ ತರಬಹುದು,

ಹೋಟೆಲ್‌ಗಾದರೂ ಹೋಗಬಹುದು. ನಮಗೀಗ ಬೇಕಾಗಿರುವುದು ಶೌಚಾಲಯದ ಸೌಕರ್ಯ ಮಾತ್ರ.

ಎಲ್ಲಾ ಕಡೆಯಲ್ಲೂ ಕಾಡಿನ ಮನೆಯವರಂತೆ ಜನ ಸಿಗುವರೆಂಬ ಖಾತರಿ ಇರಲು ಸಾಧ್ಯವಿಲ್ಲ. ಆದ್ದರಿಂದ ಪ್ರವಾಸಿಗರಿಗೆ ಎಂದೇ ಶೌಚಾಲಯದ ವಿನ್ಯಾಸ ಮಾಡಿ ಕಟ್ಟಿಸಬೇಕು. ಅದು ಕೇವಲ ಶೌಚಾಲಯವಾಗಿರದೇ ಜೊತೆಗೆ ಪ್ರವಾಸದ ಮಾಹಿತಿ, ಸಣ್ಣ ಗ್ರಂಥಾಲಯ, ಆರಾಮವಾಗಿ ಕಾಲು ಚಾಚಲು ಸ್ಥಳ, ಮನೆಯಿಂದ ತಂದ ತಿಂಡಿಯನ್ನು ಇತರರಿಗೆ ತೊಂದರೆಯಾಗದಂತೆ ತಿನ್ನಲು ಜಾಗ ಇತ್ಯಾದಿಗಳ ಸೌಲಭ್ಯವೂ ಇದ್ದರೆ ಎಷ್ಟೊಂದು ಚೆನ್ನ ಅಲ್ಲವೇ ? ರೋಮ್ ಸಾಮ್ರಾಜ್ಯದ ರೋಮನ್ ಬಾತ್‌ಗಳು (ಥರ್ಮೆ) ನೆನಪಾಗುತ್ತಿವೆಯೇ ? ರೋಮನ್ ಬಾತ್‌ಗಳಲ್ಲಿ ಸ್ನಾನಗೃಹದೊಂದಿಗೆ ವಾಚನಾಲಯ, ಸಭಾ ಮಂದಿರ, ವ್ಯಾಯಾಮ ಶಾಲೆ, ಜನರೆಲ್ಲಾ ಕೂಡಿ ಕಾಲ ಕಳೆಯಲು ಜಾಗ ಇತ್ಯಾದಿ ಇರುತ್ತಿದ್ದವು. ಇವು ನಗರ ಮಧ್ಯ ಭಾಗಗಳಲ್ಲಿ ಇರುತ್ತಿದ್ದವು. ಚರಿತ್ರೆಯ ಪುನರಾವರ್ತನೆ ಮತ್ತೆ ಯಾಕಾಗಬಾರದು ?

ಇಂದಿನ ಪ್ರವಾಸೋದ್ಯಮ ಯುಗದಲ್ಲಿ ನಾವು ಪ್ರವಾಸ ಕೇಂದ್ರಗಳಲ್ಲಿ ಇಂತಹ ಸುಸಜ್ಜಿತ ಶೌಚಾಲಯಗಳನ್ನು (ಶೌಚಾಲಯ ಅನ್ನುವುದಕ್ಕಿಂತ ಪ್ರವಾಸಾನುಕೂಲ ಕೇಂದ್ರವೆಂದರೆ ಚೆನ್ನ, ಅಲ್ಲವೇ ?) ನಿರ್ಮಿಸಿದರೆ ಪ್ರವಾಸಿಗರ ತೊಂದರೆ ನಿವಾರಣೆಯಾಗುತ್ತದೆ. ಆದರೆ ಇವನ್ನು ಅತ್ಯಂತ ಶುಚಿಯಾಗಿಟ್ಟುಕೊಳ್ಳಬೇಕು. ಅದಕ್ಕಾಗಿ ಹಣ ಪಡೆದರೂ ಸರಿಯೇ, ಜನಸಾಮಾನ್ಯರಿಗೂ ಇದರ ಅನುಕೂಲಗಳ ಮನವರಿಕೆ ಮಾಡಿಕೊಡಬೇಕು. ಗಲೀಜು ಮಾಡಿದಲ್ಲಿ ಮುಲಾಜಿಲ್ಲದೇ ಸ್ಥಳದಲ್ಲೇ ದಂಡ ವಸೂಲಿ ಮಾಡಬೇಕು. ಮಲಗಲು ಬೇಕಾದಲ್ಲಿ ದೊಡ್ಡ ಹಾಲುಗಳು ಅಥವಾ ನಾವು ಮಾಡಿದಂತೆ ವಾಹನದಲ್ಲೇ ಮಲಗಲು ಸೌಕರ್ಯ ಮಾಡಿಕೊಡಬಹುದು. ಆದರೆ ಪ್ರವಾಸಿಗರ ಹೊರೆಯನ್ನು ಜತನದಿಂದ ಕಾಪಾಡುವ ಕ್ಲೋಕ್ ರೂಂ ಸೌಲಭ್ಯ ಇದ್ದರೆ ತುಂಬಾ ಅನುಕೂಲ. ಕೈಬೀಸಿಕೊಂಡು ಎಲ್ಲವನ್ನೂ ಆರಾಮವಾಗಿ ನೋಡಿಕೊಂಡು ಬರಬಹುದು.

ಹೀಗಿದ್ದಲ್ಲಿ ಪ್ರವಾಸ ಪ್ರಯಾಸವಾಗದೇ ಒಂದು ಉತ್ತಮ ಮನರಂಜನೆಗೆ, ಜ್ಞಾನವೃದ್ಧಿಗೆ ವಾಹಕವಾಗುವುದರಲ್ಲಿ ಸಂದೇಹವೇ ಇಲ್ಲ. ಪ್ರವಾಸವು ನಿಜವಾದ ಅರ್ಥದಲ್ಲಿ ಒಂದು ಉದ್ಯಮವಾಗುತ್ತದೆ. ನಮ್ಮಂತಹವರ ಶ್ರೀಸಾಮಾನ್ಯರ ಸಂಚಾರೀ ಗೃಹಕ್ಕೂ ಒಂದು ಉತ್ತಮ ಚಾಲನೆ ದೊರೆತಂತಾಗುತ್ತದೆ.

ಇಷ್ಟೆಲ್ಲಾ ಅನಿಸಿಕೆಗೆ, ಯೋಚನೆಗೆ ಕಾರಣರಾದ ಕಾಡಿನ ಮನೆಯವರು ಒಮ್ಮೆ ಬೆಂಗಳೂರಿಗೆ ಬಂದರು. ಅವರನ್ನು ನನ್ನ ಸಂಚಾರಿ ಗೃಹದಲ್ಲಿ ಊರೆಲ್ಲಾ ಸುತ್ತಿಸಿ ಔತಣ ನೀಡಿ ಕೃತಾರ್ಥನಾದೆ.

ಜೋಗ್ ನೋಡಿದಂತೆ ಗೌಹಾತಿ-ಶಿಲ್ಲಾಂಗ್‌ಗಳನ್ನೂ ನೋಡಿ ಅಲ್ಲಿಯ 'ಜೋಗ್-ಸೊಗಸ'ನ್ನು ಸವಿಯುವುದೆಂತು ಎನಿಸುತ್ತದೆ. ಅಲ್ಲಿಯ ಕಲ್ಲುಗಳನ್ನು, ಫಾಲ್ಸ್‌ಗಳನ್ನು, ಈಗ ಚಿತ್ರದಲ್ಲಿ ಮಾತ್ರವೇ ಸವಿದಿರುವ ನಾವು ಪ್ರತ್ಯಕ್ಷವಾಗಿ ನೋಡಿಬರುವ ದಿನ ದೂರವಿಲ್ಲ.

ಜಗದೀಶ್ ಬಳಗೆರೆ
ಮನೆ ನಂ. ೪೪೨, ೩೮ನೇ ಕ್ರಾಸ್, ೫ನೇ ಬ್ಲಾಕ್
ಜಯನಗರ, ಬೆಂಗಳೂರು



# ರಾಮನ ಸೈಕಲ್ಲು ಮತ್ತು ಬಿಸ್ಮಿಲ್ಲ

ಜೇಬಿನ ತುಂಬಾ ಗೋಲಿ ತುಂಬಿಕೊಂಡ ಬಿಸ್ಮಿಲ್ಲ
ಪೊಂಪು ಹೊಡೆಯುತ್ತಾ ಸೈಕಲ್ಲಿಗೆ
ನಿತ್ಯ ನೋಡಿಯೇ ನೋಡುತ್ತಾನೆ
ಹೆದ್ದಾರಿಯ ಬದಿಯಲಿ
ಹಗಲೆಲ್ಲಾ ಹೆಣ ಹೊತ್ತವರು
ಹೆಗಲು ಬದಲಾಯಿಸುತ್ತ
ದುಡು ದುಡು ಸಾಗಿಯೇ ಬಿಡುತ್ತಾರೆ
ಕೊರಡಾದ ಕಾಲುಗಳು ಮಿಸುಕಾಡುತ್ತವೆ

ಪುಟ್ಟ ಕಣ್ಣುಗಳು
ಅಚ್ಚರಿ ಅರಳಿಸುತ್ತವೆ
ಬಾಡುತ್ತಿರುವ ಹೂಗಳಿಗೆ ಜೀವಬಂದು
ಗೋಲಿಗಳ ಹೆಕ್ಕುತ್ತ ಆಟ ಮುಂದುವರೆಸುತ್ತಾನೆ

ಎಡಕ್ಕೆ ಹಿಂದೂಗಳ ರುದ್ರ ಭೂಮಿಯಾದರೆ
ಮುಸಲ್ಮಾನರದು ಬಲಕ್ಕೆ
ಎರಡಕ್ಕೂ ನಡೆಯಬೇಕು ಒಂದು ಮೈಲಾದರೂ
ಇಸಾಯಿಗಳದ್ದಂತೂ ಇನ್ನೂ
ದೂರ ಹೋಗಬೇಕು
ಹೊಡೆವ ಗಂಟೆ ಕೇಳಲು

ಪ್ರತಿಯೊಂದಕ್ಕೂ ಒಂದೊಂದು ಗೇಟು
ಪ್ರತ್ಯೇಕ ಕಾವಲುಗಾರ

ಇವನಿಗೆ ಜಡ್ಡಾದರೆ ಅವನು
ಅವನಿಗೆ ಜಡ್ಡಾದರೆ ಇವನು
ಪಾಳಿಯ ಮೇಲೆ ಕಾಯುತ್ತಾರಂತೆ
ಎಲ್ಲ ಮಾಹಿತಿ ಮಡಗಿದ್ದಾನೆ
ಮಸ್ತಕದಲ್ಲಿ ಪುಟ್ಟ ಬಿಸ್ಮಿಲ್ಲ

ಯಾವ ಹೆಣ ಯಾವ ತಿರುವಿಗೆ
ದಿನಾ ಎಣಿಸುತ್ತಾನೆ ಗೋಲಿಯ ಜೊತೆಗೆ
ಹೆಣ ಹೊತ್ತವರು ದುಡು ದುಡು ಸಾಗಿಯೇ ಬಿಡುತ್ತಾರೆ
ಸತ್ತದ ಹೆಸರು ಹಿಡಿದು
ಹೆದ್ದಾರಿಯ ಮೇಲೆ
ಮೆರವಣಿಗೆಗೆ ಮೌನ ಜೊತೆಗೂಡುತ್ತದೆ

ಗಾಳಿ ತುಂಬಿಸಿಕೊಳ್ಳಲು ಬಂದ ರಾಮನ
ಸೈಕಲ್ಲ ಮೇಲೆ ಡಬ್ಬಲ್ ಮಾಡುತ್ತ ಬಿಸ್ಮಿಲ್ಲ
ಹೇಳುತ್ತಾನೆ ಗಾಳಿಯಲಿ ತೇಲುತ್ತ

ಅರೆ... ಯಾರ್ ಎಷ್ಟೊಂದು ಹೆಣ
ಎಷ್ಟೊಂದು ಮಶಾಣ.

ಗಿರಿಜಾ ಶಾಸ್ತ್ರಿ
೨೦೩, ಲೋಕಧರ - ಡಿ ೬, ಹಿಮಗಿರಿ,
ಕಲ್ಯಾಣ (ಪೂರ್ವ) - ೪೨೧ ೩೦೬

ತೆಲುಗು ಮೂಲ

**ಗುರಜಾಡ ಅಪ್ಪಾರಾವು**

# ನಿಮ್ಮ ಹೆಸರೇನು?

ಅನುವಾದ

**ಸ. ರಘುನಾಥ**

**ದೇ**ವರು ಮಾಡಿದ ಮಾನವರೇ!

ಮಾನವರು ಮಾಡಿದ ದೇವರುಗಳೇ!

ನಿಮ್ಮ ಹೆಸರೇನು ?

ಪುರಾಣದ ಕಥೆಗಳನ್ನು ಕುರಿತು ನಾವು ಶಂಕೆಗೊಂಡರೆ ನಮ್ಮ ಗುರುಗಳು ''ಮುಟ್ಠಾಳ ಓದು! ನಿಮಗೆ ಬುದ್ಧಿ ಕೆಡುತ್ತಿದೆ. ನೀವು ಶುದ್ಧ ಬೌದ್ಧರು'' ಅನ್ನುತ್ತಿದ್ದರು.

''ಬೌದ್ಧರು ಎಂತಹವರು ಶಾಸ್ತ್ರಿಗಳೇ'' ಎಂದು ರಾಮ್ಮೂರ್ತಿ ಒಂದು ದಿನ ಕೇಳಿದ.

''ನಾಳೆ ಭಾನುವಾರದಂದು ಹೂದೋಟದಲ್ಲಿ ಈ ವಿಷಯದ ಮೇಲೆ ಉಪನ್ಯಾಸ ಕೊಡಲಿದ್ದೇನೆ. ಎಲ್ಲರೂ ಬನ್ನಿರಿ'' ಎಂದು ಶಾಸ್ತ್ರಿಗಳು ಅಪ್ಪಣೆ ಕೊಟ್ಟರು.

ಭಾನುವಾರ ಮಧ್ಯಾಹ್ನ ನಾಲ್ಕುಗಂಟೆ ವೇಳೆಗೆ ಹೂದೋಟದ ಒಂದು ಹೊರವಾದ ಮಾವಿನ ಮರದಡಿಯ ಮರಳಿನ ಮೇಲೆ ನಾವು ಇಪ್ಪತ್ತೈದು ಮಂದಿ ಕುಳಿತುಕೊಂಡೆವು. ಶಾಸ್ತ್ರಿಗಳು ಮೇಲುದವನ್ನು ಹಾಸಿಕೊಂಡು ನಮಗಭಿಮುಖವಾಗಿ ಕುಳಿತರು. ನಾನು ಕೂರುಮೇಜೊಂದನ್ನು ತಂದು ಹಾಕಲು ಹೊರಟಾಗ ''ಬೇಡವೋ. ನೀವೆಲ್ಲ ಕೆಳಗೆ ಕುಳಿತರೆ ನಾನು ಮೇಜಿನ ಮೇಲೆ ಕುಳಿತುಕೊಳ್ಳುವುದೇನು ?'' ಅಂದರು. ಎರಡು ಎಳನೀರು ಕುಡಿದು ತಾಂಬೂಲ ಹಾಕಿಕೊಳ್ಳುತ್ತ ಶಾಸ್ತ್ರಿಗಳು ಬೌದ್ಧಮತದ ವಿಷಯವಾಗಿ ಉಪನ್ಯಾಸ ನೀಡಿದರು. ಹತ್ತು ನಿಮಿಷಗಳಾಗುವಷ್ಟರಲ್ಲಿ ರಾಮ್ಮೂರ್ತಿ ಪುಸ್ತಕವೊಂದನ್ನು ತೆರೆದು ತನ್ನಲ್ಲೆ ತಾನು ಓದಿಕೊಂಡು ''ಶಾಸ್ತ್ರಿಗಳೇ, ತಾವು ಅಪ್ಪಣೆ ಕೊಟ್ಟಿದ್ದೆಲ್ಲ ಸರ್ವದರ್ಶನ ಸಂಗ್ರಹದಲ್ಲಿನದೆ ಅಲ್ಲವೆ ?'' ಎಂದು ಕೇಳಿದ. ಅಚ್ಚರಿಗೊಂಡ ಶಾಸ್ತ್ರಿಗಳು ''ಎಲಾ ನಿನಗೆ ಹೇಗೆ ತಿಳಿಯಿತೊ! ಅದೇನು ತರ್ಜುಮೆ ಅಲ್ಲವೆ ?'' ಅಂದರು.

''ಹೌದು.''

''ಈ ಇಂಗ್ಲಿಷಿನವನು ಉದ್ದಂಡ ಪಿಂಡ! ಆ ಎರಡನೆ ಪುಸ್ತಕವೊ ?''

''ಅದು ಬುದ್ಧ ಚರಿತ್ರೆ.''

''ಎಲ್ಲಿ ಸಂಪಾದಿಸುವಿರೊ ಈ ಅಪೂರ್ವ ಪುಸ್ತಕಗಳನ್ನು? ಎಲ್ಲಿ ತಾ.''

ಶಾಸ್ತ್ರಿಗಳು ಪುಸ್ತಕವನ್ನು ಇಸಿದುಕೊಂಡು, ಅತಿ ಮಧುರವಾದ ಸ್ವರದಲ್ಲಿ ಶ್ಲೋಕಗಳನ್ನು ಓದಿ ಅರ್ಥ ಹೇಳತೊಡಗಿದರು. ಅವರು ಹೇಳುವ ಕಥೆಗಳಂತೆ ಕಣ್ಣಿಗೆ ಕಟ್ಟಿದಂತಿತ್ತು. ಹೀಗೆ ಆನಂದದಿಂದ ಕಳೆದವು. ಮನೆಗೆ ಬರುವಾಗ ಶಾಸ್ತ್ರಿಗಳು ಅಪ್ಪಣೆಕೊಟ್ಟರು ''ಈ ಸಂಸ್ಕೃತ ಭಾಷೆ ಮೇಲೆ ಬಿಳಿಯರಿಗೆ ಹೇಗೆ ಅಭಿಮಾನ ವುಂಟಾಯಿತು! ಎಲ್ಲಿಲ್ಲದ ಗ್ರಂಥಗಳನ್ನು ಹೊರ ತೆಗೆಯುತ್ತಿದ್ದಾರೆ. ಅವರಲ್ಲಿ ತಪ್ಪದೆ ಭಗವಂತನಿದ್ದಾನೆ.''

ನಾಲ್ಕು ದಿನ ಕಳೆದ ಮೇಲೆ ಶಾಸ್ತ್ರಿಗಳೊಂದು ದಿನ ಕ್ಲಾಸಿನಲ್ಲಿ ಹೀಗೆ ಅಪ್ಪಣೆ ಕೊಟ್ಟರು. ''ಲೇ ನಿಜ ಹೇಳಬೇಕೆಂದರೆ ಈ ಪುಸ್ತಕ ಓದುವವರೆಗೆ ಬುದ್ಧನ ಮಹಿಮೆ ತಿಳಿಯಲಿಲ್ಲವೋ. ತಪ್ಪದೆ ಈ ಮಹಾನುಭಾವ ಶ್ರೀ ಮಹಾವಿಷ್ಣುವಿನ ಅವತಾರವೇನೋ.''

ಅಂದಿನಿಂದ ಶಾಸ್ತ್ರಿಗಳು ನಮ್ಮನ್ನು ಬೌದ್ಧರೆಂದು ದೂಷಿಸುವುದನ್ನು ಬಿಟ್ಟುಬಿಟ್ಟರು. ಕಿರಸ್ತಾನಿಯವರೆಂದು ಮಾತ್ರ ಹೇಳುತ್ತ ಬಂದರು. ಕ್ರಿಸ್ತನನ್ನು ಶ್ರೀ ಮಹಾವಿಷ್ಣುವಿನ ಹನ್ನೊಂದನೇ ಅವತಾರವಾಗಿ ಮಾಡಲು ಸಾಧ್ಯವಾಗದೆ ಒಪ್ಪಿಕೊಂಡು ಸುಮ್ಮನಾದೆವು.

ನಮ್ಮ ಗುರುಗಳಂತಹ ಗುರುಗಳು ಲೋಕದಲ್ಲಿಲ್ಲ. ದೀರ್ಘಕಾಲ ಕಾಶೀವಾಸಿಗಳಾಗಿ ತರ್ಕಶಾಸ್ತ್ರವನ್ನು ಅಧ್ಯಯನ ಮಾಡಿದ್ದರು. ನಮ್ಮ ದೇಶದಲ್ಲಿ ಅಂತಹ ತಾರ್ಕಿಕರಿಲ್ಲವೆಂದು ಪ್ರತೀತಿ. ಶಾಸ್ತ್ರದ ಮಾತಿಗೇನು ಒಳ್ಳೆಯ ಕಾವ್ಯ ರಸಗ್ರಾಹಿ. ಮೇಲಾಗಿ ಸುಗುಣ ಸಂಪತ್ತಿನಲ್ಲೋ ಎಂದರೆ ಸತ್ಯಯುಗದ ಮನುಷ್ಯ

**ಆಧುನಿಕ ತೆಲುಗು ಸಾಹಿತ್ಯ-ಸಾಮಾಜಿಕ ಬದುಕಿನ ಕ್ರಾಂತಿ ಪುರುಷ, ಹೊಸ ದಿಕ್ಕಿನ ಉದ್ಘಾಟಕ ಗುರಜಾಡ ಅಪ್ಪಾರಾವು (೧೮೬೨-೧೯೧೫). ತೆಲುಗು ಸಣ್ಣ ಕತೆಗಳ ಆದ್ಯ ಪುರುಷರೆಂದೇ ಖ್ಯಾತಿ. ದೇಶಕ್ಕಾಗಿ, ದೇಸಿ ಭಾಷೆಗಾಗಿ ದುಡಿದವರು. ತೆಲುಗು ಸಾಹಿತ್ಯವನ್ನು ಸಾಂಪ್ರದಾಯಿಕ ಗ್ರಾಂಥಿಕ ಭಾಷಾ ಬಂಧನದಿಂದ ಮುಕ್ತಗೊಳಿಸಿದವರಲ್ಲಿ ಪ್ರಮುಖರು.**

ನೆಂದರೆ ಅವರೆ ಸತ್ಯಯುಗದ ಮನುಷ್ಯ. ಅಂತಹ ಪಾಂಡಿತ್ಯ ಇಂತಹ ಸತ್ಯ ಒಂದೇ ಮಸ್ತಿಷ್ಕದಲ್ಲೆಂತು ಕೂಡಿಕೊಂಡಿದೆಯೊ, ಆಶ್ಚರ್ಯ.

ಇದಾದದ್ದು ಹತ್ತು ವರ್ಷಗಳ ಹಿಂದಿನ ಮಾತು. ಈ ಶಾಸ್ತ್ರಿಗಳು ವಿಶ್ರಾಂತರಾಗಿದ್ದಾರೆ. ನಮ್ಮಂತಹ ಶಿಷ್ಯರ ಉಪಚಾರವನ್ನು ಪಡೆಯುತ್ತಾ ನಮಗೆ ಸಂಸ್ಕೃತ ಗ್ರಂಥಗಳ ಪರಿಚಯ ಮಾಡಿಕೊಡುತ್ತಾ ಆನಂದಿಸುತ್ತ, ಆನಂದ ನೀಡುತ್ತ ಕಾಲ ಕಳೆಯುತ್ತಿರುವರು.

ನಾನು ವ್ಯಾಪಾರ ಮಾಡುತ್ತಿರುವೆ. ರಾಮ್ಮೂರ್ತಿಗೆ ಭೂಮಿ ದೊಡ್ಡದಿದೆ. ಹೊಸ ಹೊಸ ಪದ್ಧತಿಯಲ್ಲಿ ಬೇಸಾಯ ಮಾಡುತ್ತಿರುತ್ತಾನೆ. ನೀರಾವರಿ ಜಮೀನಿನಲ್ಲಿ ಸೀತಾರಾಮ ವನವೆಂದು ಒಂದು ಬ್ರಹ್ಮಾಂಡವಾದ ತೋಟ ಮಾಡಿದ್ದ. ಅಲ್ಲಿಯ ಹುವ್ವಾಗಲಿ, ಮೊದಲ ಫಲವಾಗಲಿ ಗುರುಗಳು ತಿನ್ನದೆ, ರಾಮ್ಮೂರ್ತಿ ಗಿಡವನ್ನು ಮುಟ್ಟುತ್ತಿರಲಿಲ್ಲ. ಆ ತೋಟದಲ್ಲಿ ವಿಹರಿಸುವುದೆಂದರೆ ಗುರುಗಳಿಗೆ ಅತ್ಯಾನಂದ. ನಾವು ಅಲ್ಲಿಯೇ ಆಗಿಂದಾಗ್ಗೆ ಸಭೆ ನಡೆಸುತ್ತಿರುತ್ತೇವೆ. ವೆಂಕಯ್ಯ ಸ್ಕೂಲ್ಮೇಷ್ಟ್ರು. ಆಜ್ಞೆ ಮೀರಿ ಬೈಗುಳ ತಿನ್ನುತ್ತಿರುತ್ತಾನೆ. ನಮ್ಮ ಸ್ಕೂಲಿನ ಜೊತೆಗಾರರಲ್ಲಿ ಆರೇಳು ಮಂದಿ ಇಲ್ಲಿಯೇ ಇದ್ದೇವೆ. ಗುರುಗಳೂ ನಾವೂ ಸೇರಿದಾಗಲೆಲ್ಲ ಸ್ವರ್ಗಖಂಡವೊಂದು ಅಲ್ಲಿಗಿಳಿದಂತಿರುತ್ತದೆ.

ಇನ್ನು ಪ್ರಸ್ತುತ ಕಥೆ –

ನಮ್ಮ ಪಟ್ಟಣಕ್ಕೆ ಎಂಟು ಮೈಲುಗಳ ದೂರದಲ್ಲಿ ರಾಮಗಿರಿಯೆಂಬೊಂದು ವಿಷ್ಣು ಕ್ಷೇತ್ರವುಂಟು. ಅದರ ವರ್ಣನೆಯನ್ನು ಮತ್ತೊಮ್ಮೆ ಮಾಡುವೆ. ಈಗ ಮಾತ್ರ ನಿಮಗೆ ತಿಳಿಯಬೇಕಾದುದೇನೆಂದರೆ, ಅಲ್ಲಿನ ವಿಷ್ಣುಕ್ಷೇತ್ರ ಆಧುನಿಕ. ಆ ಊರಿನ ಕರಿಬೆಟ್ಟಗಳಲ್ಲೆಲ್ಲ ಶಿಥಿಲವಾದ ಬೌದ್ಧ ಕಟ್ಟಡಗಳುಂಟು. ಅಲ್ಲಿನವರು ಅವನ್ನು ಪಾಂಡವರ ನಿವಾಸಗಳೆನ್ನುವರು. ಈ ದೇಶದಲ್ಲಿ ಪಾಂಡವರು ಇದ್ದಿರದ ಗುಹೆಗಳೂ, ಸೀತಮ್ಮನವರು ಸ್ನಾನ ಮಾಡದ ಕುಂಟೆಗಳಿಲ್ಲ.

ಒಂದು ದೊಡ್ಡ ಗುಹೆಯಲ್ಲಿರುವ ಬೌದ್ಧ ವಿಗ್ರಹವನ್ನು ಶಿವನೆಂದು, ಅದರ ಬದಿಯಲ್ಲಿರುವ ದೇವಿ ವಿಗ್ರಹವನ್ನು ಗೌರಿಯೆಂದು ಭಾವಿಸಿ ಜಂಗಮರು ಪೂಜಿಸುವರು.

ಇರುತ್ತ ಇರುತ್ತ ಒಂದಿನ ದೊರೆಯೊಬ್ಬ ಗುಮಾಸ್ತನೊಂದಿಗೂ ಡವಾಲಿ ಸೇವಕರೊಂದಿಗೂ ಬಂದು ದಿಬ್ಬದ ಪಡುವಣದ ದೊಡ್ಡ ಮಾವಿನ ತೋಪಿನಲ್ಲಿ ಕ್ಯಾಂಪು ಹೂಡಿದ. ನೂರಾರು ಮಂದಿ ಕೂಲಿಗಳನ್ನು ಕೂಡಿಸಿ ಆ ಬೆಟ್ಟಗಳ ನಡುವಿನಲ್ಲಿರುವ ದಿಬ್ಬಗಳಲ್ಲಿ ಉತ್ಖನನ ಕಾರ್ಯವನ್ನಾರಂಭಿಸಿದ. ನಿಧಿಗಾಗಿ ತೋಡಿಸುತ್ತಿರುವನೆಂದು ಅಲ್ಲಿನವರೆಲ್ಲ ಅಂದುಕೊಂಡರು. ಆದರೆ ಭಗ್ನ ಪ್ರತಿಮೆಗಳನ್ನು, ಚಿತ್ತಾರ ಬಿಡಿಸಿದ ಕಲ್ಲುಗಳನ್ನು, ಮುಚ್ಚಿಹೋದ ಹಳೆಯ ಮಡಕೆ ಕುಡಿಕೆಗಳನ್ನು ಬಂಡೆಗಲ್ಲುಗಳ ಮೇಲೆ ಪೇರಿಸಿ, ನಿಧಿಗಿಂತಲೂ ಅತಿ ಎಚ್ಚರಿಕೆಯಿಂದ ಭದ್ರವಾಗಿ ಆಯ್ದು ಜೋಡಿಸಿಟ್ಟಿದ್ದನು. ಇವನ್ನು ನೋಡಲೆಂದೆ ನಾವು ಹೊರಟೆವು.

ನಾವು ಆ ಊರಿಗೆ ಹೋಗುವಷ್ಟರಲ್ಲಿ ಜಂಗಮರು ಪೂಜಿಸುತ್ತಿದ್ದ ಆ ಹಾಲಲ್ಲಿನ ಬುದ್ಧ ಪ್ರತಿಮೆಯ ಬಗ್ಗೆ ಊರಿನಲ್ಲೆಲ್ಲ ಕೋಲಾಹಲ ತುಂಬಿತ್ತು. ಆ ಪ್ರತಿಮೆಯನ್ನು ನಾವು ನೋಡಿದೆವು. ತುಂಬ ಸೊಗಸಿನದಾಗಿತ್ತು. ಇಂತಹ ಅದ್ಭುತ ಚಿತ್ರ ಗಾಂಧಾರ ದೇಶದತ್ತ ಬಿಟ್ಟರೆ ಮತ್ತೆಲ್ಲಿಯೂ ಕಂಡುದಿಲ್ಲವೆಂದು ದೊರೆ ನಮ್ಮೊಂದಿಗೆ ಹೇಳಿದರು. ಅದರ ಪೀಠದ ಮೇಲೆ 'ಯೇ ಧರ್ಮಾ ಹೇತು ಪ್ರಭವಾ' ಇತ್ಯಾದಿ ಬೌದ್ಧ ಸಿದ್ಧಾಂತಗಳು ದಿವ್ಯವಾಗಿ ಕೆತ್ತಲ್ಪಟ್ಟಿದ್ದವು. ದೊರೆ ಅದರ ಮೇಲೆ ಕಣ್ಣಿಟ್ಟು 'ಕೊಡುವಿರಾ ?' ಎಂದು ಕೇಳಲು ಶೈವರಲ್ಲಿ ಹಿರಿಯರಾದವರು 'ಪ್ರಾಣವನ್ನಾದರೂ ಕೊಟ್ಟೇವು ಅದನ್ನು ಕೊಡಲಾರೆವು' ಅಂದರು. ದೊರೆ ನಾಲ್ಕು ಜನರೊಂದಿಗೆ ಬೆರೆತು ಕಲೆತು ಓಡಾಡುತ್ತಿದ್ದರಾದ್ದರಿಂದ ಮರ್ಯಾದೆಯಿಂದ ಉತ್ತರಿಸಿದ್ದರು. ಮತ್ತಾರಾದರೂ ಆಗಿದ್ದರೆ ಕಥೆ ಬಹುದೂರ ಹೋಗಿರುತ್ತಿತ್ತು! ದೊರೆ ಅಷ್ಟಕ್ಕೇ ಪ್ರಯತ್ನದಿಂದ ವಿರಮಿಸಿದ್ದರು.

ಹೀಗಿರುತ್ತ ಒಂದು ದಿನ ರಾತ್ರಿ ಪೂಜೆ ಮಾಡುವ ಜಂಗಮ ಶರಭಯ್ಯ ಆ ಪ್ರತಿಮೆಯನ್ನು ಮೀಟಿ ತೆಗೆದುಕೊಂಡು ಹೋಗಿ ಇನ್ನೂರಕ್ಕೆ ದೊರೆಗೆ ಮಾರಲು ನೋಡಿದ. ಕದ್ದು ತಂದಿರುವೆಯೆಂದು, ತೆಗೆದುಕೊಳ್ಳಲಾರೆನೆಂದು, ತಮಗೆ ಮಾತು ಬರಬಾರದೆಂದು ದೊರೆ ಊರಿನ ಹಿರಿಯರಿಗೆ ಹೇಳಿ ಕಳುಹಿಸಿದರು. ಇದೇನಿದು ಈ ದೊರೆಗೆ ಬುದ್ಧಿಮಟ್ಟ ಎಂದು ಶರ್ರಭಯ್ಯ ಕೊಂಚ ಆಶ್ಚರ್ಯಪಟ್ಟು, ದೊರೆ ಕೊಂಚ ಕಣ್ಣು ಪಕ್ಕ ಸರಿಸಿದಾಗ ದಿಬ್ಬಗಳತ್ತ ಪಲಾಯನ ಮಾಡಿದ. ಆ ಲಾಗಾಯಿತು ಅವನ ಫಿಕರಿಲ್ಲ.

ಶಾಯನ್ನಭುಕ್ತರ ಮನೆಯಲ್ಲಿ ವಸತಿ ಹೂಡಿ ನಾವು ಆ ಊರಿನಲ್ಲಿ ಮೂರು ದಿನವಿದ್ದೆವು. ಶಾಯನ್ನಭುಕ್ತ ನಮ್ಮ ಗುರುಗಳ ಬಳಿ ಕೆಲಕಾಲ ತರ್ಕಶಾಸ್ತ್ರ ಅಧ್ಯಯನ ಮಾಡಿದ್ದರು. ಒಳ್ಳೆಯ ಸಾಹಿತ್ಯವೂ ಉಂಟು. ಕೊಂಚ ಕವಿತ್ವವೂ ಉಂಟು.

ಮೂರನೇ ದಿನ ರಾತ್ರಿ ಊಟ ಮಾಡಿ, ನಾಲ್ವರೂ ಬಿಸಿಲು ಮಚ್ಚಿನ ಮೇಲೆ ಕುಳಿತೆವು. ಸಣ್ಣಗೆ ಗಾಳಿ ಎದ್ದು ತೆಂಗಿನಗರಿಗಳು ಅಲುಗಾಡತೊಡಗಿದವು. ಎದುರಿನ ದೇವರಬೆಟ್ಟ ಬ್ರಹ್ಮಾಂಡವಾದ ಮಹಾಲಿಂಗದಂತೆ ಕತ್ತಲನ್ನು ಸೀಳಿಕೊಂಡು ಬಾನ ತಾಕಿ ಮಾನವನ ಅಲ್ಪತ್ವವನ್ನು ಸಾರುತ್ತ ಯಾವುದೋ ವ್ಯಕ್ತವಾಗದ ಚಿಂತೆಯನ್ನು, ಭೀತಿಯನ್ನು ಮನಸ್ಸುಗಳಿಗುಂಟುಮಾಡುತ್ತಿತ್ತು. ದೇವತೆಗಳು ಪೂಜೆ ಮಾಡಿದ ದಿವ್ಯ ಕುಸುಮಗಳಂತೆ ನಕ್ಷತ್ರಗಳು ಶಿಖರದ ಸುತ್ತ ಹರಡಿ ಬೆಳಗುತ್ತಿದ್ದವು. ನಮ್ಮ ಮನಸ್ಸುಗಳು ಗತಕಾಲದಂದಿನ ಸ್ಥಿತಿಗತಿಗಳನ್ನು ಕುರಿತ ಕಲ್ಪನೆಗಳಿಂದ ತುಂಬಿದ್ದವು. ನಾನು ಧ್ಯಾನಿಸುತ್ತ, ನೆನೆಯುತ್ತ ಅಂದು ಈ ಪ್ರದೇಶ ಹೇಗಿದ್ದಿತೋ, ಬೌದ್ಧರು ಏನು ಮಾಡುತ್ತಿದ್ದರೋ ಅಂದೆ.

''ಆ ಹೆಣಗಳು ನಮ್ಮ ಹಾಗೆಯೇ ರೋದಿಸುತ್ತಿದ್ದವು. ನಮಗಿಂತಲೂ ಅಧ್ವಾನವಾಗಿದ್ದವು'' ಎಂದು ಮೃದು ಸ್ಮೃತಿಗಳು ಬೆದರಿ ಚೆದುರುವ ಕರ್ಕಶ ಸ್ವರದಲ್ಲಿ ವೆಂಕಯ್ಯ ಹೇಳಿದ. ಕಣ್ಣು ಕಿರಿದಾಗುವಷ್ಟು ಕೋಪ ಬಂದು ''ನಿನ್ನ ಅಮೂಲ್ಯವಾದ ಕಲ್ಪನೆಗಳಲ್ಲಿ ನೀನು ಆನಂದಿಸಬಾರದೆ ? ನನ್ನ ಮನಸ್ಸಿನಲ್ಲಿ ನಾನು ಕಲ್ಪಿಸಿಕೊಂಡಿದ್ದ ಬೌದ್ಧ ಪ್ರಪಂಚವನ್ನು ಮೂರ್ಖ ಮಾತುಗಳನ್ನಾಡಿ ಯಾಕೆ ಕೆಡಿಸುತ್ತಿ'' ಎಂದು ಕೇಳಿದೆ.

''ಆಗಲಿ'' ಶಾಸ್ತ್ರಿಗಳಂದರು, ''ಬುದ್ಧನು ವಿಷ್ಣುವಿನ ಅವತಾರವಲ್ಲವೆ, ಈ ಶೈವರೇಕೆ ಪೂಜೆ ಮಾಡುತ್ತಿರುವರೋ ?'' ಎಂದು ಅನುಮಾನ ವ್ಯಕ್ತಪಡಿಸಿದರು.

ಶಾಯನ್ನಭುಕ್ತ ನಶ್ಯದ ಡಬ್ಬಿ ತೆಗೆದು ಎರಡು ದೊಡ್ಡ ಚಿಟಿಕೆ ಏರಿಸಿ, ಉತ್ತರೀಯದಿಂದ ಮೂಗೊರೆಸಿಕೊಂಡು ''ಒಂದು ಕಥೆ ಉಂಟು'' ಅಂದರು. ಕಥೆಯೆಂದರೆ ಶಾಸ್ತ್ರಿಗಳಿಗೆ ಮೋಜು. ''ಹಾಗಿದ್ದ ಮೇಲೆ ಹೇಳು'' ಅಂದರು. ಕಿವಿಗೊಟ್ಟು ಕೇಳಿದೆವು. ಇದು ಕಥೆ –

''ಈ ಗ್ರಾಮದಲ್ಲಿ ಶೈವ-ವೈಷ್ಣವ ಮತಗಳವರಿಗೆ ಹಿಂದಿನಿಂದಲೂ ವೈರವೆ. ಶಿವಮತದವರಿಗೆ ಮುಂದಾಳು ಜಂಗಮರ ಶರಭಯ್ಯ. ಅಂದರೆ ಈಗ ಓಡಿದ ಪೂಜಾರಿಯೆ. ಮೊನ್ನೆ ಪ್ರತಿಮೆಯನ್ನು ಕಿತ್ತುತಂದು ಪಲಾಯನ ಮಾಡುವವರೆಗೂ ಅವನು ಸಾಕ್ಷಾತ್ತು ನಂದಿಕೇಶ್ವರನ ಅವತಾರವೆಂದು, ರಾತ್ರಿಗಳಲ್ಲಿ ಗುಹೆಯ ಮುಂದೆ ವೃಷಭರೂಪಿಯಾಗಿ ಮೇಯುತ್ತಿರುತ್ತಾನೆಂದು ಇಲ್ಲಿನ ಜಂಗಮರಿಗೂ ದೇವಾಂಗದವರಿಗೂ ನಂಬಿಕೆ. ಈಗಿನ ಆ ದೊರೆ ಹಿಂದಿನ ಜನ್ಮದಲ್ಲಿ ಪರಮ ಮಹೇಶ್ವರನಾದುದರಿಂದ ಆ ವಿಗ್ರಹವನ್ನು ಕೋರಿದನೆಂದು, ಭಕ್ತವಾತ್ಸಲ್ಯದಿಂದಾಗಿ ಶಿವನಿತ್ತ ಆಜ್ಞೆಯನ್ನನು ಸರಿಸಿಯೆ ಶರಭಯ್ಯ ವಿಗ್ರಹವನ್ನು ಕಿತ್ತು ತೆಗೆದುಕೊಂಡು ಹೋದನೆಂದು, ಗುಡಾರದಿಂದ ಓಡಿಹೋಗುವಾಗ ವೃಷಭ ರೂಪ ಧರಿಸಿ ಗುಟುರು ಹಾಕಿ ನಂತರ ಓಡಿ ಹೋದನೆಂದು, ಆಗಲೆ ಅವನ ಶಿಷ್ಯರು ಸುದ್ದಿಯೊಂದನ್ನು ಹುಟ್ಟಿಸಿದ್ದರು. ಇಂದೊ ನಾಳೆಯೊ ವೀರಾಸನ ಹಾಕಿ ಬಕಧ್ಯಾನ ಮಾಡುತ್ತ ಬೆಟ್ಟದ ಮೇಲೆಯೋ ಗೋಪುರದ ಮೇಲೆಯೋ ಆವಿರ್ಭವಿಸುವನು. ಬಾಜಾಭಜಂತ್ರಿಗಳೊಂದಿಗೆ ಹೊರಟು ದಂಡಕದೊಂದಿಗೆ ಕರೆತರುವರು. ಅನಂತರ ಅಕ್ಕಸಾಲಿಗರ ವೀರಯ್ಯ (ವೀರಣಾಚಾರಿ ಎಂದು ಕರೆಯದಿದ್ದರೆ ಕೋಪಿಸಿಕೊಳ್ಳುವನು) ರೆಕ್ಕೆಪುಕ್ಕ ಹುಟ್ಟಿಸಿ ದ್ವಿಪದಿ ಕಾವ್ಯರಚನೆ ಮಾಡಿ ಮುದ್ರಿಸುವನು. ಆ ಉಭಯರ ಕೀರ್ತಿ ದಿಗಂತಗಳನ್ನು ತಾಕುತ್ತದೆ.

''ಎಲಾ ಇವರ ಮೂರ್ಖಭಕ್ತಿಯೆ! ಈ ಪ್ರಪತ್ತಿ ಪಂಡಿತರಿಗಿಲ್ಲವೋ. ಇವರದೆಂತಹ ಭಾಗ್ಯವೋ!'' ಎಂದು ಗುರುಗಳು ಅಂದರು. ಆಗ ವೆಂಕಯ್ಯ ಏನನ್ನೊ ಹೇಳಲು ಹೊರಟಾಗ ಕೈಎತ್ತಿ ಬಾಯಿ ಮುಚ್ಚಿಸಿದೆ. ಯಾರ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸದಿರಲು ನಿನ್ನ ಶಾಸನವೇನು ಎಂದು ಕೇಳಿದೆ. ಮಾತಾಡಬೇಡವೆಂದು ಕೈ ಸನ್ನೆ ಮಾಡಿದೆ. ಶಾಯನ್ನಭುಕ್ತ ಮತ್ತೆ ಹೇಳತೊಡಗಿದರು.

''ಹೌದು. ತಾವು ಅಪ್ಪಣೆ ಕೊಟ್ಟಂತೆ ಪಾಮರರಿಗಿರುವ ಗಾಢಭಕ್ತಿ ಪಂಡಿತರಿಗಿರದಾದರೂ ಈ ಮೂಢಭಕ್ತಿ ಒಂದೊಮ್ಮೆ ಪ್ರಾಣಾಂತಿಕವಾಗಿತ್ತು. ಅದನ್ನೆ ಹೇಳ ಹೊರಟಿರುವೆ ಕೇಳಿ.''

''ನಾನೂ ಆ ಮಾತನ್ನೇ ಹೇಳಲುಹೋದಾಗ ಹೇಳಲು ಬಿಡಲಿಲ್ಲ'' ಎಂದು ವೆಂಕಯ್ಯ ಹೇಳಿದ.

''ಹೌದು. ನಿನಗಂತೂ ತಿಳಿಯದ ಸಂಗತಿಯೆ ಇಲ್ಲ, ಸುಮ್ಮನಿರು'' ಅಂದೆ.

''ಶಿವಸ್ಥಳ ಉದಯವಾದದ್ದು ನಿಮಗೆ ತಿಳಿದೇ ಇದೆ. ಪೂಜಾರಿ ಶರಭಯ್ಯ ಒಳ್ಳೆಯ ಕಥಕನಾದುದರಿಂದ ಇವನ ಕಾಲದಲ್ಲಿ ಶಿವಸ್ಥಲಕ್ಕೆ ಹೆಚ್ಚಿನ ವೈಭವ ಬಂದಿತು. ಸುತ್ತಮುತ್ತಲಿನ ಗ್ರಾಮಸ್ಥರು ಹರಕೆ ಸಲ್ಲಿಸುವರು. ಉತ್ಸವದ ದಿನಗಳಲ್ಲಿ ದೊಡ್ಡ ಜಾತ್ರೆಯೂ ನಡೆಯುವುದು. ಅಲ್ಲದೆ ಇಲ್ಲಿನ ದೇವಾಂಗದವರು ಸ್ಥಿತಿವಂತರೂ ಹೌದು. ಜಂಗಮಪಾಡಿನ ಯಾವತ್ತೂ ಮಂದಿ, ದೇವರವರೂ ಶರಭಯ್ಯನ ಮಾತಿನಂತೆ ನಡೆದುಕೊಳ್ಳುತ್ತಾರೆ. ಈ ಗ್ರಾಮದಲ್ಲಿರುವ ವಿಷ್ಣುಸ್ಥಲವನ್ನು ಇನ್ನೂರು ವರ್ಷಗಳ

ಹಿಂದೆ ಒಬ್ಬ ಮಹಾರಾಜನು ನಿರ್ಮಿಸಿ ರಾಗಭೋಗಗಳಿಗೆ ಗ್ರಾಮ ಒಂದನ್ನು ಸ್ವಾಮಿಗೆ ಸಮರ್ಪಿಸಿದನು. ಅಂದಿನಿಂದ ರಂಗಾಚಾರ್ಯರ ಕುಟುಂಬ ದವರೆ ಈ ಸ್ಥಳಕ್ಕೆ ಧರ್ಮಕರ್ತರಾಗಿ ಇದ್ದು ಬಂದರು. ಇವರು ಇಬ್ಬರು ಮೂವರು ವೈಷ್ಣವರನ್ನು ಸಂಬಳದ ಮೇಲೆ ನಿಯಮಿಸಿಟ್ಟು ಅವರಿಂದ ಅಧಿಕ ಭಕ್ತಿ ಶ್ರದ್ಧೆಗಳಿಂದ ಸ್ವಾಮಿಯ ಕೈಂಕರ್ಯ ನಡೆಸುತ್ತಿರುವರು. ರಂಗಾಚಾರ್ಯರು ಬಹು ಯೋಗ್ಯರು. ಅವರಲ್ಲಿನ ಸಂಸ್ಕೃತ ಸಾಹಿತ್ಯವನ್ನು ನೀವು ನೋಡಿಯೆ ಇರುವಿರಿ. ದ್ರಾವಿಡ ವೇದದಲ್ಲೂ ಗಟ್ಟಿಗರೆಂಬ ಪ್ರತೀತಿ ಉಂಟು. ಅವರ ಕುಮಾರರು ಕೃಷ್ಣಮಾ ಚಾರ್ಯರು ಸಹ ಸಂಸ್ಕಾರಿಯೆ ಆದರೂ ವಿಶೇಷ ಪ್ರಯೋಜಕರಲ್ಲ. ಆ ಮನೆಗೆ ಬೆಳಕು ತಂದದ್ದು ಈ ಕೃಷ್ಣಮಾಚಾರ್ಯರ ಭಾರ್ಯೆ ನಾಂಚಾರಮ್ಮ. ಆಕೆಯ ತಾಯಿ ತಂದೆಯೂ ಸಹ ಪಂಡಿತರಾದುದರಿಂದ ಆಂಧ್ರ ಗೀರ್ವಾಣಗಳಲ್ಲಿ ಉತ್ತಮ ಜ್ಞಾನ ಸಂಪಾದಿಸಿದ್ದರು. ಪುರಾಣವನ್ನು ಆ ಗೃಹಿಣಿ ಪಠಿಸುವಷ್ಟು ಶ್ರಾವ್ಯವಾಗಿಯೂ ರಸಪೂರಿತವಾಗಿಯೂ ಯಾರೂ ಪಠಣಮಾಡಲಾರರು. ರೂಪವೂ ರೂಪಕ್ಕೆ ಸದೃಶವಾದ ಗುಣಸಂಪತ್ತೂ ಉಂಟು. ಆಕೆಗೆ ಒಬ್ಬ ಕುಮಾರಿಯು, ಒಬ್ಬ ಕುಮಾರನು. ಮನೆಯನ್ನೂ ದೇವಾಲಯವನ್ನೂ ಆಕೆ ಅಚ್ಚುಕಟ್ಟಾಗಿ ನಿರ್ವಹಿಸುವರು.''

''ಇದು ಕವಿತ್ವವೆ, ನಿಜವೆ ?'' ಎಂದು ವೆಂಕಯ್ಯ ಅಂದ.

''ನಮಗೂ ಅವರಿಗೂ ಬಂದು ಹೋಗುವುದುಂಟು. ನನ್ನ ಹೆಂಡತಿ ಹೇಳಿದ ಮಾತುಗಳನ್ನು ನಾನು ಹೇಳುತ್ತಿದ್ದೇನೆ. ಆಕೆ ಪುರಾಣ ವಾಚನ ಮಾಡುವುದನ್ನು ಕಿವಿಯಾರೆ ಕೇಳಿದ್ದೇನೆ. ನಿಮಗೆ ಕೇಳುವ ಅಭಿಲಾಷೆಯಿದ್ದರೆ ನಾಳೆಯವರೆಗೆ ಇದ್ದುಬಿಡಿ. ವಿಷ್ಣುಸ್ಥಳದ ಸ್ಥಿತಿ ಇದು. ಆದರೆ ಆಚಾರ್ಯರು ಎಂದೂ ಮತಸಂಬಂಧಿ ಗುಂಪುಗಳ ನಡುವೆ ತಲೆಹಾಕಿದ್ದಿಲ್ಲ. ವೈಷ್ಣವರ ಗುಂಪಿಗೆ ಕ್ಯಾಪ್ಟನ್ ಸಾತಾನಿ ಮನವಾಳ್ಳಯ್ಯ. ಅಂದರೆ ದಿನವೂ ಬೆಳಿಗ್ಗೆ ಉಪಾದಾನಕ್ಕೆ ಬಂದು ಸ್ತೋತ್ರಗಳಿಂದ ನಡುಗಿಸಿಬಿಡುವನಲ್ಲ, ಅವನೆ. ಒಂದು ದಿನ ಬೆಳಗಿನ ಹೊತ್ತಿನಲ್ಲಿ ಕಲೆಕ್ಟರರು ಕುದುರೆ ಹತ್ತಿ ಬರುತ್ತಿದ್ದಾಗ ಗ್ರಾಮದ ಸರಹದ್ದಿನಲ್ಲಿ ಮನವಾಳ್ಳಯ್ಯನು ಎದುರಾಗಿ, ಪಟಪಟ ಎಂದು ಶ್ಲೋಕಗಳನ್ನು ಉದುರಿಸಲು ಅವನ ಸ್ಥೂಲಕಾಯ, ಪಟ್ಟೆನಾಮ, ತಾಮ್ರಧ್ವಜ, ಕೋಲಾಹಲ ಕಂಡು ಕುದುರೆ ಬೆದರಿತು. ಕಲೆಕ್ಟರರಿಗೆ ಕೋಪಬಂದು ಐದು ರೂಪಾಯಿ ಜುಲ್ಮಾನೆ ಹಾಕಿದರಂತೆ. ಆ ಕಥೆ ಶುದ್ಧ ಸುಳ್ಳೆಂದು, ದೊರೆಗಳು ತನ್ನಿಂದ ಶ್ಲೋಕಗಳನ್ನು ಹೇಳಿಸಿ ಐದು ರೂಪಾಯಿ ಪ್ರೆಸೆಂಟ್ ಮಾಡಿದರೆಂದು, ಅದರಿಂದ ಹೊಸ ಹೊಸ ಉಪಾದಾನದ ಪಾತ್ರೆ ಕೊಂಡೆನೆಂದು ಮನವಾಳ್ಳಯ್ಯನ ಅಂಬೋಣ.

ಶೈವರಲ್ಲಿನ ಐಕಮತ್ಯ ವೈಷ್ಣವರಲ್ಲಿಲ್ಲ. ಬಹಳಮಂದಿ ಸಾತಾನಿಗಳು ಮನವಾಳ್ಳಯ್ಯನ ಶಿಷ್ಯರೆ. ಆದರೂ ಸಹ ಕೆಲವರು ಅವನು ಅವತಾರ ಪುರುಷನೆಂದು ಹೇಳರು. ಅವನು ಹೇಳುತ್ತಾನೆ – ''ಶರಭಯ್ಯನೇ ವೃಷಭಾವತಾರವಾದಾಗ ನಾನು ಗರುಡಾಳ್ವಾರರ ಪೂರ್ಣಾವತಾರ ಆಗದಿದ್ದರೆ ಆಗದಿರಬಹುದಾದರೂ ಅವರ ಅತ್ಯಲ್ಪಾಂಶದಿಂದ ಲಾದರೂ ಜನ್ಮಿಸಿರದಿದ್ದೇನೆಯೆ ? ಗರುಡಾಳ್ವಾರರ ನಖದ ತೇಜಸ್ಸು ನನ್ನಲ್ಲಿ ಆವಿರ್ಭವಿಸಿದೆ. ಆದುದರಿಂದಲೆ ಶರಭಯ್ಯನನ್ನು ಹೀಗೆ ಭಂಗಿಸಿ ಬೆದರಿಸುತ್ತಿದ್ದೇನೆ.''

ಒಮ್ಮೆ ಈ ಮಾತು ಆಚಾರ್ಯರ ಕಿವಿ ಮುಟ್ಟಿ ಗಟ್ಟಿ ಛೀಮಾರಿ ಹಾಕಿದ್ದರು. ಆ ಛೀಮಾರಿ ತಿಂದು ಹೊರಬಂದು ''ಈ ಬ್ರಾಹ್ಮಣನದು ಜ್ಞಾನವೂ ಅಲ್ಲ, ಅಜ್ಞಾನವೂ ಅಲ್ಲ. ಭಕ್ತಿ ಪ್ರಭಾವದಿಂದಾಗಿ ಕೆಳ ಜಾತಿಯವರೆ ಆಳ್ವಾರರಾಗಿದ್ದಲ್ಲವೆ ? ಇಷ್ಟು ಕಾಲದಿಂದ ರಾಮಧ್ವಜವನ್ನು ಜಯಪ್ರದವಾಗಿ ಹೊರುತ್ತ, ಶೈವ ಸಂಹಾರ ಮಾಡಿದ ನಾನು ಶ್ರೀಮದ್ಗರುಡಾಳ್ವಾರರ ನಖಾಗ್ರದೊಂದು ಅವತಾರವೇಕಲ್ಲ? ಗರುಡಾಳ್ವಾರರ ನಖಗಳು ಬೆಳೆದು, ಖಂಡನವಾದಾಗ ಆ ಚೂರುಗಳು ನನ್ನಂತಹ ಭಕ್ತರಾಗಿ ಆವಿರ್ಭವಿಸಿ ಪರಮತ ಸಂಹಾರ ಮಾಡಿದ್ದು ವ್ಯರ್ಥವಾಗುವುದೆ ? ಬರಿ ಮಾತು !'' ಅಂದಿದ್ದ.

''ಎಲಾ ಎಂತಹ ಮೂರ್ಖತನ; ಏನು ಅಹಂಭಾವ ? ಈ ಅಜ್ಞರೇ ಅವತಾರ ಪುರುಷರು ? ಹೀಗೆ ಹೇಳಿದ್ದಕ್ಕೆ ಇವರ ತಲೆಗಳು ಚೂರಾಗದೆ ?'' ಎಂದು ಗುರುಗಳು ಅಂದರು.

''ಶಾಸ್ತ್ರಿಗಳೇ, ಹಿಂದಿನ ದಿನಗಳಲ್ಲಾಗಿದ್ದರೆ ಇವರೆ ಅವತಾರಿಗಳಾಗಿ ಬಿಡುತ್ತಿದ್ದರು. ಇವರ ಹೆಸರಿನಲ್ಲಿ ಮೂರ್ತಿಗಳನ್ನು ನಿಲ್ಲಿಸಿ, ದೇವಾಲಯಗಳನ್ನು ನಿರ್ಮಿಸಿ, ನಾವೇ ಪೂಜೆ ಮಾಡುತ್ತಿದ್ದೆವು. ಮತ್ತೆ ಬುದ್ಧನೂ ಇಂತಹ ಮನುಷ್ಯನೇ ಅಲ್ಲವೆ'' ಅಂದ ವೆಂಕಯ್ಯ.

''ಆಗಸನ ಬಟ್ಟೆಗೂ ಸಮುದ್ರಕ್ಕೂ ಸಾತತ್ಯ ಕಲ್ಪಿಸಿದೆ'' ಅಂದರು ಗುರುಗಳು.

''ಅಂದ ಮಾತಿಗೆಲ್ಲ ವ್ಯಾಖ್ಯಾನ ಮಾಡದಿದ್ದರೆ ಹೊತ್ತು ಹೋಗದು ನಿನಗೆ'' ಎಂದು ನಾನು ಹೇಳಿದೆ.

''ಈ ಊರಿನ ನಾಯುಡುಗಳು ಬಲವಂತರು. ಅದರಲ್ಲೂ ಸಾರಥಿ ನಾಯುಡು ಲಕ್ಷಾಧಿಪತಿ. ಅವನ ಭಾವಮೈದುನ ರಾಮಿ ನಾಯುಡು ಗ್ರಾಮದ ಪಟೇಲ. ಕೊಂಚ ಧೂರ್ತ, ನಿಶಾಭಾಜಕ-ಭೋಜನಪ್ರಿಯ. ಈ ತಾಲೂಕಿಗೇ ದೊಡ್ಡ ಸಾರಾಯಿ ಅಂಗಡಿ ಊರಿನಲ್ಲೆ ಇದೆ. ಅಂದಮೇಲೆ ಈ ಊರಿನ ಯೋಗ್ಯತೆಯನ್ನು ನೀವು ಊಹಿಸಿಕೊಳ್ಳಬಹುದು.''

ನಾಲ್ಕು ವರ್ಷಗಳ ಹಿಂದೆ ಇಲ್ಲಿಗೆ ದಕ್ಷಿಣ ದೇಶದಿಂದ ಒಬ್ಬ ಆಚಾರ್ಯರು ಬಂದು, ಸಾರಥಿ ನಾಯಿಡಿವಿಗೆ ಇನ್ನೂ ಕೆಲವು ಮಂದಿ ನಾಯುಡುಗಳಿಗೆ ಚಕ್ರಾಂಕಿತ ಮಾಡಿ ವೈಷ್ಣವ ದೀಕ್ಷೆ ಕೊಟ್ಟರು. ಆ ದಿನ ಪಟೇಲ ರಾಮಿ ನಾಯುಡು ರಾಮಸ್ವಾಮಿ ಆಲಯದಲ್ಲಿ ಸೇರು ಪುಳಿಯೋಗರೆ, ವೈಷ್ಣವ ದೀಕ್ಷೆಯನ್ನು ಏಕಕಾಲದಲ್ಲೆ ಸ್ವೀಕರಿಸಿದ. ಅಂದಿಗೂ ಇಂದಿಗೂ ಎರಡರಲ್ಲೂ ಒಂದೇ ರೀತಿಯ ದಾಸತ್ವ ಉಳಿದಿದೆ. ಅಂದಿನಿಂದ ಸಾರಥಿ ನಾಯುಡು ದ್ವಾದಶಿ ದ್ವಾದಶಿಗೆ ಸ್ವಾಮಿಗೆ ಯಥೇಚ್ಛವಾಗಿ ರಾಗಭೋಗ ಗಳನ್ನು ನಡೆಸುತ್ತಿರುವನು. ದ್ವಾದಶಿಯೆಂದರೆ ರಾಮಿ ನಾಯುಡುವಿಗೆ ದೊಡ್ಡ ಹಬ್ಬ.

ನಾಯುಡುಗಳೆಲ್ಲ ವೈಷ್ಣವ ಸ್ವೀಕಾರ ಮಾಡಿ, ಶಿವಾಲಯದತ್ತ ತಿರುಗಿಯೂ ನೋಡದೆ ಹೋದದ್ದು ಶರಭಯ್ಯನ ಕಣ್ಣಿನಲ್ಲಿ ಮೆಣಸಿನಕಾಯಿ ಮುರಿದಂತಾಯಿತು. ಆಲೋಚನೆ ಮಾಡಿ ಒಂದು ಹುನ್ನಾರು ಮಾಡಿದ.

ಆ ದಿನಗಳಲ್ಲಿ ಕೆಲವರು ಶಿವಾಚಾರ್ಯರು ಹೈದರಾಬಾದು ರಾಜ್ಯದಿಂದ ದೇಶ ಸಂಚಾರಾರ್ಥವಾಗಿ ಈ ಪ್ರಾಂತ್ಯಕ್ಕೆ ಆಗಮಿಸಿದರು. ಮತ್ತೆರಡು ತಿಂಗಳಿಗೆ ಪೀಠ ದೊಂದಿಗೆ, ಪ್ರಭಾವಳಿಗಳೊಂದಿಗೆ, ಡಮರುಗಳೊಂದಿಗೆ ದೊಡ್ಡ ಪ್ರಳಯದಂತೆ ಬಂದು ಇಲ್ಲಿ ಇಳಿದರು. ಪ್ರತಿದಿನ ಅರ್ಧರಾತ್ರಿ ಹೊತ್ತಿನಲ್ಲಿ ಶಿವಾರ್ಚನೆ ಮಾಡುತ್ತಿದ್ದರು. ಆ ಸಮಯದಲ್ಲಿ ಶಂಖಗಳೂ ಜಯಗಂಟೆಗಳೂ, ಚಂಡೆ ಮದ್ದಳೆಗಳೂ, ಇವುಗಳ ಧ್ವನಿ ಪಾಮರರ ಹೃದಯಗಳಲ್ಲಿ ಭಯೋತ್ಪಾತವನ್ನುಂಟುಮಾಡುತ್ತಿತ್ತು. ಈ ಅಟ್ಟಹಾಸಕ್ಕೆ ವೈಷ್ಣವ ದೀಕ್ಷೆ ಸ್ವೀಕರಿಸಿದ ನಾಯುಡುಗಳು ಒಬ್ಬೊಬ್ಬರಾಗಿ ನಾಮಗಳಿಗೆ ನಾಮ ಹಾಕಿ ವಿಭೂತಿ, ರುದ್ರಾಕ್ಷಿ ಧಾರಣೆ ಮಾಡತೊಡಗಿದರು. ಬಂದ ಹತ್ತನೆಯ ದಿವಸ ಶಿವಾಚಾರ್ಯರು ಬೆಂಕಿಹೊಂಡ ಹಾಯಲು ದೊಡ್ಡ ಸನ್ನಾಹ ನಡೆಸಿದರು. ಸಾರಥಿ ನಾಯುಡುವಿಗೆ ಶಿವಮತದತ್ತ ಸೆಳೆತವುಂಟಾಯಿತು. ಹೊಂಡ ಹಾಯುವುದನ್ನು ನೋಡಿದ ಬಳಿಕ ಸಾರಥಿ ನಾಯುಡು ಸೈದ್ಧಾಂತಿಕವಾಗಿ ಶೈವಮತ ಸ್ವೀಕರಿಸುವನೆಂದು ಎಲ್ಲರೂ ನಂಬಿದ್ದರು. ಆದುದರಿಂದಲೇ ಶೈವರ ಮುಂದಾಳು ಗಳೆಲ್ಲ ವಾದ್ಯಗಳೊಂದಿಗೆ ಮನೆಗೆ ಹೋಗಿ ಬಹುವಾಗಿ ಕೊಂಡಾಡಿ ಉತ್ಸವವನ್ನು ನೋಡಲು ಬಂದುತೀರಬೇಕೆಂದು ಆಹ್ವಾನಿಸಿದರು.

ಈ ಮಾತು ಕೇಳಿದ ಆಚಾರ್ಯರು ಏನೆಂದರೆಂದರೆ ''ರಾಮನ ಆಜ್ಞೆ ಹೇಗಿದ್ದರೆ ಹಾಗೆ ನಡೆಯುವುದು. ವೈಷ್ಣವನು ಶೈವನಾಗಬೇಕೆಂದು ಬಯಸಿದರೆ ಅಡ್ಡಿಪಡಿಸುವು ದೆಂತಹ ಕಾರ್ಯ ? ಅಲ್ಲದೆ ಕಾಶಿಯಲ್ಲಿ ಮರಣಿಸಿದವನಿಗೆ ಶಿವನೆ ಅಲ್ಲವೆ ತಾರಕ ಮಂತ್ರೋಪದೇಶ ಮಾಡುವವನು. ಆದುದರಿಂದ ಈ ಜನ್ಮದಲ್ಲಿ ಪರಮಶಿವ ನಾದವನಿಗೆ ಬರುವ ಜನ್ಮದಲ್ಲಿ ತಾರಕಮಂತ್ರೋಪದೇಶ ಮಾಡಿ ಮುಕ್ತಿಕೊಡದೆ ಹೋಗುತ್ತಾನೆಯೆ ? ಯಾವ ಮತವಾದರೂ ದಾಸತ್ವ ಉಳ್ಳವನಿಗೆ ಮಾರ್ಗವುಂಟು. ಅದಿಲ್ಲದಿದ್ದರೆ ವೈಷ್ಣವನಾದರೂ ಪ್ರಯೋಜನವಿಲ್ಲ'' ಆಚಾರ್ಯರ ಉದಾಸೀನತೆ ಸಾತಾನಿಗಳಿಗೆ ಕೈ ಮುರಿದುಕೊಂಡಂತಿತ್ತು.

''ಈ ಬ್ರಾಹ್ಮಣನಿಗೆ ವೈಷ್ಣವಾಭಿಮಾನ ಕಡಿಮೆ. ಆದುದರಿಂದ ನಾವು ವಿಜೃಂಭಿಸದೆ ಹೋದರೆ ವೈಷ್ಣವಮತ ಪ್ರಭಾವಕ್ಕೆ ಕುಂದುಂಟಾಗುವುದು'' ಎಂದು ಮನವಾಳ್ಳಯ್ಯ ಉತ್ಸಾಹಿತನಾಗಿ ಶಿವಾಚಾರಿಗಳು ಹೊಂಡ ಹಾಯುವ ದಿನದ ರಾತ್ರಿ ಎರಡು ಜಾಮ ವಿರುವಾಗ್ಗೆ ಗುಡಿಯ ಎದುರಿನ ಅರಳಿಮರದ ಕೆಳಗೆ ದೊಡ್ಡ ಮೀಟಿಂಗು ನಡೆಸಿದ. ಸಾತಾನರು ನಾಯುಡುಗಳು ನೂರು ಮಂದಿ ಜಮೆಯಾದರು. ಅವರಲ್ಲಿನ ಯೋಧರು ಅಂಗಡಿಯಲ್ಲಿ ರಹಸ್ಯ ಸೇವೆ ಸೇವಿಸಿ ಒಬ್ಬೊಬ್ಬರೆ ಇಳಿದರು. ಅಷ್ಟರಲ್ಲಿ ಮನವಾಳ್ಳಯ್ಯ ಮರದ ರಚ್ಚೆಗಲ್ಲಿನ ಮೇಲೆ ಬಾಗಿ ನಿಂತು, ಗಡ್ಡದಡಿ ಒಂದು ದೊಣ್ಣೆಯನ್ನು ಆಸರೆ ಕೊಟ್ಟು ಏನೆಂದು ನುಡಿದ ? ''ಪರಮ ಭಾಗವತೋತ್ತಮರೇ, ಕೇಳಿದಿರಾ ? ಈ ಶೈವರ ರಾಕ್ಷಸ ಮಾಯೆಯಲ್ಲಿ ಬಿದ್ದು, ಆಗಲೇ ಬಹಳ ಮಂದಿ ನಾಯುಡುಗಳು ವೈಕುಂಠಕ್ಕೆ ಹೋಗುವ ರಾಜಮಾರ್ಗವಾದ ವೈಷ್ಣವ ಮತವನ್ನು ಬಿಟ್ಟು ಅಂಧಕಾರ ಬಂಧುರವಾದ ಶೈವಮತದಲ್ಲಿ ಬಿದ್ದುಹೋದರು. ನಮ್ಮ ಒಬ್ಬ ಪರಮ ಮಿತ್ರನೂ ಭಕ್ತಾಗ್ರೇಸರನೂ ಆದ ಸಾರಥಿ ನಾಯುಡುವನ್ನು ಮರುಳು ಮಾಡಿ ತಮ್ಮಲ್ಲಿ ಸೇರಿಸಿ ಕೊಳ್ಳಲು ವಿಪುಲ ಪ್ರಯತ್ನ ಮಾಡುತ್ತಿದ್ದಾರೆ. ಇಂದು ರಾತ್ರಿ ಅವನು ಹೋಗಿ ಶೈವರ ಘೋರ

ಕೃತ್ಯಗಳನ್ನು ನೋಡಿದನೊ, ಮತ್ತೆ ನಮ್ಮವನಾಗುವುದಿಲ್ಲ. ಆದುದರಿಂದ ಅವನನ್ನು ರಕ್ಷಿಸಿ, ಶ್ರೀ ಮಹಾವಿಷ್ಣುವಿನ ಮಹಿಮೆ ಪ್ರಜ್ವಲಗೊಳಿಸುವ ಸಾಧನ ಯಾವುದೆಂದು ತಾವು ಎಲ್ಲ ಆಲೋಚಿಸಿರಿ. ಇಂದು ರಾತ್ರಿ ಸಾರಥಿ ನಾಯುಡು ಅಲ್ಲಿಗೆ ಹೋಗದಿರುವ ಉಪಾಯವನ್ನು ಕಲ್ಪಿಸುವುದು ನಮ್ಮ ಕರ್ತವ್ಯವೆಂಬುದು ನನ್ನ ಅಭಿಪ್ರಾಯ.''

ಹೇಗೆಂದರೆ, ಹೇಗೆಂದು ನಾಲ್ಕು ಮಂದಿ ಚಿಂತಿಸುತ್ತಿರಲು, ರಾಮಾನುಜಯ್ಯನೆದ್ದು ನಿಂತು ಹೇಳಿದ, ''ಇದಕಿಷ್ಟು ಚಿಂತೆ ಏಕೆ ? ಏನು ? ಅವರು ಮಾಡುವ ಕೆಲಸವನ್ನು ನಾವೇಕೆ ಮಾಡಬಾರದು ? ರಾಮಭಕ್ತನಾದ ಶಿವನಿಗೇ ಅಷ್ಟು ಮಹಿಮೆ ಇರುವಾಗ ಸರ್ವೇಶ್ವರನಾದ ಆ ರಾಮನಿಗೆ ಅದಕ್ಕಿಂತಲೂ ಸಾವಿರಪಟ್ಟು ಮಹಿಮೆ ಇರದೆ ಹೋದೀತೆ ? ಆದುದರಿಂದ ನನ್ನ ಸಲಹೆ ಏನೆಂದರೆ, ಶ್ರೀಮದ್ಗರುಡಾಳ್ವಾರರ ಅವತಾರವಾದ ಮನವಾಳ್ಳಯ್ಯ ತಾಮ್ರಧ್ವಜವನ್ನು ಕೈಯಲ್ಲಿ ಹಿಡಿದು ನಾಲಾಯಿರಂ ಪಠಿಸುತ್ತ ಹೊಂಡ ಹಾದರೆ ಆಯಿತು. ಶಿವ ವೈಷ್ಣವ ಮತಗಳ ತಾರತಮ್ಯ ಲೋಕಕ್ಕೆ ವ್ಯಕ್ತಪಡಿಸಲೆಂದು ಶಿವಾಚಾರ್ಯರ ಹೊಂಡಕ್ಕಿಂತಲೂ ಮಾರಿನಷ್ಟು ದೊಡ್ಡದು ಮಾಡಿ, ಈ ಮರದಡಿಯೆ ಈ ಕ್ಷಣದಲ್ಲೆ ಬ್ರಹ್ಮಾಂಡವಾದ ಹೊಂಡವನ್ನು ಅಣಿ ಮಾಡುತ್ತೇನೆ. ಇದಕ್ಕೆ ಅಭ್ಯಂತರ ನುಡಿಯುವವನನ್ನು ವೈಷ್ಣವನೆಂದು ಭಾವಿಸುವುದಿಲ್ಲ.''

ಕತ್ತಲಲ್ಲಿ ಯಾರಿಗೂ ಕಂಡುಬರಲಿಲ್ಲವಾದರೂ ಮನವಾಳ್ಳಯ್ಯ ಬಾಯಿ ತೆರೆದಿದ್ದ. ನಾಲ್ಕು ಜನ 'ಚೆನ್ನಾಗಿದೆ, ಚೆನ್ನಾಗಿದೆ' ಅಂದಾಗ ಅವನ ಪ್ರಾಣ ಹಾರಿದಂತಾಗಿತ್ತು. ಒಂದು ನಿಮಿಷ ಯೋಚಿಸಿ ಅಂದ – ''ಅಣ್ಣಂದಿರೇ, ತಮ್ಮಂದಿರೇ, ಪರಮ ಭಾಗವತೋತ್ತಮರೇ, ರಾಮಾನುಜಯ್ಯ ನನ್ನನ್ನು ಆಕ್ಷೇಪಣೆ ಮಾಡುತ್ತಿದ್ದಾನೆ. ನಾನು ಪಡಬೇಕಾದದ್ದೆ. ಈ ಶರಭಯ್ಯನೇ ಬಂದು ತಾನು ವೃಷಭಾವತಾರವೆಂದು ಗರ್ವಿಸಿ ಬೀಗುತ್ತಿದ್ದಾನಲ್ಲವೆ. ನಾವು ಏಟಿಗೆ ಎದಿರೇಟು ಕೊಡೋಣವೆಂದು ನಾನು ಕೇವಲ ವೈಷ್ಣವಾಭಿಮಾನದಿಂದ ಗರುಡ ವೇಷ ಹಾಕಿದೆ. ಆದರೆ ಇಷ್ಟು ತೂಕದ ಶರೀರದ ನಾನೆಂದೂ ಗರುಡಾಳ್ವಾರ ನಾದುದಿಲ್ಲ. ಆ ಮಾತು ನನಗೆ ಗೊತ್ತಿಲ್ಲವೆ ? ಪ್ರಾಜ್ಞರಾದ ತಮಗೆ ತಿಳಿಯದೆ ? ರಾಮಾನುಜಯ್ಯನಾದರೆ ಚುರುಕಾಗಿ ಹದ್ದಿನಂತೆ ಇದ್ದಾನಾದ್ದರಿಂದ ಖಂಡಿತ ಅವನೆ ಗರುಡಾಳ್ವಾರರ ಅವತಾರ. ಅವನಿಗೇ ಹೊಂಡ ಹಾಯಲು ಹೇಳಿರಿ. ನಾನೇನಾದರೂ ಬೆಂಕಿಯಲ್ಲಿ ಕಾಲಿಟ್ಟೆನಾದರೆ ಗಜದಾಳಕ್ಕೆ ಇಳಿದುಹೋಗಿ ಸಾಯುತ್ತೇನೆ. ರಾಮಾನುಜಯ್ಯ ಹಗುರವಾಗಿದ್ದಾನೆ. ತಾಕಿಯೂ ತಾಕದಂತೆ ಚಕಚಕ ಹೆಜ್ಜೆ ಹಾಕಿ ನಡೆಯುತ್ತಾನೆ. ಅಣ್ಣಂದಿರಾ ನ್ಯಾಯವಾಗಿ ಯೋಚಿಸಿ'' ಅನ್ನುತ್ತಲೆ ರಾಮಾನುಜಯ್ಯ ಮೆಲ್ಲಮೆಲ್ಲನೆ ಜಾರಿಕೊಂಡ.

ರಾಮಿ ನಾಯುಡು ಕೂಡಲೆ ಹೇಳಿದ – ''ರಾಮಸ್ವಾಮಿಗೆ ಮಹಿಮೆ ಇದೆಯೊ, ಇಲ್ಲವೊ ? ಇದೆಯಾ, ಈ ವೇಷ ಬಿಟ್ಟು ನೇರ ಹೊಂಡ ತುಳಿ.'' ಆ ಮಾತು ಕೇಳಿ, ಮನವಾಳ್ಳಯ್ಯನ ಮುಖ ಬಿಳುಚಿಕೊಂಡಿತು. ರಾಮಾನುಜಯ್ಯನಂತೆ ಗುಂಪಿನಲ್ಲಿ ನುಗ್ಗಿ ಮಾಯವಾಗೋಣವೆಂದರೆ ಇರುವೆ, ಸೊಳ್ಳೆಯೂ ಅಲ್ಲ, ಹತ್ತಿಪ್ಪತ್ತು ಮಣಗಳ ದೇಹ. ''ಹಾ, ದೈವವೇ, ನಾನೊಂದರೆ ಘಳಿಗೆ ಗರುಡಾಳ್ವಾರನೇ ಆದರೆ ಎಲ್ಲಿಗಾದರೂ ಹಾರಿ ಪ್ರಾಣವನ್ನು ಬಚ್ಚಿಟ್ಟುಕೊಳ್ಳುತ್ತಿದ್ದೆನಲ್ಲ'' ಎಂದು ಅಂದುಕೊಂಡ.

''ಏನು ಜಾರಿಕೊಳ್ಳುತ್ತೀಯಾ ?'' ರಾಮಿ ನಾಯುಡು ಚುಚ್ಚತೊಡಗಿದ. 'ಅಲ್ಲಾಂಡಂ ಬೆಲ್ಲಾಂಡಂ' ಎಂದು ಬೆಳಗಾಗುತ್ತಲೇ ಬಂದು ತುಂಬ ಕೂಗುತ್ತಿಯಲ್ಲ, ಆ ಮಾತುಗಳೆಲ್ಲ ನಮ್ಮಂತಹವರನ್ನು ಬೆದರಿಸಿ ಕಾಯಿ ಕಾಳು ಕಸಿದುಕೊಳ್ಳುವುದಕ್ಕೇನು ? ಅಂತಹ ಮಹಿಮೆ ಕಾಸಿನಷ್ಟಾದರೂ ಇದೆಯೆ ?''

ಮನವಾಳ್ಳಯ್ಯ ನಿಟ್ಟುಸಿರಿಟ್ಟು ರಾಮಾನುಜರನ್ನು ಸ್ಮರಿಸಿ ಹೀಗೆ ಹೇಳಿದ – ರಾಮಿ ನಾಯುಡಣ್ಣಾ, ನಾನು ನೀನು ಚಿರಕಾಲದ ಮಿತ್ರರು. ನೀನು ಗೌರ್ನಮೆಂಟು ಪರವಾಗಿ ಪಟೇಲನಾಗಿ ಬಹಳ ಕಾಲದಿಂದ ಅಧಿಕಾರ ಚಲಾಯಿಸುತ್ತಿರುವೆ. ಯುಕ್ತಾಯುಕ್ತ ಅರಿತ ಮನುಷ್ಯ. ಹೌದು, ವೈಷ್ಣವ ಮತದ ಆಧಿಕ್ಯತೆಯನ್ನು ತೋರಿಸಬೇಕೆಂದರೆ ಆ ಶರಭಯ್ಯನು ಮಾಡುವ ನೀಚ ಕೆಲಸವನ್ನೆ ನನ್ನನ್ನೂ ಮಾಡೆಂದು ಹೇಳುತ್ತಿರುವುದು ? 'ಪೃಥಿವ್ಯಾಪಸ್ತೇಜೋವಾಯುರಾಕಾಶಾತ್' ಅಂದಿದ್ದಾರೆ. ವಿಷ್ಣು ಭಕ್ತನಾದವನಿಗೆ ಉತ್ತಮೋತ್ತಮ ಕರ್ತವ್ಯ ಪೃಥಿವೀ ಅಂದರೆ ಭೂಮಿಯ ಮೇಲೆ ನಡೆಯುವುದೆ. ವೈಷ್ಣವನೆಂಬುವವನು ಪಂಚಭೂತಗಳಲ್ಲಿ ಮತ್ತೊಂದು ಭೂತದ ಮೇಲೆ ಹೆಜ್ಜೆಹಾಕಿ ನಡೆಯಲೇಬಾರದು. ಅದಕ್ಕಿಂತಲು ಒಂದು ವೀಸೆಯಷ್ಟು ಕಡಿಮೆ ಆಪಃ ಅಂದಿರುವರು. ಅಂದರೆ ನೀರಿನ ಮೇಲೆ ಓಡುವುದು ಒಂದು ರೀತಿಯ ಕರ್ತವ್ಯ ಆಗಬಹುದು. ಬೆಂಕಿ ತುಳಿಯುವುದು ಅಧಮಾಧಮವಾದುದರಿಂದ ನೀವು ಯಾವತ್ತೂ ಜನ ಈಗಲೇ ನನ್ನ ಹಿಂದೆ ಬನ್ನಿರಿ. ಈ ನಿಶೀಥ ಸಮಯದಲ್ಲಿ ಶ್ರೀ ಮಹಾವಿಷ್ಣುವಿನ ನಾಮಸ್ಮರಣೆ ಮಾಡಿ ಲೋಪವಿಲ್ಲದೆ ಜಲಗುಂಡದಲ್ಲಿ ಓಡುತ್ತೇನೆ. ಆಗ ನಿಮಗೆ, ನಿಮಗೇ ನನ್ನ ಮಹಿಮೆ ತಿಳಿಯಬಲ್ಲದು.''

ಹತ್ತಿರ ಬಂದ ರಾಮಿ ನಾಯುಡು ಮನವಾಳ್ಳಯ್ಯನ ಕೈ ಹಿಡಿದು ಗಟ್ಟಿಯಾಗಿ ಅದುಮುತ್ತ ಹೇಳಿದ – ''ಕೇಳಿದೆಯಾ ವೈಷ್ಣವನೆ, ನಮ್ಮ ಬೀಗನಾದ ಸಾರಥಿ ನಾಯುಡು ಜಂಗಮರ ಪಾಳ್ಯದಲ್ಲಿ ಸೇರಿಹೋದರೆ ದ್ವಾದಶಿ ಪುಳಿಯೋಗರೆ ಸಕ್ಕರೆ ಪೊಂಗಲು ಇಲ್ಲದಾಗುತ್ತದೆ. ಈ ಮಾತು ನಿನಗೂ ಗೊತ್ತು. ನೀನು ಜಲಗುಂಡದಲ್ಲಿ ಸೋರೆ ಬುರುಡೆಯಂತೆ ತೇಲಿ ಈಜಾಡಿದರೆ ನಿನ್ನೆ ಮಹಿಮೆಯನ್ನು ಅವನು ಒಪ್ಪುತ್ತಾನೇನು ? ಹುಚ್ಚು ಕಚ್ಚುವ ಮಾತುಗಳನ್ನು ಬಿಟ್ಟು, ನಮ್ಮವನು ಎರಡು ಕಣ್ಣುಗಳಿಂದ ನೋಡುತ್ತಿರುವಾಗ ಅಲ್ಲಾಂಡಂ ಬೆಲ್ಲಾಂಡಂ ಅನ್ನುತ್ತ ಕಿಚ್ಚು ತುಳಿ.''

''ಆಯಿತು ಮಿತ್ರ ! ನಿನ್ನ ಅಭಿಪ್ರಾಯ ಆ ಪ್ರಕಾರವೆ ಆದುದಾದರೆ ಹಾಗೆಯೆ ಮಾಡಿ. ಶ್ರೀ ಮಹಾವಿಷ್ಣುವಿನ ಮಹಿಮೆ ನಿಲ್ಲಿಸಲೆಂದು ಬೆಂಕಿ ತುಳಿಯುತ್ತೀನಾ, ತುಳಿದು ನೋಡುವೆನಾ. ಈಗ ರಾತ್ರಿ ಬಹಳ ಹೊತ್ತಾಗಿದೆ. ಮನೆಗೆ ಹೋಗಿ ಮಲಗೋಣ. ನಾಳೆ ಈ ಹೊತ್ತಿಗೆ, ಇದೇ ಸ್ಥಳದಲ್ಲೇ ಬ್ರಹ್ಮಾಂಡವಾದ ಹೊಂಡ ತೆಗೆದು, ದಗದಗಿಸುವ ಆ ಹೊಂಡ ಹಾದು ವೈಷ್ಣವಮತ ಪ್ರಭಾವವನ್ನು ಕಾಣಿಸುತ್ತೇನೆ. ಆಗ ಆ ಗರುಡಾಳ್ವಾರರೇ ನನ್ನನ್ನು ಆವಾಹಿಸಿ ಅಂತಹ ಹೊಂಡವನ್ನು ಚಂಗನೆ ಒಂದೇ ದಾಟಿಗೆ ದಾಟಿಸಿಬಿಡುತ್ತಾರೆ.''

''ಆ ಬೇಳೆ ಬೇಯದು. ನಮ್ಮವನು ಈ ರಾತ್ರಿ ಜಂಗಮರ ಪಾಳ್ಯದಲ್ಲಿ ಸೇರಿಬಿಟ್ಟರೆ, ನೀನು ನಾಳೆ ದಾಟಿದರೇನು, ದಾಟದಿದ್ದರೇನು. ಆ ದಾಟುವುದೇನೊ ಇವತ್ತು ಅವರ ಗುಂಡದಲ್ಲೆ ದಾಟು. ಏಳಿರೋ, ಈ ವೈಷ್ಣವನನ್ನು ಹೊತ್ತುಕೊಂಡು ಹೋಗಿ ಹೊಂಡ ತುಳಿಸೋಣ'' ಎಂದು ರಾಮಿ ನಾಯುಡು ಅನ್ನುವಷ್ಟರಲ್ಲಿ ನಾಲ್ವರು ಬಣಜಿಗರು ಮನವಾಳ್ಳಯ್ಯನ ತೋಳುಗಳನ್ನು ಹಿಡಿದು ರಚ್ಚೆಕಲ್ಲಿನ ಮೇಲಿನಿಂದ ಕೆಳಕ್ಕೆ ಇಳಿಸಿದರು. ಮೀರಿ ಬಂದಿತೆಂದು ಮನವಾಳ್ಳಯ್ಯ ಒಂದು ಹುನ್ನಾರು ಹೂಡಿದ. ''ನಿಲ್ಲಿ. ಹೊಂಡ ತುಳಿಯುವಾಗ ಅದಕ್ಕೆ ಬೇಕಾದಂತಹ ಪರಿಕರಗಳನ್ನು ಹೊಂದಿಸಿ ಕೊಳ್ಳದೆ ಉಟ್ಟಬಟ್ಟೆಯೊಂದಿಗೆ ಹೊಂಡಕ್ಕೆಸೆದು ಮೈ ಸುಟ್ಟುಬಿಡುವಿರೇನು ? ಆ ಶಿವಾಚಾರಿಗಳು ವೀರಭದ್ರನ ವಿಗ್ರಹವನ್ನು ಕೈಯಲ್ಲಿ ಹಿಡಿದು ಮಂತ್ರ ಪಠಿಸುತ್ತ, ಶಂಖಧ್ವನಿಗೆ ವೀರಾವೇಶ ಉಂಟಾಗಿ ಹೊಂಡ ಹಾಯುವರು. ಅದರಂತೆ ಶ್ರೀ ರಾಮಸ್ವಾಮಿಯವರ ಉತ್ಸವ ಮೂರ್ತಿಯೊಂದನ್ನು ನನ್ನ ನೆತ್ತಿಯ ಮೇಲೆ ಕುಕ್ಕದಿದ್ದರೆ ಹೇಗೆ ಸಾಯುವುದು ? ಗರುಡಾಳ್ವಾರರು ಸದಾ ಪೆರುಮಾಳಾ ಳ್ವಾರರನ್ನು ಬೆನ್ನಿನಲ್ಲಿ ಹೊತ್ತು ಹೋಗುತ್ತಾರೆಯೆ ಹೊರತು ಸುಮ್ಮನೆ ರೆಕ್ಕೆ ಬಡಿಯುವುದಿಲ್ಲ. ನಿಮಗೆ ಗೊತ್ತಿಲ್ಲವೆ ?'' ಅಂದಾಗ, ಆ ಮಾತು ನಿಜವೊ. ಸಾರಥಿ ನಾಯುಡು ಗರ್ವ ಪಡುತ್ತಾನೆ. ಅಯ್ಯನವರನ್ನ ಕರೆದುಕೊಂಡು ಬನ್ನಿ ಅಂದರು. ನಾಲ್ಕು ಮಂದಿ ಬಣಜಿಗರು ಪಕ್ಕದಲ್ಲಿದ್ದ ಅಯ್ಯನವರ ಮನೆಗೆ ಹೋಗಿ ಮೇಲು ಹೊದಿಕೆಯ ಬಟ್ಟೆಯೂ ಇಲ್ಲದ ಅವರನ್ನು ಹೊತ್ತು ತಂದು ಅರಳಿಮರದಡಿ ರಚ್ಚೆಗಲ್ಲಿನ ಮೇಲೆ ಕೂರಿಸಿದರು. ಈ ಗಡಿಬಿಡಿ ಕಂಡ ಕೃಷ್ಣಮಾಚಾರ್ಯರು ಅಟ್ಟ ಹತ್ತಿ ಅಡಗಿಕೊಂಡರು.

ಅತಿ ವಿನಯವನ್ನು ನಟಿಸುತ್ತ ಮನವಾಳ್ಳಯ್ಯ ರಂಗಾಚಾರ್ಯರಿಗೆ ಪ್ರಸ್ತುತಾಂಶವನ್ನು ಬಿನ್ನವಿಸಿ, ಉತ್ಸವ ವಿಗ್ರಹವನ್ನು ಕೊಡಿರೆಂದು ಬೇಡಿದನು. ರಂಗಾಚಾರ್ಯರು ''ಅರೇ ಮೂಢರೇ ನಿಮ್ಮ ಬುದ್ಧಿ ಶುಭ್ರವಾಗಿ ತೊಳೆದು ಹೋಗಿದೆಯೇನ್ರೋ ? ಈ ಹೊಂಡ ಹಾಯುವುದೆಂಬುದು ನಿಂದ್ಯವಾದ ತಾಮಸ ವ್ಯಾಪಾರ. ವೈಷ್ಣವಮತ ನಿಷಿದ್ಧ. ನಮ್ಮ ಗ್ರಂಥಗಳಲ್ಲೆಲ್ಲಿಯೂ ಈ ಪ್ರಕ್ರಿಯೆ ಇಲ್ಲ. ಹೊಂಡ ಹಾಯಲು ಒಂದು ವಿಧಿ, ಮಂತ್ರ ಇದ್ದು ಸತ್ತರಲ್ಲವೆ ?''

''ಅವರಿಗೇನು ಮಂತ್ರ ಇದ್ದದೇನು ? ಸುಮಕೆ ಮಾತುಗಳಾಡದೆ ಆ ವಿಗ್ರಹ ಯಾವುದದೊ ಸಾತಾನೀಗೆ ಕೊಡಿ'' ಎಂದು ರಾಮಿ ನಾಯುಡು ಹೇಳಿದ.

''ಛೀ, ಹೋಗಿರಯ್ಯ, ಮೂರ್ಖರೆ, ನಾನು ಕೊಡುವುದಿಲ್ಲ, ಉತ್ಸವ ವಿಗ್ರಹಗಳು ಶೂದ್ರರು ಮುಟ್ಟಿಕೊಳ್ಳುವಂತಹವಲ್ಲ, ಕಣ್ಣು ಹೋಗುತ್ತೆ'' ಎಂದು ರಂಗಾಚಾರ್ಯರು ಅಂದಾಗ, ಮನವಾಳ್ಳಯ್ಯ 'ಬದುಕಿದೆನೊ ದೇವರೆ' ಅಂದುಕೊಂಡು ಸಾರಥಿ ನಾಯುಡುವಿಗೆ ''ನೋಡಯ್ಯಾ ಗೆಳೆಯ, ಆ ಮಾತು ನಿಜವೆ. ನಾನು ಉತ್ಸವ ಮೂರ್ತಿಗಳನ್ನು ಮುಟ್ಟಬಾರದು. ಆದ್ದರಿಂದ ಈಗಿನ ಕರ್ತವ್ಯವೇನೆಂದರೆ ಆ ವಿಗ್ರಹವನ್ನು ಹಿಡಿದುಕೊಂಡು ಆಚಾರ್ಯರೆ ಹೊಂಡ ಹಾಯಬೇಕಿದೆ. ಆ ಹೆಚ್ಚುಗಾರಿಕೆ ಅನ್ನುವುದು ಅವರಿಗೇ ಇರಬೇಕಾದ್ದು'' ಅಂದ.

ಪಟೇಲ-ಮುದುಕ ''ವಿಗ್ರಹ ಹೊತ್ತು ಹೊಂಡ ತುಳಿಯೋದೇನು ? ಚಿಕ್ಕಯ್ಯನೋರನ್ನ ಕರೆತರುವ ಬನ್ನಿ'' ಅಂದ.

''ಅವನ ತಂಟೆಗೆ ಹೋಗಬೇಡಿ, ನನ್ನಪ್ಪದೀರ. ಉತ್ಸವ ವಿಗ್ರಹ ಹಿಡಿದು ನಾನೇ

ಹೊಂಡ ಹಾಯುತ್ತೇನೆ. ನಮ್ಮವನು ಪಟ್ಟಣಕ್ಕೆ ಹೋಗಿದ್ದಾನೆ. ಊರಿನಲ್ಲಿಲ್ಲ'' ಎಂದು ರಂಗಾಚಾರ್ಯರು ಅಂದರು.

''ಅಂದ ಮೇಲೆ ಏಳಪ್ಪ'' ಎಂದು ಮನವಾಳಯ್ಯ ಬೊಬ್ಬೆಯಿಟ್ಟ

ಅಷ್ಟರಲ್ಲಿ ಆ ಅರಳಿಮರದ ಮರೆಯಲ್ಲಿ ಗುಪ್ಪೆಂದು ಬೆಳಕೊಂದು ಹುಟ್ಟಿತು. ಎಲ್ಲರೂ ಭೀತಿಗೊಂಡರು. ನಿಮಿಷಗಳು ಸರಿದವು. ಕೂಡಲೆ ಮರದ ಹಿಂದಿನಿಂದ ಒಂದು ಕೈಯಲ್ಲಿ ಕರದೀಪವನ್ನು, ಇನ್ನೊಂದು ಕೈಯಲ್ಲಿ ಹಿಡಿಗತ್ತಿ ಹಿಡಿದು ಗುಂಗುರು ಕೂದಲು ಗಾಳಿಗೆ ಹಾರಾಡುತ್ತಿರಲು ದಿಟ್ಟ ಹೆಜ್ಜೆ ಹಾಕುತ್ತ ಬಂದ ನಾಂಚಾರಮ್ಮ ಮಾವನವರ ಪಕ್ಕ ನಿಂತು, ಅವರ ತೋಳುಗಳನ್ನು ಹಿಡಿದಿದ್ದ ಬಣಜಿಗರತ್ತ ಕತ್ತಿಯ ಮೊನೆ ತೋರಿಸಿ, ''ದುಷ್ಟರೇ, ಈ ಪರಮ ಪವಿತ್ರರಾದ ಬ್ರಾಹ್ಮಣನನ್ನು ಬಿಡುವಿರಾ, ಇಲ್ಲ ಕತ್ತಿಗೆ ಬಲಿಕೊಡಲೆ ?'' ಎಂದು ಕೇಳಿದಳು.

ಹಠಾತ್ತನೆ ಕಾಣಿಸಿಕೊಂಡ ಈ ರೂಪವನ್ನು ಕಂಡು ಎಲ್ಲರ ಸ್ಥೈರ್ಯ ನೆಲಕಚ್ಚಿತು. ಆಚಾರ್ಯರನ್ನು ಹಿಡಿದು ನಿಂತಿದ್ದ ಬಣಜಿಗರು ಹೆದರಿ ದೂರ ಸರಿದರು. ಅಷ್ಟರಲ್ಲಿ ಆಕೆ ಕೈದೀಪವನ್ನು ರಚ್ಚೆಗಲ್ಲಿನ ಮೇಲಿಟ್ಟು, ''ನಿನಗೇನು ಬೇಕು'' ಎಂದು ಮನವಾಳಯ್ಯನನ್ನು ಕೇಳಿದಳು. ಮನವಾಳಯ್ಯ ಎರಡು ಹೆಜ್ಜೆ ಹಿಂದೆ ಸರಿದು ತನಗೇನೂ ಬೇಡವೆಂದ.

''ನಿನಗೆ ಉತ್ಸವ ಮೂರ್ತಿಗಳು ಬೇಕೆಂದೆಯಲ್ಲವೆ ?''

''ನನಗೇಕೆ ತಾಯಿ, ಅಪವಿತ್ರನು. ಅವುಗಳೆತ್ತರದ ಬಂಗಾರವನ್ನು ಕರಗಿಸಿ ಕೊಟ್ಟರೂ ನನಗೆ ಬೇಡ. ರಾಮಿ ನಾಯಿಡು ಏನೋ ಕೊಂಚ...''

ಆಕೆ ಅತ್ತಿಂದ ಇತ್ತ ತಿರುಗಿ, ರಾಮಿ ನಾಯುಡುವನ್ನು ನಿರಾಸಕ್ತಿಯಿಂದ ನೋಡುತ್ತ ''ನಿನಗೇನು ಬೇಕು ಪಟೇಲ ನಾಯುಡು ?'' ಎಂದು ಕೇಳಿದಳು.

ಮುಖ ಅಡಿಮಾಡಿ ರಾಮಿ ನಾಯುಡು ತನಗೇನೂ ಬೇಡವೆಂದು ಹೊರಕ್ಕೆ ಅಂದು, ''ಹೆಂಗಸಿನೊಂದಿಗೆ ಯಾರು ಮಾತಾಡಬೇಕಿದೆ'' ಎಂದು ಗೊಣಗಿಕೊಂಡ. ರಾಮಿ ನಾಯುಡುವಿನ ಹೆಂಡತಿ ಗಯ್ಯಾಳಿ.

**ನಾಂಚಾರಮ್ಮ** : ಯಾರಿಗೂ ಏನೂ ಬೇಡದಿದ್ದರೆ ಈ ಮುದಿ ಬ್ರಾಹ್ಮಣನನ್ನು ಮೈಮೇಲೆ ಬಟ್ಟೆಯೂ ಇಲ್ಲದೆ ಮಲಗಿದ್ದ ಮಂಚದ ಮೇಲಿಂದ ಎಳೆದುಕೊಂಡು ಬಂದಿರೇಕೆ ? ಯಾರೂ ಮಾತಾಡುತ್ತಿಲ್ಲವೇಕೆ ?

ರಾಮಿ ನಾಯುಡು ಕೊಂಚ ಧೈರ್ಯ ತಂದುಕೊಂಡು ''ಹೆಂಗಸಿನೊಂದಿಗೆ ಮಾತೇನು. ಈ ರಾತ್ರಿ ಆ ಜಂಗಮರು ಶಿವನ ಹೆಸರು ಹೇಳಿ ಹೊಂಡ ಹಾಯುವರಲ್ಲ, ನಮ್ಮ ರಾಮಸ್ವಾಮಿಯವರ ಹೆಸರು ಹೇಳಿ ನಾವೂ ಸಹ ಹೊಂಡ ಹಾಯದಿದ್ದರೆ ಮನೆಯ ದಾರು ಮುರಿದು ಬೀಳದೆ ?'' ಅಂದ.

**ನಾಂಚಾರಮ್ಮ**: ನೀನೇ ಹಾಯಬಾರದೆ ?

**ರಾಮಿ ನಾಯುಡು (ಪಟೇಲ)** : ನನಗೆ ಮಂತ್ರ ಮಾಯೆ ತಿಳಿಯದೆ! ಆದುದರಿಂದಲೆ ಹಾಯಿ ಎಂದೆ.

**ನಾಂಚಾರಮ್ಮ**: (ಮನವಾಳಯ್ಯನೊಂದಿಗೆ) ನೀನೇಕೆ ಹಾಯಬಾರದು ?

**ಮನವಾಳಯ್ಯ** : ಅಮ್ಮಾ, ಇವತ್ತು ಯಾವುದೂ ನನ್ನ ಪ್ರಾರಬ್ಧದಿಂದಾಗಿ ಈ ಮೀಟಿಂಗು ನಡೆಸಿದೆ. ಬುದ್ಧಿ ಹುಲ್ಲು ತಿಂದಿತು. ಇಗೊ ಕೆನ್ನೆಗೆ ಪಟಪಟ ಬಡಿದು ಕೊಳ್ಳುತ್ತೇನೆ. ತಾಯೇ ನನ್ನನ್ನು ಈಗ ಬಿಟ್ಟುಬಿಟ್ಟರೆ ಶ್ರೀರಂಗಕ್ಕೆ ಹೋಗಿ ಬಿಡುತ್ತೇನೆ. ಈ ನಾಲ್ಕು ಊರಿನ ಸರಹದ್ದಿನಲ್ಲಿ ನಾನು ಮತ್ತೆ ಕಾಣಿಸಿದ್ದೆ ಆದರೆ ನನ್ನ ನೆತ್ತಿ ಮೇಲೆ ಬರಸಿಡಿಲು ಬಡಿಯಲಿ.

**ನಾಂಚಾರಮ್ಮ**: ನಿನಗೆ ಬೆಟ್ಟದಷ್ಟು ಗುಂಡಿಗೆಯಿದೆ. (ರಾಮಿ ನಾಯುಡುವಿಗೆ) ಪಟೇಲ ನಾಯುಡೂ ನಿನ್ನ ಬೀಗ ಸಾರಥಿ ನಾಯುಡು ಬಿಟ್ಟು ಹೋದರೆ, ದ್ವಾದಶಿ, ದ್ವಾದಶಿಗೆ ಸಕ್ಕರೆ ಪೊಂಗಲು, ಪುಳಿಯೋಗರೆ ಇಲ್ಲದಾಗುವುದೆಂದಲ್ಲವೆ ನಿನ್ನ ದುಃಖ ?

**ಪಟೇಲ** : (ತಲೆಕೆರೆದುಕೊಳ್ಳುತ್ತ) ನನಗೊಬ್ಬನಿಗೇ ಅನ್ನುವ ಮಾತು ಏನಮ್ಮ. ಆ ರಾಮಸ್ವಾಮಿಗೆ ಮಾತ್ರ ಪುಳಿಯೋಗರೆಗೆ ಬರವಾಗದೆ ?

**ಮನವಾಳಯ್ಯ** : ಅಮ್ಮಾ, ಸಕ್ಕರೆ ಪೊಂಗಲು, ಮೊಸರನ್ನ ಅನ್ನುವುದು ಮುಖ್ಯವಲ್ಲ. ವೈಷ್ಣವೋತ್ಕರ್ಷದ ಮಹಿಮೆ ತೋರಿಸಿ ಉದ್ಧರಿಸಬೇಕು. ಅದು ಕರ್ತವ್ಯ.

**ನಾಂಚಾರಮ್ಮ** : ಆ ಉದ್ಧರಿಸುವುದೇನೊ ನೀನೆ ಮಾಡಬಾರದೇಕೆ ? ನಿನಗೆ

## ಸಾದರ ಸ್ವೀಕಾರ

**ತೀ. ನಂ. ಶ್ರೀಕಂಠಯ್ಯ** (ಜೀವನ, ವ್ಯಕ್ತಿತ್ವ, ಕೃತಿಗಳ ಸಮೀಕ್ಷೆ)
*ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ : ೧೫೨** **ಬೆಲೆ : ರೂ. ೮೦**

**ಭಾಸ ರಾಮಾಯಣ** (ಕಥನರೂಪಕ)
*ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ : ೭೬** **ಬೆಲೆ : ರೂ. ೪೫**

**ಭಿನ್ನ** (ಕವನ ಸಂಕಲನ) *ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ : ೮೮** **ಬೆಲೆ : ರೂ. ೫೦**

**ಅಭೀಪ್ಸೆ** (ಕವನ ಸಂಕಲನ) *ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ : ೭೮** **ಬೆಲೆ : ರೂ. ೪೦**

**ವಸಂತದ ಕನಸುಗಳು** (ಕವನ ಸಂಕಲನ)
*ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ : ೭೪** **ಬೆಲೆ : ರೂ. ೪೫**

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಅಕ್ಷಯ ಪ್ರಕಾಶನ**, ೧ ಎ ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

**ಹಿಡಿದ ಉಸಿರು** (ಕವನ ಸಂಕಲನ) *ಅಂಕುರ್ ಬೆಟಗೇರಿ*
**ಪುಟ : ೬೪** **ಬೆಲೆ : ರೂ. ೪೦**

**ಕಲ್ಲರಳಿ ಹೂವ್ವಂತೆ** (ಕೆ. ಟಿ. ಶಿವಪ್ರಕಾಶರ ಕೃತಿ, ಚಿಂತನೆ... )
*ಸಂ : ಕೆ. ಪುಟ್ಟಸ್ವಾಮಿ*
**ಪುಟ : ೧೭೪+೩೬** **ಬೆಲೆ : ರೂ. ೧೫೦**

**ಪಚ್ಚೆ ತೇರು** (ಕಿರುಗತೆಗಳು ಮಕ್ಕಳಿಗಾಗಿ) *ಆರ್. ನಿರ್ಮಲಾ*
**ಪುಟ : ೮೮** **ಬೆಲೆ : ರೂ. ೪೦**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಅಭಿನವ**, ೧೭/೮-೨ ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು-೫೬೦ ೦೪೦

**ಪಾರಿಜಾತ** (ಪ್ರಣಯ ಗೀತೆಗಳ ಸಂಕಲನ)
*ಸಂ : ಎಚ್. ಜಿ. ಸಣ್ಣಗುಡ್ಡಯ್ಯ*
**ಪುಟ : ೧೩೨** **ಬೆಲೆ : ರೂ. ೫೦**
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಕೆಬ್ಬೆನೆಲ** (ಕವನ ಸಂಕಲನ) *ಲಲಿತಾ ಸಿದ್ದಬಸವಯ್ಯ*
**ಪುಟ : ೮೪** **ಬೆಲೆ : ರೂ.೯೦**
**ಚಿನ್ಮಯಿ ಪ್ರಕಾಶನ**, ೫೨೧೭ 'ಗುರುಸನ್ನಿಧಿ' ೨ನೇ ಕ್ರಾಸ್, ಅಶೋಕನಗರ, ತುಮಕೂರು - ೫೭೨ ೧೦೨

**ಹಕ್ಕಿ ಮತ್ತು ಗಿಡುಗ** (ಕವನ ಸಂಕಲನ) *ಕೆ. ಉಷಾ ಪಿ. ರೈ*
**ಪುಟ : ೧೩೪** **ಬೆಲೆ : ರೂ. ೭೫**
**ಸಾತ್ವಿಕ ಪ್ರಕಾಶನ**, ೩೪೫, 'ಸಮೃದ್ಧ' , ಲಕ್ಷ್ಮಿ ರಸ್ತೆ, ೭ನೇ ಅಡ್ಡರಸ್ತೆ, ಶಾಂತಿನಗರ, ಬೆಂಗಳೂರು - ೫೬೦ ೦೨೭

**ಲಕ್ಷದ್ವೀಪಕ್ಕೆ ಲಗ್ಗೆ ಇಟ್ಟಾಗ** (ಪ್ರವಾಸ ಕಥನ) *ಕೆ. ಉಷಾ. ಪಿ. ರೈ*
**ಪುಟ : ೮೬** **ಬೆಲೆ : ರೂ. ೭೦**
**ಸಾಗರ್ ಪ್ರಕಾಶನ**, ನಂ. ೧೬೭೯, ೧೦ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಬನಶಂಕರಿ ಮೊದಲನೇ ಹಂತ, ೨ನೇ ಘಟ್ಟ, ಬೆಂಗಳೂರು - ೫೬೦ ೦೫೦

**ಅವರವರ ಸಾವು** (ಕವನ ಸಂಕಲನ) *ಕೆ. ಪಿ. ಮೃತ್ಯುಂಜಯ*
**ಪುಟ : ೧೨೭** **ಬೆಲೆ : ರೂ. ೭೫**
**ಅಮರ್ತ್ಯ ಪ್ರಕಾಶನ**, ೨೫/೨, ಅಫಿಷಿಯಲ್ ಕ್ವಾರ್ಟರ್ಸ್, ಸುಭಾಷ್‌ನಗರ, ಮಂಡ್ಯ - ೫೭೧ ೪೦೧

**ಮತ್ತೆ ಮತ್ತೆ** (ಕವಿತೆಗಳು) *ಎಚ್. ಎಸ್. ಶಿವಪ್ರಕಾಶ*
**ಪುಟ : ೧೦೦** **ಬೆಲೆ : ರೂ. ೬೦**
**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜು, ಕುವೆಂಪುನಗರ, ಬೆಂಗಳೂರು - ೫೬೦ ೦೨೯

**ಮಾತೃಪೂಜೆ** (ಕವನ ಸಂಕಲನ)
*ಅಟಲ ಬಿಹಾರಿ ವಾಜಪೇಯಿ*
*ಅನು : ಪಿ. ವಿಜಯಕುಮಾರ*
**ಪುಟ : ೮೨** **ಬೆಲೆ : ರೂ. ೭೫**
**ಕನ್ನಡ ಸಾಹಿತ್ಯ ಮಂಟಪ**, ೨೩೩, 'ಕವಿರಶ್ಮಿ', ರಾಮತೀರ್ಥನಗರ, ಬೆಳಗಾವಿ - ೫೯೦ ೦೧೫

**ಕಾಡಿನ ಕವಿ** (ಕುವೆಂಪು ಸಾಹಿತ್ಯ ಸಮೀಕ್ಷೆ)
*ಡಾ|| ಆರ್. ವಿ. ಭಂಡಾರಿ*
**ಪುಟ : ೫೬** **ಬೆಲೆ : ರೂ. ೧೦**
**ಚಿಂತನ**, ಶಿರಸಿ - ೫೮೧ ೪೦೧, ಉತ್ತರ ಕನ್ನಡ

**ಹನಿಮೂನ್** (ಮಿನಿಕಥಾ ಸಂಕಲನ)
*ಸಂ. ಕೋ.ಲ. ರಂಗನಾಥರಾವ್*
**ಪುಟ : ೬೪** **ಬೆಲೆ : ರೂ. ೨೫**
**ಗುರುರಾಜ ಪ್ರಕಾಶನ**, 'ಹರಿಕೃಪ' ೨೩೬, ೧೧ನೆಯ ಮುಖ್ಯರಸ್ತೆ, ಏಜಿಸ್ ಲೇಔಟ್, ಅರೆಹಳ್ಳಿ, ಸುಬ್ರಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

**ಆಹಲ್ಯೆ ಅಂತರಂಗ** (ಕಾದಂಬರಿ) *ಅಂಬ್ರಯ್ಯಮಠ*
**ಪುಟ : ೯೬** **ಬೆಲೆ : ರೂ. ೪೦**
**ಪುಸ್ತಕ ನಿಧಿ**, ಗಾವಳಿ, ಕುಂದಾಪುರ - ೫೭೬ ೨೧೦

ಉತ್ಸವ ವಿಗ್ರಹವೆಂಬುದೇತಕ್ಕೆ? ಆಕಾಶದಂತಹ ತಾಮ್ರ ಧ್ವಜ ಹೊತ್ತು ತಿರುಗಾಡುವಿಯಲ್ಲ, ಅದರಲ್ಲಿ ಅರೆಕಾಸಿನಷ್ಟೂ ಮಹತ್ತಿಲ್ಲವೆ?

ಮನವಾಳಯ್ಯ 'ಮತ್ತೆ ಮೊದಲಿಗೆ ಬಂದಿತು' ಎಂದು ಗೊಣಗಿಕೊಂಡು ಪ್ರಯಾಸದಿಂದ ಜನರ ನಡುವೆ ನುಗ್ಗಿ ಅಂತರ್ಧಾನನಾಗಿಬಿಟ್ಟ.

**ನಾಂಚಾರಮ್ಮ** : ರಾಮನೇ ಅಲ್ಲ, ಯಾವ ದೇವರ ಮೇಲಾದರೂ ನಿಜ ನಂಬಿಕೆಯಿದ್ದು ಅತ್ತರೆ ಒಂದು ಹೊಂಡವೇ ಅಲ್ಲ, ಎಲ್ಲ ಕಷ್ಟಗಳನ್ನೂ ನೀಗಿಕೊಳ್ಳಬಹುದು. ನಮ್ಮ ಮಾವನವರ ನಾಮಸ್ಮರಣೆ ಮಾಡುತ್ತ ಹೊಂಡ ಹಾಯುತ್ತೇನೆ. ನನ್ನ ಹಿಂದೆ ಬರಬಲ್ಲ ವೈಷ್ಣವರಾರಾದರೂ ಇದ್ದರೆ ಮುಂದೆ ಬನ್ನಿ.

ಯಾರೂ ಕದಲಲಿಲ್ಲ.

ನಾಂಚಾರಮ್ಮ ನೀರಸ ನಗೆ ನಕ್ಕು "ಮುದುಕನನ್ನು ಬೆಂಕಿಯಲ್ಲಿ ತಳ್ಳಿ, ಆಚೆಯಿಂದ ನೋಡಲು ನೀವೆಲ್ಲ ವೀರರೆ?" ಅಂದಳು.

ಯಾರೂ ಊಂ ಅಂದದ್ದಿಲ್ಲ.

ನಾಂಚಾರಮ್ಮ ಎಲ್ಲರನ್ನು ದಿಟ್ಟಿಸಿನೋಡಿ "ಪೀರುಸಾಬಿ ಇಲ್ಲಿಲ್ಲವೆ?" ಎಂದು ಕೇಳಿದಳು. ಕೂಡಲೆ ಪೀರುಸಾಬಿ ಎದುರಿಗೆ ಬಂದು "ಅಮ್ಮಾ ಇದೋ ದಾಸನು" ಎಂದು ಕೈಮುಗಿದು ನಿಂತ.

ಪೀರುಸಾಬಿ ಪಿಂಜಾರಿಯವನಾದರೂ ರಾಮಭಕ್ತನು. ಕೀರ್ತನೆಗಳನ್ನು ಹಾಡುತ್ತಾನೆ. ಹಠಯೋಗ ಅಭ್ಯಾಸ ಮಾಡುತ್ತಿದ್ದಾನೆ. ರಸ್ತೆ ಬದಿಯ ತೋಟದ ಮಠ ಇವನದೆ. ಇವನ ಶಿಷ್ಯ ಬಳಗ ದೊಡ್ಡದು.

"ಸಾಬೀ ನೀನು ಹೊಂಡ ಹಾಯಬಲ್ಲೆಯಾ?" ಎಂದು ನಾಂಚಾರಮ್ಮ ಕೇಳಿದಳು.

"ನಿಮ್ಮ ಅಪ್ಪಣೆಯಾದರೆ ಸಲೀಸಾಗಿ ಹಾಯುತ್ತೇನೆ ತಾಯಿ" ಎಂದು ಹೇಳಿದ.

**ನಾಂಚಾರಮ್ಮ**: ಮನವಾಳಯ್ಯನೆಲ್ಲಿ? ಗರುಡನ ಅವತಾರ ಅಂತರ್ಧಾನವಾಗಿ ಬಿಟ್ಟದೆ! ರಾಮಿ ನಾಯುಡು, ಪರಮ ಭಾಗವತೋತ್ತಮರಾಗಿದ್ದೂ ನೀವು ಯಾರೂ ಹೊಂಡ ಹಾಯಲಾರಿರಲ್ಲವೆ? ಅಂತಹ ಪರಿಸ್ಥಿತಿಯಲ್ಲಿ ಈ ಹಸಿತುರುಕನಿಗೆ ಹೊಂಡ ಹಾಯಲು ಭಗವಂತನು ಸಾಹಸ ಧೈರ್ಯಗಳನ್ನು ಕೊಟ್ಟಿರುವನಾದ್ದರಿಂದ ನಿಮ್ಮ ವೈಷ್ಣವಮತ ದೊಡ್ಡದೆ, ಇವನ ತುರುಕಮತ ದೊಡ್ಡದೆ? ರಾಮಿ ನಾಯುಡೂ ನಿಮ್ಮ ತಾಪತ್ರಯವೆಲ್ಲ ಈ ರಾತ್ರಿ ವೈಷ್ಣವರು ಶೈವರನ್ನು ಪರಾಭವ ಮಾಡಬೇಕೆಂದಲ್ಲವೆ? ಅದಕ್ಕೆ ಉಪಾಯವನ್ನು ಹೇಳುವೆ ಕೇಳಿರಿ. ಮತಗಳು ಸಾತ್ವಿಕ, ತಾಮಸ ಎಂದು ಎರಡು ವಿಧ. ಈ ಎರಡು ವಿಧದ ಜನರು ಶೈವರಲ್ಲೂ ವೈಷ್ಣವರಲ್ಲೂ ಇರುವರು. ಹೊಂಡ ಹಾಯುವುದು ಮುಂತಾದ ತಾಮಸ ಕೃತ್ಯವೆಸಗುವವರನ್ನು ಶೈವರಲ್ಲಿ ಶಿವಾಚಾರರು ಅನ್ನುವರು. ನಮ್ಮ ವೈಷ್ಣವರಲ್ಲಿ ಅಂತಹ ಕೃತ್ಯ ಮಾಡುವವರ ಶಾಖೆಯೂ ಉಂಟು. ಯಾರೆಂದು ನಿಮಗೆ ತಿಳಿದಿದೆಯೆ?

ಮನವಾಳಯ್ಯ ಗುಂಪಿನ ಇನ್ನೊಂದು ಅಂಚಿನಿಂದ ತನ್ನ ತಲೆಯನ್ನು ಮೇಲೆತ್ತಿ "ಯಾರಮ್ಮಾ ಅವರು" ಎಂದು ಅತ್ಯಾತುರದಿಂದ ಕೇಳಿದ.

ಪಟೇಲ ನಾಯುಡು "ಮತ್ತಾರು? ಸಾತಾನಿಗಳು" ಎನ್ನುತ್ತಲೆ ಮನವಾಳಯ್ಯನ ತಲೆ ಮತ್ತೆ ಜನರ ಮಧ್ಯೆ ಮಾಯವಾಯಿತು.

**ನಾಂಚಾರಮ್ಮ** : ಆ ವೈಷ್ಣವರು ಯಾರೆಂದೆ? ಮತ್ತಾರು? ತುರುಕರು! ಪೀರು ಅನ್ನುವುದು ಏನೆಂದುಕೊಂಡಿರುವಿರಿ? ಶ್ರೀ ಸ್ವಾಮಿಯವರ ತಿರುನಾಮವೆ. ಪಟ್ಟಣದಲ್ಲಿ ನಮ್ಮ ಮನೆ ಪಕ್ಕದಲ್ಲೆ ಒಬ್ಬ ಸಾತಾನಿ ಪೀರುಗಳನ್ನು ನಿಲ್ಲಿಸಿ ಹೊಂಡ ಹಾಯುತ್ತಿದ್ದ. ಪಟ್ಟಣದಲ್ಲಿ ಅದೆಷ್ಟೋ ಜನ ಹಿಂದೂಗಳೇ ಪೀರು ಪಂಜಾಗಳನ್ನು ಇಟ್ಟು ಹೊಂಡ ಹಾಯುವರು. ಆದುದರಿಂದ ಶ್ರೀ ರಾಮಸ್ವಾಮಿಯವರ ಹೆಸರು ಹೇಳಿ ಪೀರುಗಳನ್ನು ಕಟ್ಟಿಕೊಡುತ್ತೇನೆ. ಆ ಪೀರುಗಳ್ನು ಹಿಡಿದುಕೊಂಡು, ಪೀರುಸಾಬಿ ಹೊಂಡ ಹಾಯುತ್ತಾನೆ. ಪೀರು ಸಾಬಿಯ ಯೋಗ್ಯತೆ ನಿಮಗೆ ತಿಳಿದದ್ದೆ. ಅವನು ಕಬೀರದಾಸನಂತಹ ಭಕ್ತನಾದುದರಿಂದ ಭಯಬಿಟ್ಟು ಅವನ ಹಿಂದೆ ಹೋಗಿ ಗೆದ್ದು ಬನ್ನಿರಿ. ಆ ವೇಳೆಗೆ ಭಕ್ತಿ ನಿಲ್ಲುವುದೂ ಇಲ್ಲವೂ ಕೈಯ ದೊಣ್ಣೆಗಳನ್ನು ಮಾತ್ರ ಮರೆಯಬೇಡಿ.

ಆಕೆ ವಿರಮಿಸುವಷ್ಟರಲ್ಲಿ ಆ ಸಂದಣಿಯ ಮಧ್ಯದಿಂದ ಪಟಪಟ ಮಂತ್ರ ಪಠಿಸುತ್ತ ಜನರನ್ನು ಅತ್ತಿತ್ತ ಸರಿಸುತ್ತ ಬಂದ ಮನವಾಳಯ್ಯ ಸಾಷ್ಟಾಂಗ ನಮಸ್ಕಾರ ಮಾಡಿ "ಅಮ್ಮಾ, ನೀವು ಸಾಕ್ಷಾತ್ ಶ್ರೀ ಮಹಾಲಕ್ಷ್ಮಿ ಅವತಾರ. ವೈಷ್ಣವಮತವನ್ನು ನಿಲ್ಲಿಸಿದಿರಿ. ಮತಾನೇ ಅನ್ನುವ ಮಾತೇನು? ನಮ್ಮ ಪ್ರಾಣಗಳನ್ನೂ ಸಹ ಉಳಿಸಿದಿರಿ. ಇನ್ನು ನನ್ನ ವಿಜೃಂಭಣೆಯನ್ನು ಕಾಣಿರಿ" ಅಂದ.

ಮನವಾಳಯ್ಯ ದೊಡ್ಡ ಹಿಕ್ಮತ್‌ದಾರ. ಆ ರಾತ್ರಿ ವೈಷ್ಣವ ತಂತ್ರದ ನಂತರದ ಕಥೆಯನ್ನೆಲ್ಲ ಅವನೆ ನಡೆಸಿದ.

ಎಲ್ಲ ತಣ್ಣಗಾಗುತ್ತಲೆ ಅಟ್ಟದ ಮೇಲಿನಿಂದ ಕೃಷ್ಣಮಾಚಾರ್ಯರು ಇಳಿದರು. ಕಷ್ಟಸಾಧ್ಯವಾದದ್ದನ್ನು ಸಾಧಿಸಿದ ಸಂತೋಷದಲ್ಲಿ ನಾಂಚಾರಮ್ಮ ಮತ್ತೆ ಕರದೀಪವನ್ನು ಕೈಗೆತ್ತಿಕೊಂಡು ಸವಿಲಾಸದಿಂದ ಮನೆಗೆ ನಡೆದು ಬರುತ್ತಿರುವಾಗ, ಪತಿಯು ಎದುರಾದಾಗ ಪ್ರೇಮ ಪರಿಹಾಸ ತುಂಬಿದ ದೃಷ್ಟಿ ಬೀರಿದಳು. ಆ ನೋಟ ತನಗೆ ದೈವತ್ವವನ್ನು ನೀಡಿ ತನ್ನನ್ನು ಅವತಾರ ಪುರುಷನನ್ನಾಗಿ ಮಾಡಿತೆಂದು ಕೃಷ್ಣಮಾಚಾರಿ ಮರುದಿನ ನನ್ನೊಂದಿಗೆ ಹೇಳಿ, ಆ ಭಾವದಲ್ಲೆ ಶ್ಲೋಕ ರಚಿಸಿದ. ತಮ್ಮ ರಹಸ್ಯ ಶೃಂಗಾರ ಚೇಷ್ಟೆಗಳನ್ನು ಸ್ನೇಹಿತರೊಡನೆ ಹೇಳದಿದ್ದರೆ ಕೆಲವರಿಗೆ ತೃಪ್ತಿಯಿರದು.

ಆ ರಾತ್ರಿ ಶಿವಾಚಾರರು ಹೊಂಡ ಹಾಯುವುದನ್ನು ನೋಡಲು ಹೋಗಿದ್ದೆ. ಬೆಳಗಿನ ಜಾವ ನಾಲ್ಕು ಗಂಟೆ ಹೊತ್ತಿನ ಮಬ್ಬಿನಲ್ಲಿ ಹೊಂಡದ ಕೆಂಡ ನಿಗಿನಿಗಿಸುತ್ತಿತ್ತು. ಮುಂಜಾವಿನ ತಣ್ಣನೆ ಗಾಳಿ ಬೀಸುತ್ತಿತ್ತು. ಧಢಾರನೆ ಗರ್ಭ ಕಂಪಿಸುವಂತೆ ಶಂಖಾದಿ ವಾದ್ಯಗಳು ವಿಜೃಂಭಿಸಿದವು. ಇಂಗ್ಲಿಷ್ ಓದಿದ ನಾಸ್ತಿಕಾಗ್ರೇಸರರಿಗೂ ಆ ಸಮಯದಲ್ಲಿ ಭೀತಿಯುಂಟಾಯಿತೆಂದು ಅವರೆ ಹೇಳಿಕೊಂಡರು.

ಚಪ್ಪರದಡಿಯಿಂದ ವೀರಗಂಧ ಧಾರಣೆ ಮಾಡಿದ ನಾಲ್ಕು ಜನ ಶಿವಾಚಾರಿಗಳು ಹೊಂಡದ ಬಳಿ ಬಂದು ನಿಂತರು. ಒಬ್ಬನು ತಲೆ ಮೇಲೆ ಭೀಕರವಾದ ತಾಮ್ರದ ಪ್ರತಿಮೆಯನ್ನು ಹೊತ್ತಿದ್ದನು. ಎದುರಾಗಿ ನಿಂತ ಮತ್ತೊಬ್ಬನು ಖಡ್ಗ ಝಳಪಿಸುತ್ತ ವೀರ ದಂಡಕ ಹೇಳಿದ. ಒಬ್ಬನು ಹೊಂಡಕ್ಕೆ ತುಪ್ಪ ಸುರಿದು ಕುಂಬಳಕಾಯಿ ಹೋಳುಗಳನ್ನು ಹೊಂಡಕ್ಕೆಸೆದ. ಕೂಡಲೆ ಶಿವಾಚಾರಿಗಳು ಹೊಂಡಕ್ಕಿಳಿದು ನಡೆದು ಹೋದರು. ಆಚೆ ದಡ ತಲುಪಿ ಮತ್ತೆ ಕೆಂಡ ತುಳಿಯಲು ಇತ್ತ ಮುಖಮಾಡುತ್ತಿರುವಾಗ 'ಅಲ್ಲಾ-ರಾಮ್' ಎಂದು ಪ್ರಳಯ ಸದೃಶ ಕೇಕೆ ಹಾಕಿ ಶಿವಾಚಾರಿಗಳು ಹೊಂಡ ಹಾದ ದಿಕ್ಕಿನಿಂದ ಗುಂಪನ್ನು ಸೀಳಿಕೊಂಡು ಒಂದು ಮಾನವ ಪ್ರವಾಹ ಹೊಂಡವನ್ನು ಹಾದು ಹೋಯಿತು. ಅವರಲ್ಲಿನೆಲ್ಲರೂ ಮುಖಕ್ಕೆ ಮುಸುಕು ಹಾಕಿಕೊಂಡಿದ್ದರು. ಆ ಮಾನವ ಪ್ರವಾಹದ ಮುಂಭಾಗದಲ್ಲಿ ಬೆಳ್ಳಿಯ ಪೀರೊಂದನ್ನು ಎರಡು ಕೈಯಲ್ಲೂ ಹಿಡಿದ ವೀರನೊಬ್ಬ ಭೀಮನಂತೆ ನಡೆದುಹೋದ. ಇದಕ್ಕೆಲ್ಲ ಅರೆನಿಮಿಷವೂ ಹಿಡಿಯಲಿಲ್ಲ.

ಗುಂಪು ಕಕ್ಕಾವಿಕ್ಕಿಯಾಗಿ ಚದುರಿಹೋಯಿತು. ಕೆಲವರು ಸಾತಾನಿಗಳಿಗೂ ಶಿವಾಚಾರ್ಯದವರಿಗೂ ಕಿಂಚಿತ್ ಕಾಲು ಸುಟ್ಟಿತು. ಅದನ್ನು ಭಕ್ತಿಲೋಪವೆಂದರು. ಅನಂತರ ಶರಭಯ್ಯನಿಗೂ ಮನವಾಳಯ್ಯನಿಗೂ ರಾಜಿಯಾಯಿತೆಂದು ಹೇಳಿಕೊಳ್ಳುತ್ತಾರೆ. ತೋರಿಕೆಗೆ ಮಾತ್ರ ಜಗಳವಾಡುತ್ತಿರುವಂತಿರುತ್ತಾರೆ.

ಅದೋ, ನಮ್ಮ ಮನೆಗೆ ಎದುರಾಗಿ ಆ ರಚ್ಚೆ ಚಾವಡಿಯಲ್ಲಿ ನಿಲ್ಲಿಸಿರುವ ಪೀರು ಆ ಪೀರೆ. ಅಂದಿನಿಂದ ಪ್ರತಿವರ್ಷ ಆ ಪೀರಿಗೂ ಹಬ್ಬ ಮಾಡುತ್ತಾರೆ. ಊರಿನ ಆಬಾಲ ಗೋಪಾಲರು ಶೈವ ವೈಷ್ಣವ ಭೇದವಿಲ್ಲದೆ ಪೀರು ದೇವರಿಗೆ ಹರಕೆ ಸಲ್ಲಿಸುತ್ತಾರೆ. ತ್ರಿಶೂಲಾಕಾರವಾದುದರಿಂದ ಆ ಪೀರು ಶಿವಪೀರೇ ಎಂದು ಶರಭಯ್ಯ ಹೇಳುತ್ತಾನೆ. ಆ ವ್ಯವಸ್ಥೆ ಏನೆಂದು ಹೇಳಲು ವೆಂಕಯ್ಯ ಮೇಷ್ಟ್ರೇ ಸಮರ್ಥರು.

"ಶಿವನೂ ವಿಷ್ಣುವೂ ಪೀರುಗಳೇ ಆದಾಗ ಬುದ್ಧನು ಶಿವನಾಗಬಾರದೆ?" ಎಂದು ಶಾಯನ್ನಭುಕ್ತರು ಕತೆಯನ್ನು ಮುಕ್ತಾಯ ಮಾಡಿದರು.

ನಮ್ಮ ಗುರುಗಳು ಈ ಚರಿತ್ರೆಯಿಂದ ಬಲುಚಕಿತರಾಗಿ ಹೇಳಿದರು: "ಎಲಾ, ಕಲಿಕಾಲದಲ್ಲಿ ಮನುಷ್ಯರೇ ಅಲ್ಲ, ದೇವತೆಗಳೂ ಸಂಕರಗೊಳ್ಳುತ್ತಿದ್ದಾರೆ. ಆದರೂ ತಪ್ಪೇನಿದೆ? ಶಿವನೆಂದರೂ ವಿಷ್ಣುವೆಂದರೂ ಪೀರೆಂದರೂ ಬುದ್ಧನೆಂದರೂ ಆ ಪರಮಾತ್ಮನು ಮಾತ್ರ ಒಬ್ಬನೇ ಅಲ್ಲವೆ?"

ವೆಂಕಯ್ಯ ಸುಮ್ಮನಿರುವನೆ? "ಎಲ್ಲ ದೇವರುಗಳೂ ಒಂದೇ ಆದರೆ ಆ ಹೆಣಗಳನ್ನೆಲ್ಲ ಒಂದೇ ಕಡೆ ನಿಲ್ಲಿಸಿ ಎಲ್ಲರೂ ಸೇರಿ ಪೂಜೆಮಾಡಿ ಸಾಯಬಾರದೆ?" ಅಂದ.

ಆಗ ಗುರುಗಳು "ಎಲಾ, ದೇವರನ್ನು ಹೆಣಗಳು ಅನ್ನುವಿಯೊ? ನೀನು ಶುದ್ಧ ಕಿರಸ್ತಾನದವನು. ಆ ಕಿರಸ್ತಾನಿಯವನಿಗಾದರೂ ದೇವರೆಂಬುವವನು ಇದ್ದಾನೆ. ನೀನು ಕಿರಾತಕ. ಪೀರೋ ಗೀರೋ, ದೆವ್ವವೋ ದೇವರೋ ಈ ಅಜ್ಞರಿಗೆ ಮೂಢಭಕ್ತಿಯಾದರೂ ಉಂಟು, ನೀನು ಎಲ್ಲ ದೇವರಿಗೆ ಒಂದು ದೊಡ್ಡ ನಾಮ ಹಾಕುವೆ' ಅಂದರು.

**ವೆಂಕಯ್ಯ** : ನಿಮ್ಮೊಬ್ಬರನ್ನು ಬಿಟ್ಟು ಶಾಸ್ತ್ರಿಗಳೆ.

"ನಿನ್ನ ಜನ್ಮಕ್ಕೆಲ್ಲ ಬೆಲೆಯಿರುವ ಮಾತು ಹೇಳಿದೆ" ಎಂದು ನಾನು ಹೇಳಿದೆ.

ಪ. ರಘುನಾಥ
ಶ್ರೀಲಕ್ಷ್ಮೀ ಪ್ರಾವಿಷನ್ ಸ್ಟೋರ್ಸ್ ರಸ್ತೆ, ರಾಮಕೃಷ್ಣ ಬಡಾವಣೆ, ಶ್ರೀನಿವಾಸಪುರ - ೫೬೩ ೧೩೫, ಕೋಲಾರ ಜಿಲ್ಲೆ



# ಸಂಜೆಯ ಆಕಾಶಕ್ಕೆ ಹೊಸ ಅತಿಥಿ

**ಕ**ಳೆದೆರಡು ತಿಂಗಳಿನಿಂದ ಸಂಜೆಯ ಆಕಾಶದಲ್ಲಿ ವಿಹರಿಸುತ್ತಿರುವ ಶನಿಗ್ರಹ ಅನೇಕ ಹವ್ಯಾಸಿಗಳ ಮನಸ್ಸನ್ನು ಸೂರೆಗೊಂಡಿದೆ. ಈ ತಿಂಗಳು ಇನ್ನೊಂದು ಆಕರ್ಷಣೆಯೂ ಸೇರಲಿದೆ. ಅದೇ ಗುರುಗ್ರಹ. ಈಗಾಗಲೇ ಅನೇಕರು ರಾತ್ರಿಯ ಎಂಟು-ಒಂಬತ್ತು ಗಂಟೆಯ ಹೊತ್ತಿಗೆ ಪೂರ್ವದಲ್ಲಿ ಕಾಣುತ್ತಿರುವ ಈ ಪ್ರಕಾಶಮಾನ ಚುಕ್ಕೆಯನ್ನು ಕಂಡು ಅದೇನು, ಅದೇನು ಎಂದು ಅಚ್ಚರಿಪಟ್ಟಿದ್ದಾರೆ. ದುರ್ಬೀನು, ದೂರದರ್ಶಕಗಳಿಂದ ಕಂಡು ಅದರ ನಾಲ್ಕು ಸಂಗಾತಿಗಳನ್ನು ಗುರುತಿಸಿ ಗೆಲಿಲಿಯೋನಷ್ಟೇ ಸಂಭ್ರಮಪಟ್ಟಿದ್ದಾರೆ.

ಏಪ್ರಿಲ್ ಎರಡರಂದು ಭೂಮಿಯ ಈ ಬದಿಯಲ್ಲಿ ಗುರು; ಆ ಬದಿಯಲ್ಲಿ ಸೂರ್ಯ. ಈ ವಿಶೇಷ ಸಂದರ್ಭವನ್ನು ವಿಯುತಿ ಎಂದು ಕರೆಯಲಾಗಿದೆ. ಮೂರು ತಿಂಗಳ ಹಿಂದೆ ಶನಿಗ್ರಹದ ವಿಯುತಿ ನಡೆದು ಈಗದು ಸಂಜೆಯ ಆಕಾಶದಲ್ಲಿ ದರ್ಬಾರು ನಡೆಸುತ್ತಿದೆಯಷ್ಟೇ. ಈಗ ಗುರುಗ್ರಹದ ಸರದಿ. ಭೂಮಿ ಓಟದ ಸ್ಪರ್ಧೆಯಲ್ಲಿ ಗುರುವನ್ನು ಹಿಂದೆ ಹಾಕಿ ಓಡುವ ಸಂದರ್ಭ ಇದು. ಆದ್ದರಿಂದ ಸಹಜವಾಗಿ ಗುರು ಮತ್ತು ಭೂಮಿಯ ಅಂತರ ಕನಿಷ್ಠ. ಈ ಕಾರಣದಿಂದ ಅದರ ಪ್ರಕಾಶ ಗರಿಷ್ಠ – ಹುಣ್ಣಿಮೆ ಚಂದ್ರನಂತೆ. ಅಷ್ಟೇ ಅಲ್ಲ ಹುಣ್ಣಿಮೆಯ ಚಂದ್ರನಂತೆ ಅದೂ ಕೂಡ ರಾತ್ರಿ ಇಡೀ ದರ್ಶನ ನೀಡುತ್ತದೆ. ಆದ್ದರಿಂದ ದುರ್ಬೀನು, ದೂರದರ್ಶಕ ಸಜ್ಜುಪಡಿಸಿ ಕೊಂಡರೆ ಒಳ್ಳೆಯ ದೃಶ್ಯ ಲಭ್ಯ. ನಾಲ್ಕು ಗೆಲಿಲಿಯನ್ ಉಪಗ್ರಹಗಳು - ಇಯೋ, ಯುರೋಪಾ, ಗೆನಿಮೀಡ್ ಮತ್ತು ಕೆಲಿಸ್ಟೋ ಅತ್ತಿಂದಿತ್ತ ಓಡುವುದನ್ನು ಪ್ರತಿರಾತ್ರಿ ಅವುಗಳ ಸ್ಥಾನ ಗುರುತು ಹಾಕಿಕೊಳ್ಳುವುದರಿಂದ ತಿಳಿಯಬಹುದು.




ಗುರುಗ್ರಹ ತನ್ನ ಅಕ್ಷದ ಮೇಲೆ ಸುತ್ತುವಾಗ ಆಗೊಮ್ಮೆ ಈಗೊಮ್ಮೆ ಮಾತ್ರ ಕೆಂಪುಮಚ್ಚೆ ನೋಡಲು ಸಿಗುವುದು. ದೂರದರ್ಶಕ ಇರುವವರಿಗೆ ಕೆಂಪು ಮಚ್ಚೆಯನ್ನು ಕಾಣುವ ಅವಕಾಶವೂ ಇದೆ. ಉದಾಹರಣೆಗೆ, ಮೂರರಂದು, ಐದರಂದು ಮತ್ತು ಏಳರಂದು ಕಾಣುತ್ತದೆ. ಗ್ರಹದ ಆವರ್ತನಾವಧಿ ನಿಖರವಾಗಿ ತಿಳಿದಿರುವುದರಿಂದ ಅದು ನಮಗೆ ಕಾಣುವ ಅವಧಿಯನ್ನು ಲೆಕ್ಕ ಹಾಕಿ ತಿಳಿಯಬಹುದು. ಮೂರರಂದು ಸಂಜೆ ೭:೫೯ಕ್ಕೆ ಕೆಂಪುಮಚ್ಚೆ ಗ್ರಹದ ಬಿಲ್ಲೆಯ ಮಧ್ಯ ಭಾಗದಲ್ಲಿರುತ್ತದೆ. ಅಂದರೆ ಸುಮಾರು ರಾತ್ರಿ ಹತ್ತು ಗಂಟೆಯವರೆಗೂ ಕಾಣುತ್ತದೆ. ಐದರಂದು ರಾತ್ರಿ ೯:೨೭ಕ್ಕೆ ಅದು ಬಿಲ್ಲೆಯ ಮಧ್ಯದಲ್ಲಿರುತ್ತದೆ. ಅಂದರೆ ಸಂಜೆಯಿಂದ ರಾತ್ರಿ ಹನ್ನೆರಡರವರೆಗೂ ಕಾಣುತ್ತದೆ. ಏಳರಂದು ಸಂಜೆ ಕೆಂಪುಮಚ್ಚೆ ಕಾಣುವುದಿಲ್ಲ. ಆದರೆ ಸುಮಾರು ಒಂಬತ್ತು ಗಂಟೆಗೆ ಅಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ನಡುರಾತ್ರಿಗೆ ಬಿಲ್ಲೆಯ ಮಧ್ಯಕ್ಕೆ ಬಂದು ಬೆಳಗಿನ ಜಾವದ ಹೊತ್ತಿಗೆ ಮತ್ತೆ ಇನ್ನೊಂದು ಅಂಚಿಗೆ ಸರಿಯುತ್ತದೆ. ಗುರುಗ್ರಹದ ಆವರ್ತನೆಯನ್ನು ಲೆಕ್ಕಹಾಕಲು ಇದು ಒಳ್ಳೆಯ ಅವಕಾಶ. ಛಾಯಾಗ್ರಹಣಕ್ಕೂ ಅಷ್ಟೇ.

ಎರಡರಂದು ವಿಯುತಿ ಎಂದ ಮಾತ್ರಕ್ಕೆ ಆ ದಿನ ಮಾತ್ರ ಗುರುಗ್ರಹವನ್ನು ನೋಡ ಬೇಕೆಂದಲ್ಲ. ಯಥಾಪ್ರಕಾರ ಅಮೆರಿಕದವರು ಈ ಬಗ್ಗೆ ಗುಲ್ಲೆಬ್ಬಿಸಿ ಎಂದೂ ನಡೆಯದ ವಿಶೇಷ ಘಟನೆ ಎಂಬಂತೆ ಸುದ್ದಿ ಕಳುಹಿಸುತ್ತಾರೆ. ಅಂದು ಅದರ ದೂರ ಸುಮಾರು ೬೬೮ ಮಿಲಿಯನ್ ಕಿ.ಮೀ.ಗಳು. ತಿಂಗಳ ಕೊನೆಗೆ ಅಂದರೆ ೩೦ರಂದು ಈ ದೂರ ೬೮೩ ಮಿಲಿಯನ್ ಕಿ.ಮೀ.ಗಳಾಗುತ್ತದೆ. ಇಲ್ಲಿ ಮಿಲಿಯನ್ ಎಂಬ ಪದವನ್ನು ಮರೆಯ ಬಾರದು. ಈ ಎರಡೂ ಸಂಖ್ಯೆಗಳ ಅಂತರವನ್ನು ಬರಿಗಣ್ಣಿನಿಂದ ಗುರುತಿಸಲಾಗದು. ಅಷ್ಟೇಕೆ ಚಂದ್ರ ಅದನ್ನು ಆಚ್ಛಾದಿಸಿದಾಗ ಮಾತ್ರ ನಮಗೆ ಚಂದ್ರ ಇದಕ್ಕಿಂತ ಸಮೀಪ ಇದೆ ಎಂಬ ಅಂಶ ತಿಳಿಯುವುದು. ಇಲ್ಲದಿದ್ದರೆ ತಿಳಿಯುವಂತೆಯೇ ಇಲ್ಲ.

ಡಾ|| ಬಿ. ಎಸ್. ಶೈಲಜಾ

೨೨ರಂದು ಇಂತಹದೊಂದು ಆಚ್ಛಾದನೆ ಇದೆ. ಪೂರ್ಣಚಂದ್ರನಷ್ಟೇ ಬೆಳಕಿನ ಅರ್ಧಾಧಿಕ ಚಂದ್ರನಿಗೆ ಗುರು ಅಂಟಿಕೊಂಡಂತೆ ಕಾಣತ್ತದೆ. ಮರೆಯಾಗುವ ಹಂತ ನಮಗೆ ಕಾಣುವುದಿಲ್ಲ.

ಬೆಳಗಿನ ಆಕಾಶದಲ್ಲಿ ಸೂರ್ಯೋದಯಕ್ಕೆ ಮುನ್ನ ಪೂರ್ವ ದಿಗಂತದ ಬಳಿ ಕಾಣುವ ಚುಕ್ಕೆ ಬುಧ. ೭ರಂದು ಬಾಲಚಂದ್ರ ಇದರ ಪಕ್ಕವೇ ಕಾಣುತ್ತದೆ. ೨೬ರಂದು ಸುಮಾರು ೧೮ ಡಿಗ್ರಿ ಎತ್ತರದಲ್ಲಿ ಕಾಣುವ ಇದನ್ನು ಸುಲಭವಾಗಿ ಗುರುತಿಸಬಹುದು.

ಸೂರ್ಯೋದಯಕ್ಕೆ ಸುಮಾರು ೩ ಗಂಟೆ ಮುಂಚಿತವಾಗಿ ಉದಯಿಸುವ ಮಂಗಳ ಧನುರಾಶಿಯನ್ನು ದಾಟಿ ಮಕರದತ್ತ ಓಡುತ್ತಿದೆ. ಹೆಚ್ಚಿನ ನಕ್ಷತ್ರ ಗಳಿಲ್ಲದ ಆ ರಾಶಿಯಲ್ಲಿ ಇದನ್ನು ಗುರುತಿಸುವುದು ಸುಲಭ. ಇದರ ಆಸುಪಾಸಿನಲ್ಲಿ ಧೂಮಕೇತುವೊಂದು ಓಡುತ್ತಿದೆ. ೨೦೦೩ T4 ಲೀನಿಯರ್ ಎಂಬ ಹೆಸರಿನ ಇದು ದುರ್ಬೀನು, ದೂರದರ್ಶಕಗಳಿಗೆ ಮಾತ್ರ ಕಾಣುವಷ್ಟು ಕ್ಷೀಣವಾಗಿದೆ.

ಗುರು ವಿಯುತಿಯ ಕಾರಣ ನಭದ ಆಕರ್ಷಣೆ ಉಳಿಸಿಕೊಂಡಿದ್ದರೆ ಶುಕ್ರ ವಿಯುತಿ ಇನ್ನೊಂದು ಬಗೆಯದು. ಸೂರ್ಯನಿಂದ ಆಚೆ ಬದಿ ಯಲ್ಲಿ ಹಾದುಬರುವ ಇದು ತಿಂಗಳ ಕೊನೆಯವರೆಗೂ ನೋಡಲು ಸಿಗುವುದಿಲ್ಲ. ಆಮೇಲೆ ಸಂಜೆಯ ಆಕಾಶದಲ್ಲಿ ಹಾಜರ್ !

ಈ ತಿಂಗಳಲ್ಲಿ ಎರಡು ಗ್ರಹಣಗಳಿವೆ – ಎರಡೂ ನಮಗೆ ನೋಡಲು ಸಿಗುವುದಿಲ್ಲ. ೮ರ ಸೂರ್ಯಗ್ರಹಣ ನಮ್ಮ ನಡುರಾತ್ರಿಯಲ್ಲಿ! ಆದ್ದರಿಂದ ಶಾಂತ ಸಾಗರದ ಮೇಲೆ ನೆರಳು ಬೀಳುತ್ತದೆ. ಚಂದ್ರ ಸೂರ್ಯಬಿಂಬವನ್ನು ಪೂರ್ತಿಯಾಗಿ ಮುಚ್ಚಲಾಗದ ಕಾರಣ ಇದಕ್ಕೆ ಕಂಕಣಗ್ರಹಣ ಎಂಬ ಹೆಸರಿದೆ. ಸೂರ್ಯ ಪೂರ್ತಿ ಕಪ್ಪಾಗದೇ ಬಳೆಯಂತೆ ಕಾಣುತ್ತದೆ. ೨೪ರ ಚಂದ್ರಗ್ರಹಣದಂದು ಚಂದ್ರ ಭೂಮಿಯ ನೆರಳಿನ ಪಾರ್ಶ್ವಛಾಯಾ ಪ್ರದೇಶವನ್ನು ಮಾತ್ರ ಹಾದುಹೋಗುತ್ತದೆ. ಅಂದರೆ (ಅಮೆರಿಕದ) ನೋಡುಗರಿಗೆ ಬೆಳಕಿನ ವ್ಯತ್ಯಾಸವೂ ತಿಳಿಯುವುದಿಲ್ಲ. ಗ್ರಹಣ ಎಂದು ನಂಬಲು ಸಾಧ್ಯವೆ ಆಗುವುದಿಲ್ಲ.

ಲಿರಿಡ್ಸ್ ಎಂಬ ಉಲ್ಕಾವೃಷ್ಟಿ ೨೨ರಂದು ಗರಿಷ್ಠ ಚಟುವಟಿಕೆ ತೋರಲಿದೆ. ಲೈರಾ (ವೀಣಾ) ಎಂಬ ನಕ್ಷತ್ರ ಪುಂಜದಿಂದ ಹೊರಟಂತೆ ಕಾಣುವ ಉಲ್ಕೆಗಳು ಗಂಟೆಗೆ ೧೦-೧೨ ಬೀಳುವುವು.

ಸಂಜೆಯ ಆಕಾಶವನ್ನು ಬಿಂಬಿಸುವ ನಕ್ಷೆಯನ್ನು ಗಮನಿಸಿ. ಒರೈಯನ್ (ಮಹಾವ್ಯಾಧ) ನೆತ್ತಿಯ ಮೇಲೆ. ಅವರ ದಕ್ಷಿಣಕ್ಕೆ ವ್ಯಾಧನ ನಾಯಿ ಕ್ಯಾನಿಸ್ ಮೇಜರ್ (ಮಹಾಶ್ವಾನ). ಇದರಲ್ಲಿಯ ಅತಿ ಪ್ರಕಾಶಮಾನ ನಕ್ಷತ್ರವೇ ಸಿರಿಯಸ್ (ಲುಬ್ಧಕ). ಇನ್ನೂ ದಕ್ಷಿಣದಲ್ಲಿರುವ ಇನ್ನೊಂದು ಪ್ರಕಾಶಮಾನ ನಕ್ಷತ್ರವೇ ಕೆನೋಪಸ್ (ಅಗಸ್ತ್ಯ). ಸಿರಿಯಸ್ ಮತ್ತು ಕೆನೋಪಸ್‌ಗಳನ್ನು ಸೇರಿಸುವ ರೇಖೆಯೊಂದನ್ನು ಕಲ್ಪಿಸಿಕೊಂಡು

ಇನ್ನೂ ದಕ್ಷಿಣ ದಿಗಂತಕ್ಕೆ ದೃಷ್ಟಿ ವಿಸ್ತರಿಸಿದರೆ ಗ್ಯಾಲಕ್ಸಿಯೊಂದನ್ನು ಕಾಣಬಹುದಾಗಿತ್ತು. ಆದರೆ ಸಾಧಾರಣವಾಗಿ ದಿಗಂತದ ಸಮೀಪ ಯಾವಾಗಲೂ ಮಬ್ಬು. ಆದ್ದರಿಂದ ಅದು ಕಾಣದು. ದಕ್ಷಿಣದ ದೇಶಗಳಿಗೆ (ಉದಾ : ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕ, ದಕ್ಷಿಣ ಅಮೆರಿಕ) ಹೋಗಿ ಸಿರಿಯಸ್ (ಇದು ನೆತ್ತಿಯ ಮೇಲೇ ಇರುತ್ತದೆ) ಕೆನೋಪಸ್‌ಗಳ ಸಹಾಯದಿಂದ ಈ ಗ್ಯಾಲಕ್ಸಿ – ನಮ್ಮ ನೆರೆಯ ಲಾರ್ಜ್ ಮೆಗೆಲಾನಿಕ್ ಕ್ಲೌಡ್ – (LMC) ಯನ್ನು ಗುರುತಿಸಬಹುದು. ಆದರೆ ಅಲ್ಲಿ ಈ ಯಾವುದೇ ಸುಳಿವಿಲ್ಲದೇ ಅದನ್ನು ಸುಲಭವಾಗಿ ಗುರುತಿಸಬಹುದು. ತಲೆ ಎತ್ತಿದರೆ ಸಾಕು ಕಂಡೇ ಕಾಣುತ್ತದೆ.

ಇರಲಿ ನಮ್ಮ ಆಕಾಶದ ಇತರ ಪುಂಜಗಳತ್ತ ಕಣ್ಣು ಹಾಯಿಸಿ. ಪಶ್ಚಿಮದತ್ತ ವೃಷಭ, ಅದರಲ್ಲಿಯ ಕೃತ್ತಿಕಾಗುಚ್ಛ. ಹನ್ನೊಂದರಂದು ಬಾಲಚಂದ್ರ ಕೃತ್ತಿಕೆಯ ಪಕ್ಕ ವಿರಾಜನಾಗುತ್ತಾನೆ. ೧೫ರಂದು ಚಂದ್ರ ಶನಿಯನ್ನು ಸಮೀಪಿಸುವಾಗ, ಶನಿಗ್ರಹ ಮತ್ತು ಮಿಥುನದ ಪರಿಚಯ ಪಕ್ಕಾಗುತ್ತದೆ. ಮಿಥುನದ ಮುಂದಿನದು ಕಟಕ. ಇದು ಅತಿ ಕ್ಷೀಣ ಪುಂಜ. ಸಿಂಹ ಮಾತ್ರ ಸುಲಭವಾಗಿ ಗುರುತಿಸಬಹುದಾದದ್ದು. ಪೂರ್ವ ದಿಗಂತ ಖಾಲಿ ಎನ್ನಿಸಬಹುದು. ಆದರೆ ಸುಮಾರು ಎಂಟು ಗಂಟೆಯ ಹೊತ್ತಿಗೆ ಗಮನಿಸಿ. ಎರಡು ನಕ್ಷತ್ರಗಳು ಗುರುಗ್ರಹದ ಬೆಳಕಿನಿಂದ ನಾಚಿ ಮುಸುಕಿಟ್ಟು ಮುಗುಳ್ನಗುತ್ತವೆ. ಒಂದು ನೀಲಿಬಣ್ಣದ್ದು ಚಿತ್ರಾ, ಇನ್ನೊಂದು ಕಿತ್ತಳೆ ಎನ್ನಬಹುದಾದದ್ದು ಸ್ವಾತಿ. ಹುಣ್ಣಿಮೆಯ ಚಂದ್ರನ ಜೊತೆಗೂಡುವುದು ಚಿತ್ರಾ. ಆದ್ದರಿಂದ ಈ ತಿಂಗಳ ಹೆಸರು ಚೈತ್ರ. ದೃಷ್ಟಿಯನ್ನೀಗ ಉತ್ತರಕ್ಕೆ ಹರಿಸಿ. ಚಿತ್ರಾದಿಂದ ಸ್ವಾತಿ, ಅಲ್ಲಿಂದ ಇನ್ನೂ ಉತ್ತರಕ್ಕೆ – ಸಪ್ತರ್ಷಿಗಳ ಸಾನ್ನಿಧ್ಯಕ್ಕೆ. ಮೊದಲಿನ ನಾಲ್ಕು ನಕ್ಷತ್ರಗಳಂತೂ ಸ್ಪಷ್ಟವಾಗಿಯೇ ಕಾಣುತ್ತವೆ. ಈ ಚೌಕದ ಸಹಾಯದಿಂದ ಧ್ರುವ ನಕ್ಷತ್ರವನ್ನು ಗುರುತಿಸಬಹುದು. ಕ್ಷೀಣವಾದ ಧ್ರುವ, ಸಪ್ತರ್ಷಿಗಳಲ್ಲಿ ಮೊದಲೆರಡು ಕ್ರತು, ಪುಲಹ – ಈ ಮೂರು ಒಂದೇ ಕಾಲ್ಪನಿಕ ರೇಖೆಯಲ್ಲಿ ಇರುವಂತೆ ಕಾಣುತ್ತದೆ.

## ನಗು

ಸಾವಿರ ಪದಗಳಿಗೂ
ಸಮವಾಗಲಾರದು
ನಿನ್ನ ತುಟಿಯ ಮೇಲಿನ
ನಗೆ ಮಿಂಚು
ಹೋಲಿಸಬಹುದಷ್ಟೇ
ಮುಗಿಲಲಿ
ಮಿನುಗು
ಮಾಯವಾಗುವ
ಮಿಂಚಿಗೆ

ಶಿಕಾಬ, ಯತ್ನಟ್ಟಿ
ಓಜನಹಳ್ಳಿ ಅಂಚೆ, ಕೊಪ್ಪಳ ತಾಲ್ಲೂಕು - ೫೮೩ ೨೩೮

### ಖಗೋಳ ದಿನಚರಿ

೧ ಚಾಂದ್ರಮಾಸದ ಕಡೆಯ ಪಾದ
ಚಂದ್ರೋದಯ ನಡುರಾತ್ರಿಗೆ
೩ ಗುರುಗ್ರಹದ ವಿಯುತಿ*
ಚಂದ್ರ-ಮಂಗಳ ನಡುವೆ ಕನಿಷ್ಠ ಕೋನ*
೭ ಚಂದ್ರ-ಬುಧ ನಡುವೆ ಕನಿಷ್ಠ ಕೋನ
೮ ಅಮಾವಾಸ್ಯೆ (ವಾಸ್ತವವಾಗಿ ೯ರ ಬೆಳಗಿನ ಜಾವ ೦೨:೦೨ಕ್ಕೆ)
ಕಂಕಣಗ್ರಹಣ – ನಮಗೆ ಕಾಣುವುದಿಲ್ಲ
೧೧ ಚಂದ್ರ-ಕೃತ್ತಿಕಾ ನಡುವೆ ಕನಿಷ್ಠ ಕೋನ*
೧೫ ಚಂದ್ರ-ಶನಿ ನಡುವೆ ಕನಿಷ್ಠ ಕೋನ*
೧೬ ಚಾಂದ್ರಮಾಸದ ಮೊದಲ ಪಾದ
ಚಂದ್ರಾಸ್ತ ನಡುರಾತ್ರಿಗೆ
೨೨ ಗುರು-ಚಂದ್ರ ನಡುವೆ ಕನಿಷ್ಠಕೋನ
ಲಿರಿಡ್ಸ್ ಉಲ್ಕಾವೃಷ್ಟಿ
೨೪ ಹುಣ್ಣಿಮೆ-ಪಾರ್ಶ್ವ ಛಾಯಾಗ್ರಹಣ
ನಮಗೆ ಕಾಣುವುದಿಲ್ಲ
೨೬ ಬೆಳಗಿನ ಜಾವ ಬುಧ ಗರಿಷ್ಠ ಎತ್ತರದಲ್ಲಿ*
*ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಸೂರ್ಯನ ಮೇಲೊಂದು ಮಚ್ಚೆ

**ಕುಂ**ದಾಪುರದ ಶ್ರೀಯುತ ರಾಮಕೃಷ್ಣ ಹತ್ವಾರರಿಗೆ ಸಮುದ್ರದ ಹಾಸಿನ ಮೇಲೆ ಸೂರ್ಯಾಸ್ತ ನೋಡುವ ಹವ್ಯಾಸ. ಜನವರಿಯಲ್ಲಿ ಅವರು ಸೂರ್ಯನ ಮೇಲೊಂದು ಚುಕ್ಕೆಯನ್ನು ಗಮನಿಸಿದರು. ಮರುದಿನವೂ ಕಂಡರು; ಅದರ ಮರುದಿನವೂ – ದಿನೇ ದಿನೇ ಅದರ ಸ್ಥಾನ ಬದಲಾಗುತ್ತಿದ್ದುದನ್ನೂ ಗುರುತಿಸಿದರು. ನನಗೆ ಫೋನ್ ಮಾಡಿ ತಿಳಿಸಿದರು. ಕೊಟ್ಟೂರಿನ ಕೆಂಚಪ್ಪ ಅವರೂ ಇದನ್ನು ಗಮನಿಸಿದರು. ಗ್ರಹಣ ವೀಕ್ಷಿಸಲು ಬಳಸುವ ಎಕ್ಲಿಪ್ಸ್ ಗಾಗಲ್ಸ್ ಮೂಲಕ ನೋಡಿದರು. ಇತರರಿಗೂ ತೋರಿಸಿದರು. ಅದು ಸೂರ್ಯನ ಮೇಲಿನದೇ ಎಂದು ಖಚಿತಪಡಿಸಿ ಕೊಳ್ಳಲು ನನಗೆ ಕರೆ ಮಾಡಿದರು. ಚಂದ್ರಗುತ್ತಿಯ ರೇಣುಕಾಂಬಾ ಪ್ರೌಢಶಾಲೆಯ ಮಕ್ಕಳೂ ಇದನ್ನು ಗಮನಿಸಿ ತಮ್ಮ ಉಪಾಧ್ಯಾಯಿನಿಗೆ (ಶ್ರೀಮತಿ ವಿನೋದಾ ಅರ್ಚಕ್) ತಿಳಿಸಿದರು. ಅಲ್ಲಿಂದ ಪತ್ರವು ಬಂದಿತು. ಅಷ್ಟರಲ್ಲಾಗಲೇ ಮಚ್ಚೆ ಸೂರ್ಯನ ಇನ್ನೊಂದು ಬದಿಗೆ ತಿರುಗಿಬಿಟ್ಟಿತ್ತು. – ಇಷ್ಟು ದೊಡ್ಡ ಮಚ್ಚೆ ಸೂರ್ಯನ ಮೇಲೆ ಕಂಡದ್ದು – ಅದರಲ್ಲೂ ಸಾಮಾನ್ಯರು ಗಮನಿಸಿದ್ದು ಒಂದು ವಿಶೇಷವಲ್ಲವೇ ?



ಜನವರಿಯಲ್ಲಿ ಕಂಡ ಸೌರಕಲೆ; ತಾರಾಲಯದ ದೂರದರ್ಶಕದಿಂದ ತೆಗೆದ ಚಿತ್ರ

ಸೂರ್ಯನ ಮೇಲಿನ ಮಚ್ಚೆಗಳು ಸಾಧಾರಣವಾಗಿ ಚಿಕ್ಕದಾಗಿರುತ್ತವೆ. ಬರಿಗಣ್ಣಿಗೆ ಕಾಣುವುದಿಲ್ಲ. ಇದು ಮಾತ್ರ ದೊಡ್ಡದಾಗಿತ್ತು. ಡಿಸೆಂಬರ್‌ನಲ್ಲಿ ಇದು ದೂರದರ್ಶಕದಿಂದ ಸುಲಭವಾಗಿ ಗುರುತಿಸುವಂತಿತ್ತು. ಜನವರಿಯಲ್ಲಿ ಬೆಳೆದು ನಿಂತಿತು. ಜನವರಿ ೧೧ರಂದು ದೊಡ್ಡದೊಂದು ಜ್ವಾಲೆಯನ್ನೂ ಚಿಮ್ಮಿಸಿತು. ಆಗದು ಬರಿಗಣ್ಣಿಗೆ ಕಾಣುವಷ್ಟು ದೊಡ್ಡದಾಗಿತ್ತು. ಜನವರಿ ೨೬ರ ಹೊತ್ತಿಗೆ ಸೂರ್ಯನ ಇನ್ನೊಂದು ಬದಿಗೆ ಹೋದ ಅದು ಫೆಬ್ರವರಿಯಲ್ಲಿ ಮತ್ತೆ ನಮ್ಮತ್ತ ತಿರುಗಿದಾಗ ಚಿಕ್ಕದಾಗಿಬಿಟ್ಟಿತ್ತು ; ಅಲ್ಲದೇ ಶಾಂತವಾಗಿಯೂ ಇತ್ತು. ಈಗಲೂ ಇದೆ; ಶಾಂತವಾಗಿ, ಚಿಕ್ಕದಾಗಿದೆ. ಹೀಗೆ ಇದ್ದಕ್ಕಿದ್ದಂತೆ ಸೌರಕಲೆಗಳ ಚಟುವಟಿಕೆ ಹೆಚ್ಚಾಗುವುದನ್ನು ಮುಂಚಿತವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ಹನ್ನೊಂದು ವರ್ಷಗಳಿಗೊಮ್ಮೆ ಸೌರಕಲೆಗಳ ಚಟುವಟಿಕೆಯಲ್ಲಿ ಏರಿಳಿತವಾಗುವುದು. ಈ ವರ್ಷ ಚಟುವಟಿಕೆ ಕನಿಷ್ಠ ಆದ್ದರಿಂದ ಹೀಗೊಂದು ಘಟನೆ ನಡೆಯಬಹುದೆಂಬ ನಿರೀಕ್ಷೆ ಇರಲಿಲ್ಲ.

ಹೀಗೆ ಸೌರಕಲೆಗಳಿಂದ ಚಿಮ್ಮಿದ ವಸ್ತು ನಮಗೇನೂ ಅಪಾಯ ಉಂಟುಮಾಡುವುದಿಲ್ಲ. ಆದರೆ ಉತ್ತರ, ದಕ್ಷಿಣ ಧ್ರುವಗಳಲ್ಲಿ ಅತ್ಯದ್ಭುತ ಧ್ರುವಪ್ರಭೆಗಳನ್ನು ಸೃಷ್ಟಿಸುತ್ತದೆ. ಅತಿ ಹೆಚ್ಚಾದಾಗ ಅಲ್ಲಿಯ ವಿದ್ಯುತ್ ಜಾಲವನ್ನೂ ಹಾಳು ಮಾಡುತ್ತದೆ ! ಇಂಟರ್‌ನ್ಯಾಷನಲ್ ಸ್ಪೇಸ್ ಸ್ಟೇಷನ್ ಮುಂತಾದ ಬಾಹ್ಯಾಕಾಶ ನೌಕೆಗಳಿಗೆ ಅಪಾಯ ಕಟ್ಟಿಟ್ಟದ್ದೇ. ಆದ್ದರಿಂದ ಈ ಬಗೆಯ ಅಧ್ಯಯನವನ್ನು ಅವಿರತವಾಗಿ ನಡೆಸಲಾಗುತ್ತದೆ. ಇದಕ್ಕಾಗಿ ಬರುವ ವಿಶೇಷ ಎಚ್ಚರಿಕೆ ಸಂದೇಶಗಳನ್ನು "Space weather" ಎಂಬ ಹೆಸರಿನಲ್ಲಿ ಇಂಟರ್‌ನೆಟ್‌ನಲ್ಲಿ ಬಿತ್ತರಿಸಲಾಗುತ್ತದೆ.

ಇವೆಲ್ಲಾ ಏನೇ ಆದರೂ, ಬರಿಗಣ್ಣಿನಿಂದಲೇ ಸೌರಕಲೆಯನ್ನು ಗುರುತಿಸಿ, ಅದು ಕಲೆ ಎಂದು ಸರಿಯಾಗಿ ಊಹಿಸಿದವರ ಶ್ರದ್ಧೆಯನ್ನು ಅಭಿನಂದಿಸುವ ಸಲುವಾಗಿ ಈ ಪುಟ್ಟ ವಿವರಣೆ.

# ಮಾಧವಿ

## ಅಂತಸ್ಥಗೊಂಡ ಸ್ತ್ರೀ ಬದುಕಿನ ಗುಲಾಮಗಿರಿಯ ಕಥನ



ಪುರಾಣವನ್ನು ಒಡೆದು ವಾಸ್ತವದ ನೆಲೆಯಲ್ಲಿ ವಿಸ್ತರಿಸಿಕೊಂಡ ಸಂರಚನೆಗಳಾಗಿ ತಿರುಮಲಾಂಬಾ ಅವರ ನಾಟಕ 'ವಿವೇಕೋದಯ' ಮತ್ತು ಅನುಪಮಾ ನಿರಂಜನ ಅವರ ಕಾದಂಬರಿ 'ಮಾಧವಿ'ಯನ್ನು ಮರುಓದುವ ಪ್ರಯತ್ನದಲ್ಲಿ ಮಾಧವಿ ಎಂಬ ಪುರಾಣ ಪಾತ್ರವನ್ನು ನಾವು ಹೇಗೆ ಗ್ರಹಿಸುತ್ತೇವೆ ಎನ್ನುವುದು ಮುಖ್ಯವಾಗುತ್ತದೆ. ಸ್ತ್ರೀವಾದದ ಎಳೆ ನಮ್ಮ ಪರಂಪರೆಯಲ್ಲಿಯೂ ಇದೆ ಎಂದು ಪುರುಷಪ್ರಧಾನ ವೈದಿಕ ಪರಂಪರೆಯನ್ನು ಬಿಗಿಗೊಳಿಸಲು ಮಾಧವಿಯ ಪ್ರತಿಮೆಯನ್ನು ಬಳಸಿಕೊಳ್ಳಲಾಗುತ್ತಿದೆಯೋ? ಅಥವಾ ಮಾಧವಿಯಂಥವರು ಪುರುಷಪ್ರಧಾನ ವೈದಿಕ ಪರಂಪರೆಯ ಭಾರದಡಿಯಲ್ಲಿ ಹೇಗೆ ಹೊಂದಿಕೊಳ್ಳುತ್ತಾರೆ ಎಂದು ಕಂಡುಕೊಳ್ಳುತ್ತೇವೆಯೋ? ಎನ್ನುವ ಪ್ರಶ್ನೆಗಳನ್ನು ಎದುರಿಗಿಟ್ಟು ಕೊಳ್ಳಬೇಕಾಗುತ್ತದೆ. ೧೯೨೨ರಲ್ಲಿ ನಿರ್ಮಿತಿಗೊಂಡ 'ವಿವೇಕೋದಯ' ಮತ್ತು ೧೯೭೬ರಲ್ಲಿ ನಿರ್ಮಿತಿಗೊಂಡ 'ಮಾಧವಿ' ಈ ಎರಡು ಕೃತಿಗಳ ಕಥಾಸಕ್ತಿ ಒಂದೇ. ಮಾಧವಿ ಪ್ರತಿಮೆಯಾಗಿ ನಿರ್ಮಾಣಗೊಳ್ಳುವಲ್ಲಿ ಸ್ತ್ರೀಯ ಮೇಲಿನ ಪುರುಷನ ಅಧಿಕಾರದ ಬೇರುಗಳನ್ನೇ ಅಲುಗಾಡಿಸಿ ಸರಳವಾಗಿ ಮುಕ್ತಾಯಗೊಳಿಸಲಾರದ ಬಿಕ್ಕಟ್ಟೊಂದನ್ನು ಮೂಲ ಪಠ್ಯದಲ್ಲಿಯೇ ಕಾಣಬಹುದಾಗಿದೆ. ಇಂಥ ಬಿಕ್ಕಟ್ಟಿನಿಂದ ಹುಟ್ಟುವ ವೈಚಾರಿಕ ಸಂವಿಧಾನದ ಮೇಲೆ ತಿರುಮಲಾಂಬ ಮತ್ತು ಅನುಪಮಾ ಅವರ ಕೃತಿಗಳ ಕಥಾಹಂದರ ನಿರ್ಮಾಣಗೊಂಡಿದೆ. 'ವಿವೇಕೋದಯ' ಮತ್ತು 'ಮಾಧವಿ' ಈ ಎರಡೂ ಕಥನಗಳು ನಿರೂಪಿಸ ಹೊರಟಿರುವ ಮೂಲ ರೂಪಕ : ಆರ್ಕಿಟೈಪ್ – ಒಂದೇ ರೀತಿಯದು. ಹೆಣ್ಣಿನ ಮೇಲಿನ ಗಂಡಸರ ಅಧಿಕಾರ ಎಂಬುದು ಯಾವುದೇ ನಿಯಂತ್ರಣದ ಚೌಕಟ್ಟಿಗೆ ಸಿಲುಕದೆ ವಿಜೃಂಭಿಸುವ ಒಂದು ಆದಿಮ ರೂಪಕ. ಮಾಧವಿಯ ಪಾತ್ರವೃತ್ತಿಗೆ ಪುರಾಣದಲ್ಲಿ ಮೂಲತಃ ಸಂಘರ್ಷದ ಹಂಗಿಲ್ಲ. ಮಹಾಭಾರತದ ಉದ್ಯೋಗ ಪರ್ವದ ೧೦೬ರಿಂದ ತೊಡಗಿ ೧೨೦ನೇ ಶ್ಲೋಕಗಳಲ್ಲಿ ಮಾಧವಿಯ ಉಲ್ಲೇಖವು ಗಾಲವ, ಯಯಾತಿ, ವಿಶ್ವಾಮಿತ್ರ, ಹರ್ಯಶ್ವ, ದಿವೋದಾಸ, ಉಶೀನರ – ಈ ಪುರುಷ ಪಾತ್ರಗಳ ಜೊತೆಜೊತೆಗೆ ಸೇರಿ ಪ್ರಸ್ತಾವಿತಗೊಂಡಿದೆ.

ಡಾ|| ಕವಿತಾ ರೈ ಬಿ. ಆರ್.

ಮಹಾಭಾರತದ ಕಾಲಕ್ಕಾಗಲೇ ಗುಲಾಮಗಿರಿ ಪದ್ಧತಿ ಶಕ್ತವಾಗಿ ರೂಪುಗೊಂಡಿದ್ದು ಗುಲಾಮಗಿರಿಯಲ್ಲಿ ಹೆಂಗಸರನ್ನು ಕೊಂಡುಕೊಳ್ಳುವುದು, ಮಾರುವುದು ಅಥವಾ ಬಾಡಿಗೆಗೆ ಕೊಡುವುದು ಚಾಲ್ತಿಯಲ್ಲಿತ್ತು. ಸ್ವಂತ ಹೆಂಡತಿಗೆ ಹುಟ್ಟಿದ ಮಕ್ಕಳು ಆಸ್ತಿಯ ಉತ್ತರಾಧಿಕಾರಿಗಳೂ, ಗುಲಾಮ ಹೆಂಗಸರಲ್ಲಿ ಹುಟ್ಟಿದ ಮಕ್ಕಳು ಸಂಪತ್ತನ್ನು ಹೆಚ್ಚಿಸುವ ಕೆಲಸಗಾರರಾಗುವುದೂ ಮಹಾಭಾರತದಲ್ಲಿ ವ್ಯಕ್ತವಾಗುವ ಜೀವನ ಪದ್ಧತಿ. ಮಾಧವಿಯ ಕಥೆ ಇದನ್ನು ನಿರೂಪಿಸುತ್ತದೆ. ಯಯಾತಿಗೆ ದಾಸಿಯಿಂದ ಹುಟ್ಟಿದ ಮಗಳು ಮಾಧವಿ. ವಿಶ್ವಾಮಿತ್ರನಲ್ಲಿ ಶಿಕ್ಷಣ ಮುಗಿಸಿದ ಗಾಲವನೆಂಬಾತ ಗುರುದಕ್ಷಿಣೆ ನೀಡುವ ಸಲುವಾಗಿ ಎಂಟುನೂರು ಅಶ್ವಗಳನ್ನು ಪಡೆಯುವಲ್ಲಿ ಯಯಾತಿಯ ಸಹಾಯ ಯಾಚಿಸುತ್ತಾನೆ. ಅಶ್ವಗಳಿಗೆ ಬದಲಾಗಿ ಯಯಾತಿ ತನ್ನ ಸುಂದರ ಪುತ್ರಿ ಮಾಧವಿಯನ್ನು ಅವನಿಗೆ ನೀಡಿ ಅವಳನ್ನು ಬಳಸಿ ಅಶ್ವಗಳನ್ನು ಪಡೆಯುವಂತೆ ಸೂಚಿಸುತ್ತಾನೆ. ಗಾಲವನು ಮಾಧವಿಯನ್ನು ಕ್ರಮವಾಗಿ ಮೂರು ಜನ ರಾಜರಲ್ಲಿ ಒತ್ತೆಯಿಟ್ಟು ಅವರಿಂದ ತಲಾ ೨೦೦ ಕುದುರೆಗಳನ್ನು ಪ್ರತಿಫಲವಾಗಿ ಪಡೆಯುತ್ತಾನೆ. ಪ್ರತಿಯೊಬ್ಬರೂ ಅವಳನ್ನು ಅನುಭವಿಸಿ ಒಂದೊಂದು ಮಗುವನ್ನು ಪಡೆದು ಪುನಃ ಗಾಲವನಿಗೆ ಒಪ್ಪಿಸುತ್ತಾರೆ. ಗಾಲವನು ಅವಳನ್ನು, ಕುದುರೆಗಳನ್ನು ಮತ್ತು ಒಟ್ಟಾದ ಎಲ್ಲ ಸಂಪತ್ತನ್ನು ಗುರುಕಾಣಿಕೆಯಾಗಿ ವಿಶ್ವಾಮಿತ್ರನಿಗೆ ಕೊಟ್ಟು ಗುರುಕಾಣಿಕೆಯ ಋಣ ತೀರಿಸಿಕೊಳ್ಳುತ್ತಾನೆ. ಗುರು ವಿಶ್ವಾಮಿತ್ರ ಕೂಡ ಅವಳಲ್ಲಿ ಒಂದು ಮಗುವನ್ನು ಪಡೆದು ಮರಳಿ ಗಾಲವನಿಗೆ ಹಿಂದಿರುಗಿಸುತ್ತಾನೆ. ಹರ್ಯಶ್ವ, ದಿವೋದಾಸ, ಉಶೀನರ, ವಿಶ್ವಾಮಿತ್ರರ ಜೊತೆಗಿನ ದೀರ್ಘ ಅವಧಿಯ ಗುಲಾಮಗಿರಿಯ ನಂತರ ತಂದೆಯು ಸ್ವಯಂವರ ಪದ್ಧತಿಯಿಂದ ಮಾಧವಿಗೆ ಮದುವೆ ಮಾಡಲು ಯೋಚಿಸುತ್ತಾನೆ. ಇದಕ್ಕೆ ರಾಜರು, ಶ್ರೀಮಂತರು, ಯುವಕರು ಬರುತ್ತಾರೆ. ಆದರೆ ಆ ಕಾಲಕ್ಕಾಗಲೇ ಮಾಧವಿಯು ಜೀವನದ ಬಗ್ಗೆ, ಗಂಡಸಿನ ಗುಲಾಮಳಾಗಿ ಇರುವುದರ ಬಗ್ಗೆ ಜುಗುಪ್ಸೆಯನ್ನು ಹೊಂದಿದ್ದು ಸ್ವಯಂವರಕ್ಕೆ ಬಂದ ಎಲ್ಲರನ್ನೂ ತಿರಸ್ಕರಿಸಿ ಕಾಡಿಗೆ ಹೋಗುತ್ತಾಳೆ. ಅಲ್ಲಿ ಅವಳು ಪುರುಷ ಸಮಾಜದ ದುಷ್ಟ ಹಿಡಿತದಿಂದ ಪಾರಾಗಲು ದೇವರನ್ನು ಪ್ರಾರ್ಥಿಸುತ್ತಾಳೆ

ಮಹಾಭಾರತದ ಕಾಲಕ್ಕಾಗಲೇ ಗುಲಾಮಗಿರಿ ಪದ್ಧತಿ ಶಕ್ತವಾಗಿ ರೂಪುಗೊಂಡಿತ್ತು. ಹೆಂಗಸರನ್ನು ಕೊಂಡುಕೊಳ್ಳುವುದು, ಮಾರುವುದು ಅಥವಾ ಬಾಡಿಗೆಗೆ ಕೊಡುವುದು ಚಾಲ್ತಿಯಲ್ಲಿತ್ತು. ಸ್ವಂತ ಹೆಂಡತಿಗೆ ಹುಟ್ಟಿದ ಮಕ್ಕಳು ಆಸ್ತಿಯ ಉತ್ತರಾಧಿಕಾರಿಗಳಾಗುವುದು, ಗುಲಾಮ ಹೆಂಗಸರಲ್ಲಿ ಹುಟ್ಟಿದ ಮಕ್ಕಳು ಸಂಪತ್ತನ್ನು ಹೆಚ್ಚಿಸುವ ಕೆಲಸಗಾರರಾಗುವುದು ಮಹಾಭಾರತದಲ್ಲಿ ವ್ಯಕ್ತವಾಗುವ ಜೀವನ ಪದ್ಧತಿ. ಮಾಧವಿಯ ಕಥೆ ಇದನ್ನು ನಿರೂಪಿಸುತ್ತದೆ.

(ಮಹಾಭಾರತ; ಉದ್ಯೋಗ ಪರ್ವ, ೧೨೦).

ಪಿತೃವಿನ ಅಧಿಕಾರ ವ್ಯಾಪ್ತಿ ಮಗಳನ್ನು, ಮಕ್ಕಳನ್ನು ಮತ್ತು ಪತ್ನಿಯನ್ನು ಒತ್ತೆ ಇಡುವುದಕ್ಕೆ ಮಾತ್ರ ಇಲ್ಲಿ ಸೀಮಿತಗೊಂಡಂತಿಲ್ಲ, ಬದಲಾಗಿ ಅವರ ಜೀವನದ ಮೇಲೂ ಪರಿಪೂರ್ಣ ಅಧಿಕಾರ ಸ್ಥಾಪಿಸಿ, ಅದರಿಂದ ಬಿಡುಗಡೆ ಇಲ್ಲದಂತಹ ಬಂಧನವಾಗಿ ಪರಿಣಮಿಸುವಂತಿದೆ. ಇಚ್ಛೆ ಬಂದಾಗ ಮಾರಾಟ ಮಾಡುವಂತೆ ಕೊಲ್ಲುವ ಅಧಿಕಾರವೂ ಪುರುಷನಿಗೆ ಇತ್ತು. ಪ್ರಾಚೀನ ಗೋತ್ರಪದ್ಧತಿಯಲ್ಲಿ ಸ್ತ್ರೀಯರು ಅನುಭವಿಸುತ್ತಿದ್ದ ಸ್ವಾತಂತ್ರ್ಯಕ್ಕೂ ಗುಲಾಮಗಿರಿ ಪದ್ಧತಿಯಲ್ಲಿನ ಸ್ತ್ರೀಯರ ಬದುಕಿಗೂ ಅಜಗಜಾಂತರ. ಗುಲಾಮಗಿರಿಯ ನೀತಿ ನಿಯಮಗಳನ್ನು ಒಳಗೊಂಡ ಪಿತೃಸತ್ತೆಯ ವ್ಯವಸ್ಥೆಯೊಳಗೆ ಹೆಂಡತಿ, ಮಕ್ಕಳು, ಗುಲಾಮರನ್ನು ಆಸ್ತಿ ಎಂಬಂತೆ ಪರಿಗಣಿಸುವ ಮೂಲಕ ಪುರುಷ ಅವರ ಮೇಲೆ ಸರ್ವಸ್ವಾಮ್ಯವನ್ನು ಸಾಧಿಸಿದ್ದುದು ಕಂಡುಬರುತ್ತದೆ. ಇಲ್ಲಿ ಸ್ತ್ರೀಯರು ಹಳೆಯ ಅಥವಾ ಮೊದಲಿನ ಸಮಾನ ಸ್ಥಾನಮಾನಗಳಿಗಾಗಿ ಸಾಕಷ್ಟು ಹೋರಾಟ ನಡೆಸಿದ್ದಾರೆ ಎಂಬುದು ಗಮನಾರ್ಹ ವಿಚಾರ. ಆದರೆ ಸ್ತ್ರೀಯರ ಹೋರಾಟವನ್ನು ಗುಲಾಮರ ಯಜಮಾನ ಸಾಕಷ್ಟು ಕ್ರೂರವಾಗಿಯೇ ಹತ್ತಿಕ್ಕುತ್ತಿದ್ದುದೂ ವ್ಯಕ್ತವಾಗುತ್ತದೆ. ಮಹಾಭಾರತದಲ್ಲಿ ಬರುವ ಸುದರ್ಶನ- ಓಘವತಿ; ಗೌತಮ-ಗೌತಮಿ; ಜಮದಗ್ನಿ-ರೇಣುಕೆಯರ ಸಂಬಂಧ ಸ್ವರೂಪಗಳಲ್ಲಿ ಮಾತ್ರವಲ್ಲದೆ ಮಹಾಭಾರತದ ಪ್ರಧಾನ ಕಥಾ ಭೂಮಿಕೆ ಅಂಬೆ-ಅಂಬಿಕೆ-ಅಂಬಾಲಿಕೆ; ಕುಂತಿ, ಗಾಂಧಾರಿ, ದ್ರೌಪದಿಯರಂಥ ಸ್ತ್ರೀಯರ ಜೀವನಗಳಿಂದಲೂ ಪಿತೃನಿಷ್ಠ ಗುಲಾಮ ಪದ್ಧತಿಯೊಳಗೆ ಅವರ ಬದುಕು ಹೇಗೆ ಪರಿವರ್ತನೆಗೊಂಡಿದೆ ಎಂಬುದಕ್ಕೆ ಪುರಾವೆಗಳು ಸಿಗುತ್ತವೆ.

ನೇರವಾಗಿ ಮಾಧವಿಯ ರೂಪಕ ವಸಾಹತುಶಾಹಿ ಸಂದರ್ಭದಲ್ಲಿ ಆಧುನಿಕ ನಾಟಕ, ಕಾದಂಬರಿಗಳ ರೂಪದಲ್ಲಿ ಕಥನವಾಗಿ ಮೈದಾಳುವ ಹೊತ್ತಿಗೆ ಇದಕ್ಕೆ ಒಂದು ವ್ಯವಸ್ಥೆಯ ಚೌಕಟ್ಟು ಒದಗಿಬರುತ್ತದೆ ಮತ್ತು ಅದರಿಂದಾಗಿಯೇ ಇಲ್ಲಿ ನ್ಯಾಯ-ಅನ್ಯಾಯಗಳ ಜಿಜ್ಞಾಸೆಗಳೂ, ಬಿಕ್ಕಟ್ಟುಗಳೂ ಉದ್ಭವಿಸಿಬಿಡುತ್ತವೆ. ತಿರುಮಲಾಂಬ ಅವರ 'ವಿವೇಕೋದಯ'ದಲ್ಲಿ ನಾಟಕಾರಂಭದಲ್ಲಿನ ಸೂತ್ರಧಾರ ಮತ್ತು ನಟರ ಮಾತುಗಳಲ್ಲಿಯೇ ಈ ಅಂಶವು ಪ್ರಕಟವಾಗುತ್ತದೆ :

**ಸೂತ್ರ :** ಅಹುದು, ಪೂರ್ವಾಪರ ವಿವೇಕವನ್ನು ಉಂಟುಮಾಡುವಂಥ ಸತ್ಕಥಾ ಭಾಗವನ್ನು ಪ್ರದರ್ಶಿಸಲು ನಿಶ್ಚಯಿಸಿರುವೆನು.

**ನಟ :** ಅದಾವುದು ?

**ಸೂತ್ರ :** ವಿವೇಕೋದಯವು !

**ನಟ :** ವಿವೇಕೋದಯವೆಂದರೆ, 'ವಿವೇಕ ವಿಜಯ'ವೆಂಬ ನಾಟಕದಂತೆ ಅದೊಂದು ಮನೋ ನಿಗ್ರಹ ನಿಧಾನ ಗ್ರಂಥದ ಹೆಸರೇನು ?

**ಸೂತ್ರ :** ವಿವೇಕ ವಿಜಯವು, ಮಾಯಾಪ್ರಪಂಚದ ಕಾಮ-ಕ್ರೋಧಾದಿಗಳ ದಿಗ್ವಿಜಯ ವೃತ್ತಾಂತವನ್ನು ನಿರೂಪಿಸುವುದು. ಇದು ಹಾಗಿಲ್ಲ. ಹಠ,




ದುರಭಿಮಾನ, ಮತಾಂಧತೆಗಳು ಅನಿಷ್ಟಕ್ಕೆ ಹೇಗೆ ಕಾರಣವಾಗುವುದೆಂಬುದನ್ನು ಪ್ರಸಿದ್ಧ ಪುರುಷರ ಚರಿತೆಗಳ ಉದಾಹರಣೆಯಿಂದ ತಿಳಿಯಪಡಿಸುವುದು.

**ನಟ :** ಹಾಗಾದರೆ ಈ ವಿವೇಕೋದಯವೆಂಬುದು ಯಾವ ಮಹಾಪುರುಷರ ಚರಿತೆ ? ಇದಕ್ಕೆ ಆ ಮಹಾಪುರುಷರ ಹೆಸರನ್ನಿರಿಸಲು ಕಾರಣವೇನು ?

**ಸೂತ್ರ :** ಗಾಲವ, ವಿಶ್ವಾಮಿತ್ರ, ಯಯಾತಿ ಈ ಮೂವರ ವಿಚಾರವನ್ನೂ ಒಳಗೊಂಡು ಮೇಲೆ ಹೇಳಿದಂತೆ ವಿವೇಕವನ್ನುಂಟುಮಾಡುವುದರಿಂದ 'ವಿವೇಕೋದಯ' ಎಂಬ ಹೆಸರನ್ನು ಪಡೆದಿರುವುದು. (ಹಿತೈಷಿಣಿಯ ಹೆಜ್ಜೆಗಳು : ೧೯೯೨; ಪುಟ : ೬೭೨.)

ಹೀಗೆ ಪುರುಷನ ಹಠ, ದುರಭಿಮಾನ, ಮತಾಂಧತೆಗಳಿಗೆ ವಿವೇಕವನ್ನು ಉಂಟುಮಾಡುವ ಮೂಲದಲ್ಲಿ ಮಾಧವಿಯ ತ್ಯಾಗ, ಸಹನೆ, ಪಿತೃವಾಕ್ಯ ಪಾಲನೆಯ ಚೌಕಟ್ಟನ್ನು ಒದಗಿಸಲಾಗಿದೆ. ಆದರೆ ಅನುಪಮಾ ಅವರ ಕಾದಂಬರಿಯಲ್ಲಿನ ಮಾಧವಿಯ ಬದುಕು ತಾನು ಗುಲಾಮಳಾಗಿ ಬದುಕಬೇಕಾದ ಅನಿವಾರ್ಯತೆಯನ್ನು, ತಾಯಿಗೆ ಹೆತ್ತ ಮಕ್ಕಳ ಮೇಲಿನ ಹಕ್ಕಿಲ್ಲದ ವ್ಯವಸ್ಥೆಯನ್ನು ತಿರಸ್ಕರಿಸಲು ಅರಣ್ಯ ಸೇರುವಲ್ಲಿ ಮುಕ್ತಾಯವಾಗುತ್ತದೆ. ಯಾವ ಸಂದರ್ಭದಲ್ಲಿಯೂ ಸಿಗದೇ ಇದ್ದ ರಿಯಾಯಿತಿಯೊಂದು ಮಾಧವಿಗೆ ಇಲ್ಲಿ ಸಿಕ್ಕಿಬಿಡುತ್ತದೆ.

ಮಾಧವಿ ಹಾರ ಹಿಡಿದುಕೊಂಡು ತಂದೆಯಿದ್ದಲ್ಲಿಗೆ ಬಂದಳು. ಯಯಾತಿ ಆತಂಕದಿಂದ ನುಡಿದ,

''ಅವಸರವಿಲ್ಲ ಮಗಳೇ, ಇನ್ನೊಂದು ಸಾರಿ ರಾಜಕುಮಾರರನ್ನು ' ನೋಡಿ ಬಾ. ಕ್ಷಣದಲ್ಲಿ ಕೈಗೊಳ್ಳೋ ನಿರ್ಧಾರ ಇದಲ್ಲ!'' ಮಾಧವಿ ಕಿರುನಗೆ ನಕ್ಕಳು. ಮನಸ್ಸಿನಲ್ಲಿ ಆಗಲೇ ನಿರ್ಧಾರವಾಗಿದ್ದುದರಿಂದ ಅವಳ ಮುಖ ಪ್ರಶಾಂತವಾಗಿತ್ತು. ಅವಳು ದಿಟ್ಟ ಸ್ವರದಲ್ಲಿ ತಂದೆಗೆ ಹೇಳಿದಳು, ''ಅಪ್ಪಾ ಹಿಂದೆ ಒಂದು ಸಾರಿಯೂ ನನ್ನ ಭವಿಷ್ಯ ನಿರ್ಧರಿಸಿಕೊಳ್ಳೋಕೆ ನನಗೆ ಅವಕಾಶವಿರಲಿಲ್ಲ. ಈಗ ಆ ಹಕ್ಕನ್ನು ಕೊಟ್ಟಿದ್ದೀರಿ. ನನಗಿಷ್ಟ ಬಂದಹಾಗೆ ನಾನು ಮಾಡಬಹುದಲ್ಲವೆ ? ತಂದೆಯೇ, ನನಗೆ ಸ್ವಯಂವರ ಬೇಡ. ನಾನು ಯಾರನ್ನೂ ಪತಿಯಾಗಿ ವರಿಸಲಾರೆ. ನನ್ನ ದೇಹವನ್ನು ನಾಲ್ಕು ಮಂದಿ ಭೋಗಿಸಿ ಸುಖ ಪಟ್ಟಿದ್ದಾರೆ. ಪರಲೋಕದ ಬಾಧೆ ನನಗಿಲ್ಲ. ನಾನು ಆತ್ಮೋದ್ಧಾರಕ್ಕಾಗಿ ಅರಣ್ಯಕ್ಕೆ ಹೋಗಿ ತಪಸ್ಸು ಮಾಡ್ತೀನಿ. ವನವೇ ನನ್ನ ವರ! ನನ್ನನ್ನು ಬಿಡಿ!'' ಹಾಗೆನ್ನುತ್ತಾ ಮಾಧವಿ ಹಾರವನ್ನು ಎಸೆದು ಅವರೆಲ್ಲರನ್ನೂ ತಿರಸ್ಕರಿಸಿ ಮಂಟಪ ದಾಟಿ ಅರಣ್ಯದ ಕಡೆಗೆ ನಡೆದಳು (ಅನುಪಮಾ ನಿರಂಜನ; ೧೯೭೬; ಪುಟ ೨೧೦). ಅನುಪಮಾ ಅವರ ಕಾದಂಬರಿಯ ಮಾಧವಿ ನಿರ್ದಿಷ್ಟ ಸಾಮಾಜಿಕ ಸಂದರ್ಭದ ಒಳಗೆ ಪ್ರಜ್ಞಾಪೂರ್ವಕವಾಗಿ ಕಡೆದ ಶಕ್ತ ರಚನೆಯಾಗಿದೆ. ಹೀಗಾಗಿ ಸ್ತ್ರೀಯರ ಬದುಕಿನ ಹಿನ್ನೆಲೆಯಲ್ಲಿ ಗಮನಿಸಿದರೆ ೨೦ನೇ ಶತಮಾನದ ಪೂರ್ವಾರ್ಧದ ಸಾಮಾಜಿಕ ತಲ್ಲಣ ದಿಗ್ಭ್ರಾಂತಿಗಳೆಲ್ಲ ಮಾಧವಿಯ ಜೊತೆಗಿದೆ. ಇದರಿಂದಾಗಿ ಮಾಧವಿಯ ವ್ಯಕ್ತಿತ್ವ ಬರೀ ರೂಪಕವಾಗಿ ಉಳಿಯದೆ ಸ್ತ್ರೀಯ ಸಾಮಾಜಿಕ ಅಸ್ತಿತ್ವದ ಜೊಳ್ಳುತನವನ್ನು ಬಯಲಿಗೆಳೆಯುವ, ಮಾತ್ರವಲ್ಲದೆ ಅಸ್ತಿತ್ವದ ನೆಲೆಯಿಂದಲೇ ಸ್ವವಿಮರ್ಶೆಯ ಪರಂಪರೆಯನ್ನು ಹುಟ್ಟುಹಾಕುವ ವ್ಯಕ್ತಿತ್ವವಾಗಿ ರೂಪುಗೊಂಡಿದೆ. ಆತ್ಮಾಭಿಮಾನ ಹಾಗೂ ಅಸ್ಮಿತೆಗಳನ್ನು ಕೊನೆಯತನಕ ಕಾಪಿಡುವ ಆಯಾಮವನ್ನು ಗಣನೆಗೆ ತೆಗೆದುಕೊಂಡರೆ, ತಿರುಮಲಾಂಬ ಅವರ ಚಿತ್ರಣದ ಮಾಧವಿಗಿಂತ ಅನುಪಮಾ ಅವರ ಮಾಧವಿಯ ಪಾತ್ರ ಹೆಚ್ಚು ಪಕ್ವವಾಗಿ ಕಾಣಿಸುತ್ತದೆ. ಇದು ನಿಜವಾದರೂ 'ವಿವೇಕೋದಯ' ನಾಟಕದ ಮುಕ್ತಾಯವನ್ನು ಪ್ರತಿವಿಧಾನವನ್ನು ಹೊಸೆಯುವ ತಂತ್ರಾತ್ಮಕ ದೃಷ್ಟಿಯಿಂದ ಗಮನಿಸಬೇಕಾಗುತ್ತದೆ. ಈ ನಾಟಕದಲ್ಲಿ ಮಾಧವಿಯ ಕತೆ ಅವಳ ಅರಣ್ಯ ನಿರ್ಗಮನದಲ್ಲಿ ಮುಕ್ತಾಯಗೊಳ್ಳುತ್ತದೆ. ಪತಿತನಾದ ತಂದೆ ಯಯಾತಿಗೆ ಆಕೆ ಮತ್ತು ಆಕೆಯ ನಾಲ್ವರು ಮಕ್ಕಳು ಪುಣ್ಯಾರ್ಜನೆಯನ್ನು ನೀಡುವಲ್ಲಿಯವರೆಗೆ ಮುಂದುವರಿದಿದೆ. ಅನೂಚಾನವಾಗಿ ಬಂದ ನಂಬಿಕೆ : ಪುತ್ರನಿಂದಲೇ ತಂದೆಯಾದವನಿಗೆ ಮೋಕ್ಷವೆಂಬುದನ್ನು ಇಲ್ಲಿ ಅತೀ ಶಕ್ತವಾಗಿ ನಿರಾಕರಿಸಲಾಗಿದ್ದು, ಹೆಣ್ಣು ಮಕ್ಕಳಿಂದಲೂ ಹೆತ್ತವರಿಗೆ ವಿಮೋಚನೆ ಉಂಟಾಗುವುದು ಸಾಧ್ಯ ಎಂಬುದನ್ನು ನಿರೂಪಿಸಲಾಗಿದೆ. ಇಲ್ಲಿ ಮಾಧವಿಯ ಬದುಕು ಪುರುಷನಿಷ್ಠ ಸಮಾಜಕ್ಕೆ ಬದ್ಧ ಮಾತ್ರವಲ್ಲದೆ ಮಾಧವಿಯ ಸದ್ಯದ ಸ್ಥಿತಿ ಕೇವಲ ಒಂದು ಸರಳ ಸಮಸ್ಯೆ ಎಂದು ತಿಳಿದು ಈ ಸಮಸ್ಯೆಗೆ ನಿರ್ಣಯಾತ್ಮಕವಾದ ಪರಿಹಾರವನ್ನು ಹುಡುಕುವಲ್ಲಿ ತಿರುಮಲಾಂಬ ತನ್ಮಯರಾಗುತ್ತಾರೆ. ಹೀಗಾಗಿ ನಾಟಕದ ಒಳಗೆ ಪರಿಹಾರ ಕೂಡ ಪರಂಪರೆಯ 'ಮೂಲ'ದಲ್ಲಿ ಅರ್ಥಾತ್ ಬೇರಿನಲ್ಲಿ ಇದೆಯೆಂದು ನಿರ್ಣಯಿಸುವ ಮುಕ್ತಾಯವನ್ನು ಈ ನಾಟಕ ಹೊಂದಿದೆ. ನಾಟಕದ ಪ್ರತೀ ಕ್ಷಣದಲ್ಲೂ ಮಾಧವಿಯ ಶರಣಾಗತಿ ವಿಜೃಂಭಿಸುತ್ತದೆಯಾದರೂ ಪುರಾಣ

ಮತ್ತು ಆಧುನಿಕ ಮನೋಧರ್ಮಗಳನ್ನು ಮುಖಾಮುಖಿಯಾಗಿಸುವ 'ವಿವೇಕೋದಯ'ದಲ್ಲಿ ಆಧುನಿಕ ಚಿಂತನ ವಿನ್ಯಾಸವನ್ನು ಪರಂಪರೆಯ ಒಳಗಿಟ್ಟು ಕೆದಕಿ ನೋಡುವ ಪ್ರಯೋಗಶೀಲತೆ ಮಾತ್ರ ಗಮನಾರ್ಹವಾದುದು. ನಾಟಕ ಮತ್ತು ಕಾದಂಬರಿಯ ಹೋಲಿಕೆಯಲ್ಲಿ ಕಾಲ ಮತ್ತು ಮನೋಧರ್ಮದ ವ್ಯತ್ಯಾಸವಿದೆ. ಮುಖ್ಯವಾಗಿ ನಾಟಕವು ಹೊಂದಿರುವ ಪುರಾಣದ ಮೆಟಫಿಸಿಕಲ್ ಅರ್ಥಾತ್ ಆಧ್ಯಾತ್ಮಿಕ ಹಿಡಿತದಿಂದ ಮಾಧವಿ ಕಾದಂಬರಿಯು ಮುಕ್ತವಾಗಿದೆ. ಹೀಗಾಗಿ ಇರುವಿಕೆಗಾಗಿ ನಿರಂತರವೂ ಹೋರಾಡುವ ಕಥನ ಮಾಧವಿಯದ್ದಾಗಿದೆ. ಬದುಕಿನಲ್ಲಿ ಆಯ್ಕೆಗಳಿಲ್ಲದೆ ಒಬ್ಬರ ನಂತರ ಮತ್ತೊಬ್ಬರಂತೆ ನಾಲ್ಕು ವ್ಯಕ್ತಿಗಳೊಡನೆ ಗುಲಾಮಳಾಗಿ ಬದುಕಿದರೂ ಕೃತಿಯ ಆಂತರಿಕ ಶಿಲ್ಪದಲ್ಲಿ ಭವಿಷ್ಯದ ಕಡೆಗೆ ಅವಳ ಮನಸ್ಸು ತುಯ್ಯುತ್ತಿರುತ್ತದೆ. ಇಲ್ಲಿ ಅವಳಿಗೆ ಭೂತ ಮತ್ತು ಭವಿಷ್ಯಕಾಲ ಗೊತ್ತಿರುತ್ತದಾದರೂ ವರ್ತಮಾನ ಕಾಲ ಗೊತ್ತಿರುವುದಿಲ್ಲ. ಈ ಪರಿಣಾಮಕಾರಿ ರಚನಾ ತಂತ್ರದಿಂದಲೇ ಮಾಧವಿಗೆ ಆಕೆಯ ಮೇಲೆ ನಡೆಯುವ ಶೋಷಣೆಯನ್ನು ಗುರುತಿಸುವುದು, ಪ್ರಶ್ನಿಸುವುದು ಸಾಧ್ಯವಾಗುತ್ತದೆ. ಹೆಣ್ಣು ಎನ್ನುವ ದೇಹದ ನೆಲೆಯಿಂದ ಒಳಗಾಗುವ ಶೋಷಣೆಯ ವಿರುದ್ಧ ಸಿಡಿದೇಳುವಂಥ ಶಕ್ತಿ ಪ್ರಾಪ್ತವಾಗುತ್ತದೆ.

ಮೂಲಭೂತವಾಗಿ ಸ್ತ್ರೀವಾದವು ಕೂಡ ದೇಹದ ನೆಲೆಯಿಂದ ಒಳಗಾಗುವ ಪುರುಷನ ಶೋಷಣೆಯ ವಿರುದ್ಧ ಸ್ಪಷ್ಟವಾಗಿ ಹೋರಾಡುತ್ತದೆ. ಹೀಗಾಗಿಯೇ ಸ್ತ್ರೀವಾದಿ ಚಿಂತನೆಯು ಪುರುಷ ನಿರ್ಮಿತ 'ಕಟ್ಟಡ'ಗಳನ್ನು ಮತ್ತು ಅವುಗಳನ್ನು ಆಧರಿಸಿರುವ ಸಾಂಸ್ಕೃತಿಕ ಮಾದರಿಯ ಕಂಬಗಳನ್ನು ಒಡೆಯುವ ಕೆಲಸ ಮಾಡುತ್ತದೆ. ಸ್ತ್ರೀಯರನ್ನು ಮುಚ್ಚಿಹಾಕಿದ ಮತ್ತು ಅಂಚಿಗೆ ಸರಿಸಿದ ರಚನೆಗಳಿಂದ ಅವರನ್ನು ಬಿಡುಗಡೆಗೊಳಿಸಲು ಸ್ತ್ರೀವಾದವು ಶಕ್ತ ಪ್ರಯತ್ನಗಳನ್ನು ನಡೆಸುತ್ತಿದೆ. ಅದು ಕೇವಲ ಇರುವ ಸಮಾಜವನ್ನು ಮರುವ್ಯಾಖ್ಯಾನ ಮಾಡದೆ ಜಗತ್ತನ್ನು ಬದಲಾಯಿಸುವ ಗುರಿಯನ್ನು ಹೊಂದಿದೆ. ಪುರುಷರು ನಿರ್ಮಿಸಿದ ಮಹಿಳೆಯರ ಬಂಧನದ ಭಯಾನಕ ಕಟ್ಟಡಗಳನ್ನು ಒಡೆದು ನಮ್ಮ ದೇಶದ ಸಂಸ್ಕೃತಿಗೆ ಹೆಚ್ಚು ಸಮರ್ಪಕವಾದ ರೂಪವನ್ನು ಕೊಡುವ ನೆಲೆಯಿಂದ ಗಮನಿಸಿದರೆ 'ವಿವೇಕೋದಯ' ಪಾರ್ಶ್ವಿಕವಾಗಿ 'ಮಾಧವಿ' ಪ್ರಧಾನವಾಗಿ ನಿಂತುಬಿಡುವುದು ಸಹಜವಾಗಿದೆ. ಅನುಪಮಾ ಅವರ 'ಮಾಧವಿ' ಕಾದಂಬರಿ ಪುರಾಣದಿಂದ ಮುಕ್ತವಾದ ಅಂದರೆ ಪುರಾಣವನ್ನು ಸ್ಫೋಟಿಸಿದ, ಹೆಣ್ಣಿನ ಸಾಧ್ಯತೆಯನ್ನು ಶೋಧಿಸುವ ಪ್ರಯತ್ನವನ್ನು ಪರಿಗ್ರಹಿಸುವ ರಚನೆಯಾಗಿದೆ; ಇದು ವಾಸ್ತವವನ್ನು ಮೇಲುತೋರಿಕೆಗೆ ಮಾತ್ರ ಗಮನಿಸದೆ ವಾಸ್ತವದ ವಿವರಗಳಲ್ಲಿ ಪುನಾರಚನೆಗೊಂಡ ಪ್ರಾಚೀನ ಬದುಕು, ಅದರ ಮುಂಚಾಚುಗಳನ್ನು ವರ್ತಮಾನದುದ್ದಕ್ಕೂ ಹಾಯಿಸುವ ರೀತಿಯನ್ನು ಕಾಣಿಸುತ್ತದೆ. ಮಾಧವಿಯಿಂದ ಆರಂಭಗೊಂಡ, ದೇಹದ ಕಾರಣದಿಂದಾಗಿ ಸ್ತ್ರೀಯರ ಮೇಲೆ ನಡೆಯುವ ಮಾನಭಂಗ, ಅತ್ಯಾಚಾರ, ಸೂಳೆಗಾರಿಕೆಯಂಥ ಲೈಂಗಿಕ ಶೋಷಣೆಗಳು ನಿರಂತರವಾಗಿ ನಡೆಯುತ್ತಿವೆ. ಇದನ್ನು ಮಾಧ್ಯಮಗಳಲ್ಲಿ ಸ್ತ್ರೀಯರ ನಗ್ನ ದೇಹದ ಪ್ರದರ್ಶನದವರೆಗಿನ ಶೋಷಣೆಯ ಒಳಗಿನ ರಾಜಕೀಯ ವ್ಯಾಖ್ಯಾನವನ್ನಾಗಿ ವಿಸ್ತರಿಸಿಕೊಳ್ಳಬೇಕಾಗುತ್ತದೆ. ಎಲ್ಲ ಸಮಾಜಗಳಲ್ಲೂ ಹೆಣ್ಣಿನ ಮೇಲಿನ ದೌರ್ಜನ್ಯ ಪುರಾಣ-ಇತಿಹಾಸ-ವರ್ತಮಾನಗಳ ಉದ್ದಕ್ಕೂ ಜೀಕುತ್ತವೆ. ಹೀಗಾಗಿ ಸಮಾಜದಲ್ಲಿ ಪುರಾಣದ ಸ್ತ್ರೀಯರನ್ನು ಕಾಣುವ ಮನೋಭಾವ ಮತ್ತು ವರ್ತಮಾನದ ಸ್ತ್ರೀಯರನ್ನು ನೋಡುವ ಮನೋಭಾವ ಬದಲಾಗದೆ ಉಳಿದಿದೆ. ಇಂದಿಗೂ ಈ ರೀತಿಯ ಮನೋಭಾವಗಳನ್ನು ಸೃಷ್ಟಿಸುತ್ತಿರುವ ವಸಾಹತುಶಾಹಿಯ ಜ್ಞಾನಿಕ ಸಂಘಸಂಸ್ಥೆಗಳಾವುವು? ಅಂಥ ವಿಧ್ಯುಕ್ತ ಸಂಘ ಸಂಸ್ಥೆಗಳು ಹೆಣ್ಣನ್ನು ಆ ರೀತಿಗಳಲ್ಲೇ ಸೃಷ್ಟಿಸುವಲ್ಲಿ ಎಂಥ ಮನೋಭಾವಗಳು, ಯಾರ್‍ಯಾರ ಹಿತಾಸಕ್ತಿಗಳು ಅಡಗಿವೆ? ಈ ರೀತಿಯ ಚಾರಿತ್ರಿಕ ಅಡೆತಡೆಗಳನ್ನು ದಾಟಿ ಬರಲು ಹೆಣ್ಣಿಗೆ ಯಾವ ಬಗೆಯ ಹೋರಾಟದ ಅಗತ್ಯವಿದೆ?... ಇಂಥ ಪ್ರಶ್ನೆಗಳು ಬಹಳ ಮುಖ್ಯವೆಂದು ನಾನು ಭಾವಿಸುತ್ತೇನೆ. ಮತ್ತೊಂದು ಮಾತು: ಕಳೆದ ಎರಡು ಶತಮಾನಗಳಲ್ಲೇ ಆದರೂ ಸ್ತ್ರೀಯರು ಅನುಭವಿಸಿದ ಶೋಷಣೆ, ಅವರ ಬದುಕಿನಲ್ಲಾಗಿರುವ ಬದಲಾವಣೆ, ಇಷ್ಟೊಂದು ಸಣ್ಣ ಕಾಲಾವಧಿಯಲ್ಲಿ ಅವರಿಗಾದ ದೌರ್ಜನ್ಯತೆಯ ಅನುಭವ ಸ್ವರೂಪ, ಎಲ್ಲವೂ ಉಳಿದೆಲ್ಲ ಕಾಲಾವಧಿಯ ಅನುಭವಗಳಿಗಿಂತ ಮುಖ್ಯವಾದುದೆಂದು ಅನಿಸುತ್ತದೆ. ಇಂಥದೊಂದು ಪರಿಪ್ರೇಕ್ಷ್ಯದಿಂದ ನೋಡಿದಾಗ ಕಳೆದೆರಡು ಶತಮಾನಗಳ ಅತೀ ಮುಖ್ಯ ಯುದ್ಧ ಪರಿಣಾಮಗಳು, ಕೋಮುದಳ್ಳುರಿಗಳು ಬುಡಕಟ್ಟು, ಗ್ರಾಮೀಣ, ನಗರ ಪ್ರದೇಶಗಳಲ್ಲಿನ ಸ್ತ್ರೀಯರ ಮೇಲಿನ ದೌರ್ಜನ್ಯ, ಅತ್ಯಾಚಾರ-ಹತ್ಯೆಗಳೆಲ್ಲ ಬಹುಪಾಲು ಮರೆವಿನ ಕೂಪಕ್ಕೆ ಸಂದಿವೆ. ಸ್ತ್ರೀಯರ ಮೇಲೆ ನಡೆಯುತ್ತಿರುವ ವಿಧ್ವಂಸಕ ಕೃತ್ಯಗಳನ್ನು ಸಂಪೂರ್ಣವಾಗಿ ಸಮಾಜವು ಮರೆತೇಬಿಟ್ಟಿದೆಯೋ ಎಂಬ ಅನುಮಾನ ನಮ್ಮನ್ನು ಕಾಡುವುದು ಸಹಜ. ಎಷ್ಟೆಂದರೂ ಇತಿಹಾಸಪ್ರಜ್ಞೆಗೆ ಹೋಲಿಸಿದಾಗ ಪುರಾಣಪ್ರಜ್ಞೆ ಹೆಚ್ಚು ಅಮೂರ್ತವಾಗುವುದರಿಂದ ಅದಕ್ಕೆ ಅಷ್ಟು ಪ್ರಾಧಾನ್ಯವನ್ನು ಕೊಟ್ಟಲ್ಲಿ ಇತಿಹಾಸದ ಮೂರ್ತತೆಯನ್ನು ಅಷ್ಟರಮಟ್ಟಿಗೆ ಕಡೆಗಣಿಸಿದಂತಾಗುವುದೇನೋ, ಎಂಬೆಲ್ಲ ಸಂದಿಗ್ಧಗಳು ನಮ್ಮನ್ನು ತೀವ್ರವಾಗಿ ಕಾಡುತ್ತಿರುವುದು ನಿಜ.

ಕವಿತಾ ರೈ ಬಿ. ಆರ್.
ಜಯಶ್ರೀ ನಿಲಯ, ಶಾರದಾ ನಗರ, ಮಾಡುರು, ಕೋಟೆಕಾರ್
ಮಂಗಳೂರು, ದಕ್ಷಿಣ ಕನ್ನಡ

# ೫೬ನೇ ಗಣರಾಜ್ಯೋತ್ಸವದ ಸಂದರ್ಭದಲ್ಲಿ ಜನತೆಗೆ ಸರ್ಕಾರದ ಹಾರ್ದಿಕ ಶುಭಾಶಯಗಳು

"ಸಂವಿಧಾನದತ್ತ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಸರ್ವಾಂಗೀಣ ಪ್ರಗತಿಗೆ ನಾವು ಬದ್ಧರಾಗಲು ಪ್ರೇರಣೆ ನೀಡುವ ಸಂದರ್ಭ ಭಾರತದ ಗಣರಾಜ್ಯೋತ್ಸವ. ಸಮ್ಮಿಶ್ರ ಸರ್ಕಾರ ರಾಜ್ಯದಲ್ಲಿ ಜನತೆಯ ಸರ್ವತೋಮುಖ ಅಭಿವೃದ್ಧಿಗಾಗಿ ಯೋಜನಾಬದ್ಧ ಕಾರ್ಯಕ್ರಮಗಳನ್ನು ರೂಪಿಸಿದೆ. ಕಾಲಬದ್ಧ ಕಾರ್ಯಶೈಲಿಯೊಂದಿಗೆ ಗುರಿ ಸಾಧಿಸುವ ಅಚಲ ವಿಶ್ವಾಸ ನಮ್ಮದು." *- ಶ್ರೀ ಧರ್ಮಸಿಂಗ್*

ರಾಜ್ಯದಲ್ಲಿ ಪ್ರಥಮ ಬಾರಿಗೆ ಸಮ್ಮಿಶ್ರ ಸರ್ಕಾರ ಅಸ್ತಿತ್ವಕ್ಕೆ ಬಂದು ೮ ತಿಂಗಳು ಕಳೆದಿವೆ. ಈ ಅವಧಿಯಲ್ಲಿ ಸರ್ಕಾರ ಹಲವಾರು ರಚನಾತ್ಮಕ ಕಾರ್ಯಕ್ರಮಗಳ ಮೂಲಕ ಜನಮನ್ನಣೆ ಗಳಿಸಿದೆ ಹಾಗೂ ಕೇಂದ್ರ ಸರ್ಕಾರದ ಮೆಚ್ಚುಗೆಗೂ ಪಾತ್ರವಾಗಿದೆ.

- ರಾಜ್ಯದ ಆರ್ಥಿಕ ಶಿಸ್ತಿಗೆ ಯೋಜನಾ ಆಯೋಗದ ಪ್ರಶಂಸೆ. ದೇಶದಲ್ಲೇ ಅತ್ಯಂತ ಗರಿಷ್ಠ ಮೊತ್ತ ರೂ. ೧೩,೫೫೮ ಕೋಟಿ ಮೊತ್ತಕ್ಕೆ ಯೋಜನಾ ಆಯೋಗದ ಹಸಿರು ನಿಶಾನೆ.
- ಹೈದ್ರಾಬಾದ್ ಕರ್ನಾಟಕ ಪ್ರದೇಶದ ಅಭಿವೃದ್ಧಿಗೆ ಸಂವಿಧಾನದ ೩೭೧ರ ವಿಧೇಯಕಕ್ಕೆ ತಿದ್ದುಪಡಿ ತಂದು ವಿಶೇಷ ಸ್ಥಾನಮಾನ ನೀಡಲು ಸರ್ಕಾರ ಕೇಂದ್ರದ ಮನವರಿಕೆಗಾಗಿ ಸರ್ವಪಕ್ಷಗಳ ನಿಯೋಗ. ಈ ವಿಷಯ ಕೇಂದ್ರದ ತೀವ್ರ ಪರಿಶೀಲನೆಯಲ್ಲಿ.
- ಯೋಜನಾ ಆಯೋಗದ ಮೂಲಕ ಬೆಂಗಳೂರಿನಲ್ಲಿ ದಕ್ಷಿಣ ರಾಜ್ಯಗಳ ಮುಖ್ಯಮಂತ್ರಿಗಳ ಸಭೆ.
- ವೃತ್ತಿ ಶಿಕ್ಷಣಕ್ಕೆ ಏಕರೂಪದ ಶಾಸನ ತರಬೇಕೆಂಬ ರಾಜ್ಯದ ಪ್ರಸ್ತಾವನೆಗೆ ಕೇಂದ್ರದ ಪುರಸ್ಕಾರ ಪೂರಕವಾಗಿ ಬೆಂಗಳೂರಿನಲ್ಲಿ ಕೇಂದ್ರ ಮಾನವ ಸಂಪನ್ಮೂಲ ಸಚಿವರ ಅಧ್ಯಕ್ಷತೆಯಲ್ಲಿ ಎಲ್ಲಾ ರಾಜ್ಯಗಳ ಶಿಕ್ಷಣ ಸಚಿವರುಗಳ ಸಮ್ಮೇಳನ.
- ಏಕಕಾಲಕ್ಕೆ ಆರು ಸರ್ಕಾರಿ ವೈದ್ಯಕೀಯ ಕಾಲೇಜುಗಳಿಗೆ ಮಂಜೂರಾತಿ, ಹಾಸನದಲ್ಲಿ ಮೊದಲ ವೈದ್ಯಕೀಯ ಕಾಲೇಜಿಗೆ ಶಂಕುಸ್ಥಾಪನೆ. ಬೀದರ್, ಬೆಳಗಾವಿ, ರಾಯಚೂರು, ಶಿವಮೊಗ್ಗ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಪ್ರಕ್ರಿಯೆ ಆರಂಭ. ಮೊದಲ ಹಂತವಾಗಿ ರೂ. ೩೦ ಕೋಟಿ ಬಿಡುಗಡೆ.
- ಬೀದರ್‌ನಲ್ಲಿ ಪಶುವೈದ್ಯಕೀಯ ವಿಶ್ವವಿದ್ಯಾಲಯ ಕಾರ್ಯಾರಂಭ.
- ಸುಧಾರಿತ ವಿದ್ಯುತ್ ಪೂರೈಕೆಗೆ ಹಲವಾರು ಶಿಸ್ತುಬದ್ಧ ಕಾರ್ಯಕ್ರಮ.
- ಒ.ಎನ್.ಜಿ.ಸಿ.ಯೊಂದಿಗೆ ಒಪ್ಪಂದ.
- ಅನುದಾನಿತ ಶಾಲೆಗಳೂ ಸೇರಿದಂತೆ ೭ನೇ ತರಗತಿಯವರೆಗಿನ ಒಟ್ಟು ೧೯.೨೭ ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟದ ಅಕ್ಷರ ದಾಸೋಹದ ಸೌಲಭ್ಯ ವಿಸ್ತರಣೆ.
- ಕೃಷಿ ಕಾರ್ಮಿಕರು ಹಾಗೂ ಅಸಂಘಟಿತ ವಲಯಗಳ ಕಾರ್ಮಿಕರಿಗೆ ಯಶಸ್ವಿನಿ ಆರೋಗ್ಯ ವಿಮಾ ಯೋಜನೆಯ ವಿಸ್ತರಣೆ.
- ಕನ್ನಡಕ್ಕೆ 'ಶಾಸ್ತ್ರೀಯ ಭಾಷೆ' ಸ್ಥಾನಮಾನಕ್ಕೆ ಸಂಪುಟ ನಿರ್ಧಾರ. ಈ ಬಗ್ಗೆ ಕೇಂದ್ರಕ್ಕೆ ಆಗ್ರಹ.
- ಮುಖ್ಯಮಂತ್ರಿ ಗ್ರಾಮೀಣ ಅಭಿವೃದ್ಧಿ ನಿಧಿ : ೨೦೦೫-೦೬ನೇ ಸಾಲಿನಲ್ಲಿ ೨೦೦ ಕೋಟಿ ರೂ.ಗಳ ವೆಚ್ಚದಲ್ಲಿ ಪ್ರಮುಖ ಜಿಲ್ಲಾ ರಸ್ತೆಗಳ ಸುಧಾರಣೆಗೆ ಕ್ರಮ.

## ಪ್ರಗತಿಗೆ ಪ್ರೇರಕ - ಕರ್ನಾಟಕ


ಕರ್ನಾಟಕ ವಾರ್ತೆ




# ಬಾಂಡುಂಗ್ ಸಮಾವೇಶದ ಗುರಿ ಇಂದಿಗೂ ಪ್ರಸ್ತುತ

ಐವತ್ತು ವರ್ಷಗಳ ಹಿಂದೆ, ೧೯೫೫ರಲ್ಲಿ ಇಂಡೋನೇಶಿಯಾದ ಬಾಂಡುಂಗ್ ನಗರದಲ್ಲಿ ಹೊಸದಾಗಿ ಸ್ವತಂತ್ರಗೊಂಡಿದ್ದ ಏಶಿಯ-ಆಫ್ರಿಕ ಖಂಡದ ದೇಶಗಳ ಅಧಿಪತಿಗಳ ಸಮಾವೇಶವೊಂದು ಜರುಗಿತು. ಸುಮಾರು ಐವತ್ತೈದು ದೇಶಗಳು ಇದರಲ್ಲಿ ಭಾಗವಹಿಸಿದ್ದುವು. ಈ ಐತಿಹಾಸಿಕ ಸಮ್ಮೇಳನ ಎರಡು ರೀತಿಯಲ್ಲಿ ಮಹತ್ವ ಉಳ್ಳದ್ದಾಗಿತ್ತು. ಮೊದಲನೆಯದು, ಅಂದು ಎಚ್ಚೆತ್ತ ಏಶಿಯ ಮತ್ತು ಆಫ್ರಿಕ ಖಂಡದ ದೇಶಗಳು ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಹೆಮ್ಮೆಯಿಂದ ತಮ್ಮ ಕರ್ತವ್ಯವನ್ನು ನಿರ್ವಹಿಸಲು, ಶಾಂತಿ ಮತ್ತು ಸ್ವಾತಂತ್ರ್ಯವನ್ನು ಎತ್ತಿಹಿಡಿಯಲು ಮಾಡಿದ್ದಂಥ ನಿರ್ಧಾರ ಪ್ರಕಟವಾಗಿತ್ತು. ಎರಡನೆಯದು, ಈ ನಿರ್ಧಾರವನ್ನು ಕಾರ್ಯಗತಗೊಳಿಸಲು, ಅದಕ್ಕೆ ಒಂದು ಚಳವಳಿಯ ಸ್ವರೂಪ ನೀಡುವ ಅವಶ್ಯಕತೆಯನ್ನು ಮನಗಾಣಿಸಿದ್ದು. ಶಾಂತಿ, ಸ್ವಾತಂತ್ರ್ಯ, ಸೌಹಾರ್ದತೆ, ಪರಸ್ಪರ ಸಹಕಾರಗಳು ಮೂಲಮಂತ್ರವಾಗಿದ್ದ ಈ ಸಮ್ಮೇಳನ ಏಶಿಯ ಮತ್ತು ಆಫ್ರಿಕಾದ ದೇಶಗಳಲ್ಲಿ ನವಚೈತನ್ಯ ಮೂಡಿಸಿದ್ದಷ್ಟೇ ಅಲ್ಲದೆ, ಅಂತರರಾಷ್ಟ್ರೀಯವಾಗಿಯೂ ಪ್ರಾಮುಖ್ಯತೆ ಪಡೆಯಿತು. ಅರ್ಧ ಶತಮಾನ ಕಳೆದಿದ್ದರೂ ಈ ಸಮಾವೇಶದ ಗುರಿಗಳು ಇಂದಿಗೂ ಪ್ರಸ್ತುತ. ಸಾಮ್ರಾಜ್ಯಶಾಹಿ ದೇಶಗಳು ಮಿಲಿಟರಿ ಕೂಟಗಳನ್ನು ಹೊಸೆಯುತ್ತಿದ್ದು ಹೊಸದಾಗಿ ಸ್ವತಂತ್ರಗೊಂಡಿದ್ದ ದೇಶಗಳನ್ನು ಅದರಲ್ಲಿ ಸೆಳೆದುಕೊಳ್ಳಲು ನೋಡುತ್ತಿದ್ದ ಕಾಲ ಅದು. ಶೀತಲಯುದ್ಧದ ಅಂದಿನ ದಿನಗಳಲ್ಲಿ ಎರಡು ಮಹಾನ್ ಶಕ್ತರಾಷ್ಟ್ರಗಳ ಸೆಣಸಾಟದ ಮಧ್ಯೆ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು, ಅಭಿವೃದ್ಧಿ ಪಥದಲ್ಲಿ ಮುಂದೆ ಸಾಗುವುದು ಬಾಂಡುಂಗ್ ಸಮಾವೇಶದ ಪ್ರಧಾನ ಗುರಿಯಾಗಿತ್ತು. ಆಗ ಈ ಸ್ವತಂತ್ರ ರಾಷ್ಟ್ರಗಳಲ್ಲಿ ಬಹ್ವಂಶ ಕಂಡುಕೊಂಡ ಮಾರ್ಗ ಎರಡೂ ಕಡೆಯಿಂದ ದೂರ ಉಳಿದು, ಮಿಲಿಟರಿ ಕೂಟಗಳ ಜಾಲದಲ್ಲಿ ಸಿಕ್ಕಿಕೊಳ್ಳದೆ ಅಲಿಪ್ತ ನೀತಿ ಅನುಸರಿಸುವುದು. ಹಾಗಾಗಿ ಒಂದು ಬಗೆಯಲ್ಲಿ ಬಾಂಡುಂಗ್ ಸಮ್ಮೇಳನ ಅಲಿಪ್ತ ಚಳವಳಿಗೆ ಪ್ರೇರಕವಾಯಿತು ಎನ್ನಬಹುದು. ಮುಂದೆ ಆರು ವರ್ಷಗಳ ನಂತರ ೧೯೬೧ರಲ್ಲಿ ಅಸ್ತಿತ್ವಕ್ಕೆ ಬಂದ ಅಲಿಪ್ತ ಚಳವಳಿ ಕೆಲವೇ ವರ್ಷಗಳಲ್ಲಿ ಏಶಿಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕದ ಬಹುತೇಕ ರಾಷ್ಟ್ರಗಳನ್ನು ಆವರಿಸಿಕೊಂಡು ಅಂತರರಾಷ್ಟ್ರಿಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸಿದ್ದುದನ್ನು ಎಂದಿಗೂ ಮರೆಯಲಾಗದು. ಮೂಲತಃ ಸಾಮ್ರಾಜ್ಯಶಾಹಿ ವಿರೋಧಿಯಾಗಿದ್ದ ಅಲಿಪ್ತ ಚಳವಳಿಯ ಮುಖ್ಯ ಗುರಿ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಎತ್ತಿಹಿಡಿಯುವುದು, ಪರಸ್ಪರ ಸಹಕಾರದ ಮೂಲಕ ಆರ್ಥಿಕ ಸ್ವಾತಂತ್ರ್ಯ ಸಾಧಿಸುವುದು ಆಗಿತ್ತು. ಬಾಂಡುಂಗ್ ಸಮ್ಮೇಳನದ ಗುರಿಗಳೂ ಇವೇ ಆಗಿದ್ದುವು. ಹಾಗಾಗಿ ಈಗಲೂ ಅವು ಪ್ರಸ್ತುತ.

ಪ್ರಚಲಿತ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಏಕಶಕ್ತಿ ಕೇಂದ್ರ ಸ್ಥಾಪನೆಗೊಂಡಿದ್ದು, ಆರ್ಥಿಕ, ಶಸ್ತ್ರಾಸ್ತ್ರ ಮತ್ತು ಸೈನ್ಯಬಲದ ಪ್ರಾಬಲ್ಯದಿಂದ ಏಕಚಕ್ರಾಧಿಪತ್ಯದ ಸ್ಥಾಪನೆಯತ್ತ ಸಾಮ್ರಾಜ್ಯಶಾಹಿ ಶಕ್ತಿಗಳು ಮುಂದೆ ಸಾಗುತ್ತಿರುವ ಸಂದರ್ಭದಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವುದು ಹೆಚ್ಚು ಹೆಚ್ಚು ದುಸ್ತರವಾಗುತ್ತಿದೆ. ಆರ್ಥಿಕ ಸುಧಾರಣೆ, ಮುಕ್ತ ಮಾರುಕಟ್ಟೆ, ಉದಾರೀಕರಣ ಘೋಷಣೆಗಳ ಜಾಲ ಒಂದು ಕಡೆಯಾದರೆ, ಇವಕ್ಕೆ ಜಗ್ಗದವರ ಮೇಲೆ ಅಕ್ರಮವಾಗಿ ನಡೆಸುವ ಬೆದರಿಕೆ ಇನ್ನೊಂದು ಕಡೆ. ವಿಶ್ವವಾಣಿಜ್ಯ ಸಂಸ್ಥೆ, ವಿಶ್ವಬ್ಯಾಂಕ್, ವಿಶ್ವವಿತ್ತೀಯ ಸಂಸ್ಥೆ, ಸೈನ್ಯಬಲ ಇವೆಲ್ಲ ಅವರ ಬತ್ತಳಿಕೆಯಲ್ಲಿರುವ ಆಯುಧಗಳು. ಹಾಗಾಗಿ ಇಂದಿನ ಏಕಶಕ್ತಿ ಕೇಂದ್ರದ ಪರಿಸ್ಥಿತಿಯಲ್ಲಿ ಸಂಘಟಿತ ಪ್ರಯತ್ನವೊಂದೇ ಉಳಿವಿಗೆ ಮಾರ್ಗವಾಗಿದೆ. ಆದರೆ ದುರದೃಷ್ಟವಶಾತ್ ಅಂಥ ಸಂಘಟನೆಯ ಕೊರತೆ ಇಂದು ಎದ್ದು ಕಾಣುತ್ತಿದೆ. ಕಳೆದ ಎರಡು ಮೂರು ದಶಕಗಳಿಂದ ಅಲಿಪ್ತ ಚಳವಳಿ ಹೆಚ್ಚು ಕ್ರಿಯಾಶೀಲವಾಗಿಲ್ಲದಿರುವುದು ಅತಿದೊಡ್ಡ ದೌರ್ಬಲ್ಯವಾಗಿದೆ. ಬಾಂಡುಂಗ್ ಸಮಾವೇಶ ಹಾಗೂ ಅಲಿಪ್ತ ಚಳವಳಿ ಪ್ರಾರಂಭದ ಕಾಲಕ್ಕೂ ಇಂದಿನ ಪರಿಸ್ಥಿತಿಗೂ ಹೆಚ್ಚು ವ್ಯತ್ಯಾಸವೇನಿಲ್ಲ. ಸಾಮ್ರಾಜ್ಯಶಾಹಿಗಳ ಗುರಿ ಅಂದೂ ಇಂದೂ ಒಂದೇ ಆಗಿದೆ; ಅನುಸರಿಸುತ್ತಿರುವ ತಂತ್ರ ಮಾತ್ರ ಬದಲಾಗಿದೆ, ಅಷ್ಟೆ. ಹಾಗಾಗಿ, ಬಾಂಡುಂಗ್ ಸಮಾವೇಶದ ಐವತ್ತನೆಯ ವರ್ಷವನ್ನು ನೆನಪಿಸಿಕೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಅಲಿಪ್ತ ಚಳವಳಿಯನ್ನು ಪುನರುಜ್ಜೀವನಗೊಳಿಸುವ ಅವಶ್ಯಕತೆಯನ್ನು ಒತ್ತಿ ಹೇಳಬೇಕಾಗಿದೆ. ಜಾಗತೀಕರಣದ ಹಾವಳಿಯನ್ನು ತಡೆಗಟ್ಟಲು, ಅದರ ಹಾನಿಕಾರಕ ಪರಿಣಾಮಗಳನ್ನು ತಗ್ಗಿಸಲು ಅಂಥ ಚಳವಳಿಯ ಅವಶ್ಯಕತೆ ಹಿಂದೆಂದಿಗಿಂತಲೂ ಹೆಚ್ಚು ಅಗತ್ಯವಾಗಿದೆ. ವಿಶ್ವವಾಣಿಜ್ಯ ಸಂಸ್ಥೆಯ ಕಲಾಪಗಳಲ್ಲಿ ಶ್ರೀಮಂತ ರಾಷ್ಟ್ರಗಳ ಹಂಚಿಕೆಗಳನ್ನು ಎದುರಿಸಲು ಅಭಿವೃದ್ಧಿಶೀಲ ರಾಷ್ಟ್ರಗಳು ನಡೆಸಿದ ಸಂಘಟಿತ ಪ್ರಯತ್ನ ತಕ್ಕಮಟ್ಟಿಗೆ ಫಲಕಾರಿಯಾದ ನಿದರ್ಶನ ನಮ್ಮ ಮುಂದೆ ಇದೆ. ಭಾರತ ಈ ವಿಷಯದಲ್ಲಿ ಹೆಚ್ಚು ಮುತುವರ್ಜಿ ವಹಿಸುವುದು ಅಗತ್ಯವಾಗಿದೆ.

ಈ ಸಂದರ್ಭದಲ್ಲಿ ನಾವು ಲ್ಯಾಟಿನ್ ಅಮೆರಿಕದ ದೇಶಗಳಲ್ಲಿನ ಬೆಳವಣಿಗೆಗಳನ್ನು ವಿಶೇಷವಾಗಿ ಗಮನಿಸಬೇಕಾಗಿದೆ. ನೂರಾರು ವರ್ಷಗಳಿಂದ ಅಮೆರಿಕದ ನೆರಳಿನಲ್ಲಿಯೇ ಇದ್ದು ತೀವ್ರ ಶೋಷಣೆಗೀಡಾಗಿದ್ದ ಈ ರಾಷ್ಟ್ರಗಳಲ್ಲಿ ಈಗ ಹೊಸ ಜಾಗೃತಿ ಮೂಡಿದೆ. ವರ್ಲ್ಡ್ ಬ್ಯಾಂಕ್, ಐಎಂಎಫ್‌ಗಳ ಬಲೆಯಲ್ಲಿ ಸಿಕ್ಕಿಕೊಂಡು, ತೀವ್ರ ಆರ್ಥಿಕ ಸಂಕಷ್ಟಗಳನ್ನು ಅನುಭವಿಸಿದ ಅರ್ಜೆಂಟೈನಾ, ಬ್ರೆಜಿಲ್ ಮೊದಲಾದ ದೇಶಗಳ ವಿಚಾರ ನಮಗೆಲ್ಲ ತಿಳಿದಿದೆ. ಈ ರಾಷ್ಟ್ರಗಳು ಈಗ ಎಚ್ಚೆತ್ತುಕೊಂಡು ಪರ್ಯಾಯ ವ್ಯವಸ್ಥೆ ರೂಪಿಸುವ ಪ್ರಯತ್ನಗಳಲ್ಲಿ ತೊಡಗಿವೆ. ಈ ಪ್ರಯತ್ನದ ಯಶಸ್ಸಿಗೆ ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳ, ಮುಖ್ಯವಾಗಿ ಏಶಿಯ ಮತ್ತು ಆಫ್ರಿಕದ ರಾಷ್ಟ್ರಗಳ ಬೆಂಬಲ ಮತ್ತು ಸಹಕಾರ ಬೇಕಾಗಿದೆಯಲ್ಲದೆ, ಜರೂರು ಅಗತ್ಯವೂ ಆಗಿದೆ. ಈಚೆಗೆ ಭಾರತಕ್ಕೆ ಭೇಟಿ ನೀಡಿದ್ದ ವೆನಿಜುವೇಲದ ರಾಷ್ಟ್ರಾಧ್ಯಕ್ಷ ಹ್ಯೂಗೋ ಚಾವೇಜ್ ಈ ವಿಷಯವನ್ನು ಅತ್ಯಂತ ಸ್ಪಷ್ಟ ಮತ್ತು ನೇರ ಮಾತುಗಳಲ್ಲಿ ಹೇಳಿದ್ದಾರೆ. ವೆನಿಜುವೇಲದ ರಾಷ್ಟ್ರಪತಿಯೊಬ್ಬರು ಭಾರತಕ್ಕೆ ಭೇಟಿ ನೀಡಿದ್ದುದು ಇದೇ ಮೊದಲ ಬಾರಿಗೆ. ಅವರ ಭಾರತದ ಪ್ರವಾಸ ಕಾಲದಲ್ಲಿ ಮಾಡಿದ ಭಾಷಣವೊಂದರಲ್ಲಿ ಅಲಿಪ್ತ ಚಳವಳಿಯನ್ನು ಸಕ್ರಿಯಗೊಳಿಸುವ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಇದಕ್ಕಾಗಿ ಭಾರತದಿಂದ ಉಪಕ್ರಮವನ್ನು ಅಪೇಕ್ಷಿಸಿದ್ದಾರೆ. ಅದಲ್ಲದೆ ಪ್ರಧಾನಿ ಮನಮೋಹನ ಸಿಂಗ್‌ರೊಂದಿಗೆ ಮಾತುಕತೆಯ ನಂತರ ಬಿಡುಗಡೆ ಮಾಡಿರುವ ಸಂಯುಕ್ತ ಹೇಳಿಕೆಯಲ್ಲಿ ದಕ್ಷಿಣ ರಾಷ್ಟ್ರಗಳ ಸಾಮೂಹಿಕ ಮುಖವಾಣಿಯಾಗಿ ಅಲಿಪ್ತ ಚಳವಳಿಯನ್ನು ಪುನರ್‌ರೂಪಿಸುವ ಅವಶ್ಯಕತೆಯನ್ನು ಒತ್ತಿ ಹೇಳಲಾಗಿದೆ.

ವೆನಿಜುವೇಲದ ಅಧ್ಯಕ್ಷ ಚಾವೇಜ್ ಇಂದು ಎಚ್ಚೆತ್ತ ಲ್ಯಾಟಿನ್ ಅಮೆರಿಕದ ಪ್ರತೀಕವಾಗಿದ್ದಾರೆ. ತೈಲ ಸರಬರಾಜನ್ನು ಒಳಗೊಂಡಂತೆ ಭಾರತದೊಂದಿಗೆ ಹಲವಾರು ಸಹಕಾರ ಒಪ್ಪಂದಗಳಿಗೆ ಸಹಿ ಹಾಕಿರುವ ವೆನಿಜುವೇಲ, ತನ್ನ ತೈಲ ಕ್ಷೇತ್ರದಲ್ಲಿ ಸಹಭಾಗಿಯಾಗಲು ಕರೆ ನೀಡಿದೆ. ಅಧ್ಯಕ್ಷ ಚಾವೇಜ್ ಸ್ಪಷ್ಟ ಹಾಗೂ ದಿಟ್ಟವಾದ ಮಾತುಗಳಲ್ಲಿ ಅಮೆರಿಕದ ತೈಲ ರಾಜಕಾರಣವನ್ನು ಬಯಲಿಗೆಳೆದಿದ್ದಾರೆ. ಇದುವರೆಗೆ ಅಮೆರಿಕ ಮತ್ತು ಯುರೋಪಿಗೆ ಮಾತ್ರ ತೈಲ ಸರಬರಾಜು ಮಾಡುತ್ತ ಬಂದಿದ್ದ ವೆನಿಜುವೇಲ ಮುಂದೆ ಏಶಿಯ, ಆಫ್ರಿಕಾ ದೇಶಗಳಿಗೂ ಸರಬರಾಜು ಮಾಡಲಿದೆಯೆಂದು ಘೋಷಿಸಿದ್ದಾರೆ. ''ಹತ್ತೊಂಬತ್ತು ಇಪ್ಪತ್ತನೇ ಶತಮಾನಗಳ ಯುರೋಪು, ಅಮೆರಿಕಾಗಳ ಶತಮಾನವಾಗಿದ್ದರೆ, ಈ ಶತಮಾನ ಏಶಿಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕಗಳಿಗೆ ಸೇರಿದ್ದಾಗಿರುತ್ತದೆ. ನಾವು ಒಂದುಗೂಡಿದರೆ ಆರ್ಥಿಕವಾಗಿ ಮಾತ್ರವಲ್ಲದೆ, ಇತರ ಎಲ್ಲ ರೀತಿಯಲ್ಲಿಯೂ ಈ ಜಗತ್ತಿನಲ್ಲಿ ಅತ್ಯಂತ ಪ್ರಬಲಶಕ್ತಿಯಾಗಬಲ್ಲೆವು'' ಎಂಬ ಚಾವೇಜ್‌ರ ಮಾತುಗಳಲ್ಲಿ ಉತ್ಪ್ರೇಕ್ಷೆ ಏನಿಲ್ಲ, ಅದು ವಾಸ್ತವ ಸತ್ಯ. ಅದನ್ನು ನನಸಾಗಿಸುವುದು ಈ ಎಲ್ಲ ರಾಷ್ಟ್ರಗಳ ಕರ್ತವ್ಯವಾಗಿದೆ. ಸಾಮ್ರಾಜ್ಯಶಾಹಿ ಶಕ್ತಿಗಳಿಂದ ಮುಂಬರುವ ಅಪಾಯದ ಪೂರ್ಣ ತಿಳಿವಳಿಕೆ ಹೊಂದಿರುವ ಚಾವೇಜ್‌ರ ಕಳಕಳಿಯ ಕರೆಯೂ ಕೂಡ ಈ ದೇಶಗಳ ಐಕ್ಯತೆಯ ಸಾಧನೆಯಾಗಿದೆ.

ಸಿಐಘಾರ್ಕೆ
'ಚೌಬೀನ', ೪೮೯, ೩ನೇ 'ಅಡ್ಡರಸ್ತೆ', ಬನಶಂಕರಿ ಮೂರನೇ ಹಂತ, ೧ನೇ 'ಎ' ಮುಖ್ಯರಸ್ತೆ, ೩ನೇ ಬ್ಲಾಕ್,
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಚಾಚಾ ನೆಹರೂ ಮತ್ತು ಈಚಲು ಮರ

ಈರಪ್ಪ ಎಂ. ಕಂಬಳಿ





ಕನ್ನಡದ ಹಿರಿಯ ಕವಿ ಪುರೋಹಿತ ತಿರುನಾರಾಯಣಯ್ಯಂಗಾರ ನರಸಿಂಹಾಚಾರ್ಯ (ಪುತಿನ) ಅಂಥವರು ಕೂಡ ಈಚಲ ಮರ ಕುರಿತು ಪ್ರಬಂಧ ಬರೆದದ್ದು ಸಹಜವಾಗೇ ನನ್ನ ಕುತೂಹಲ ಕೆರಳಿಸಿತ್ತು. ಒಂದು ಕಾಲದಲ್ಲಿ ಹಿಂದುಳಿದ ಪ್ರದೇಶವಾದ ಬಿಸಿಲ ಸೀಮೆಯಲ್ಲಿ ನನ್ನಂಥವರಿಗೆ ಈಚಲ ಗಿಡ ಸಾಕ್ಷಾತ್ ಕಲ್ಪವೃಕ್ಷವೇ ಆಗಿದ್ದರೂ ಸಮಾಜದ ಉಚ್ಚವರ್ಗದ ಜನರ ಕಣ್ಣಲ್ಲಿ ಅದೇಕೋ ಉಪೇಕ್ಷೆಗೆ ಒಳಗಾಗಿ ಅಸ್ಪೃಶ್ಯತೆಯ ಸಂಕೇತವೇ ಆಗಿ ಉಳಿಯಿತು. ಬಹುಶಃ ಹೆಂಡ ಹನಿಸುತ್ತಿದ್ದ ಕಾರಣ ಮಾತ್ರಕ್ಕೆ ಅದಕ್ಕೆ ಆ ಅಸ್ಪೃಶ್ಯತೆಯ ಶಾಪ ತಟ್ಟಿರಬೇಕು. 'ಭುವನದ ಮಧುಗಂಗೆ ಧರೆಗಿಳಿದು ಬಾ, ಕಾದಿಹೆನು ತಪಿಸಿಹೆನು ತೃಷೆ ತಣಿಸು ಬಾ' ಎಂಬ ರಂಗ ಗೀತೆಯೊಂದು ನೆನಪಾಗುತ್ತದೆ. ಅಂತರಂಗದಲ್ಲಿ ಹೆಂಡದ ಹಪಾಹಪಿ ಇರುವ ಮನುಷ್ಯನಿಗೆ ಅದು ಬೇಕು, ಆದರೆ ಅದನ್ನು ಹನಿಸುವ ತಾಯಿಮರ ಮಾತ್ರ ಬಹಿರಂಗದಲ್ಲಿ ಬೇಡ. ಅಂತರ್ಯ-ಆಚರಣೆಗಳಲ್ಲಿ ಅದೆಂಥಾ ವಿರೋಧಾಭಾಸ ಸೃಷ್ಟಿಸಿಕೊಂಡಿದ್ದಾನಲ್ಲವೆ ? ಇರಲಿ.

ಚಾಚಾ ನೆಹರೂಗೆ ಮತ್ತು ಈಚಲು ಮರಕ್ಕೆ ಎಲ್ಲಿಯದೆಲ್ಲಿಯ ಸಂಬಂಧ ಅನ್ನಿಸುತ್ತದಲ್ಲವೆ? ಬನ್ನಿರಿ ಹೇಳುತ್ತೇನೆ. ನೆಹರೂ ಮನೆತನ ಅದೇ ಆಗ ನಮ್ಮ ದೇಶವನ್ನು ಸುಪರ್ದಿಗೆ ತೆಗೆದುಕೊಂಡ ಶುರುವಿನಲ್ಲಿ ನಾನಿನ್ನೂ ಕಣ್ಣು ಬಿಟ್ಟಿರಲಿಲ್ಲ. ಅದೇನಿದ್ದರೂ ನನ್ನ ಅಪ್ಪನ ಜಮಾನಾ ಅನ್ನಬಹುದು ಬೇಕಾದರೆ. ಅದು ಅರವತ್ತರ ದಶಕ. ಬರೀಮೈ ಗಾಂಧಿಯನ್ನು ರಾಷ್ಟ್ರಪಿತನೆಂದೂ ಗುಲಾಬಿ ಧರಿಸಿದ ಜವಾಹರಲಾಲರನ್ನು ಚಾಚಾ ನೆಹರು ಎಂದೂ ನಾವು ಗಿಳಿಪಾಠ ಒಪ್ಪಿಸುತ್ತಿದ್ದ ದಿನಗಳವು. ಅದು ನೆಹರೂ ಯುಗ – ನಮ್ಮ ದೇಶದ ಪಾಲಿಗೆ.

ಅಂಗಳದಲ್ಲಿ ಹಾಸಿದ್ದ ಈಚಲ ಚಾಪೆಯಲ್ಲಿ ಕೌದಿಯನ್ನು ಕವುಚಿ ಸಕ್ಕರಿನಿದ್ದೆಯಲ್ಲಿ ಮುಳುಗಿದ್ದ ಹುಡುಗ ನಾನು ಆಗಿನ್ನೂ. ಒಂದು ದಿನ ಹೊತ್ತಾರೆ ಎದ್ದು ಚರಿಗೆ ಹಿಡಿದು ಹೊರಹೋಗಿ ಬಂದು, ಕೈಗೆ ನೀರು ಹಾಕಿಸಿಕೊಳ್ಳುತ್ತಿದ್ದ ಅಪ್ಪ 'ನೇರು ಸತ್ತ' ಎಂದ ಮಾತು ದಿಗ್ಗನೇ ಎಚ್ಚರಿಸಿತ್ತು. ಆಗಲೇ ಪಂಚಾಯಿತಿ ಕಚೇರಿಯ ಮಾಳಿಗೆಗೆ ಬಿಗಿದಿದ್ದ ಆಕಾಶವಾಣಿ ತುತ್ತೂರಿ ರೊಂಯೆಂದು ಅಳುತ್ತಿತ್ತು. 'ಮುಂದೆ ಯಾರು ?' ಅನ್ನುವ ಚರ್ಚೆಯಲ್ಲಿ ದೇಶ ಮುಳುಗಿತ್ತು. ನನ್ನ ಅಪ್ಪ ಅತ್ಯಂತ ಭಾವುಕನಾಗಿ ವಿವರಿಸುತ್ತಿದ್ದ: 'ನೇರು ಕುಟುಂಬ ವಾಸಿಸುವ ಆನಂದ ಭವನ ಅದೆಷ್ಟು ದೊಡ್ಡದೆಂದರೆ, ಮನೆಯೊಳಗೇ ರೈಲು ಓಡಾಡುತ್ತದಂತೆ; ನೇರು ಬಟ್ಟೆಗಳು ವಿದೇಶದಿಂದಲೇ ಇಸ್ತ್ರೀ ಆಗಿ ಬರುತ್ತವಂತೆ; ರೂಪಾಯಿ ನೋಟು ಒಲೆಗಿಟ್ಟು ಚಾ ಮಾಡುತ್ತಾರಂತೆ...' ಮೊದಲಾದ ಅಂತೆ ಕಂತೆಗಳನ್ನು ಕೇಳುವಾಗ ಮುಗ್ಧ ಎಳೆಯರ ಮನದಲ್ಲಿ ಅದೆಷ್ಟು ಕುತೂಹಲ!

ರಾತ್ರಿ ಎಂಟರ ಹೊತ್ತಿಗೆ ಊರಿಗೆ ಊರೇ ಮಲಗಲು ಸಿದ್ಧವಾಗುತ್ತಿದ್ದರೆ, ಅತ್ತಕಡೆ ಊರ ಅಂಚಿನ ಹೆಂಡದಂಗಡಿಯಿಂದ ಚಪರಾಶಿ ಅಂಬಣ್ಣನ ಹಾಡು ಗಾಳಿಯ ಬೆನ್ನೇರಿ ಬರುತ್ತಿತ್ತು: 'ಕುಂಟ ಕುದರಿ ಮ್ಯಾಲಿ ಕುಣಕಂತ ಬರುತಾಳ ಈಚಲ ಮರದವ್ವ, ನಮ್ಮವ್ವಾ...?' ತಾರಕ ಸ್ವರದಲ್ಲಿ ತೇಲಿ ಬರುತ್ತಿದ್ದರೆ, ಅದರ ಬಗೆಗೆ ಯಾರೂ ತಲೆ ಕೆಡಿಸಿಕೊಳ್ಳುತ್ತಿದ್ದಿಲ್ಲ – ಅವರವರ ಆನಂದ ಅವರವರಿಗೆ.

ಕಾಲ ಕಾಯುವುದಿಲ್ಲ, ಅದರ ಮುಂದೆ ಯಾರೂ ಅನಿವಾರ್ಯವಲ್ಲ. ನೆಹರೂ ಅಸ್ತಂಗತರಾಗಿ ಮತ್ತೆರಡು ವರ್ಷಗಳೇ ಉರುಳಿದ್ದವು. ಪೊಲೀಸು ದಿರಿಸೆಂದರೆ ಆಗ – ಕೆಂಪು ಬುಟ್ಟಿಯಂತಹ ಟೊಪ್ಪಿಗೆ, ಲಂಡ ಚಣ್ಣ, ಕೈಯೊಳಗೊಂದು ಲಾಠಿ. ಮೀಸೆ ಬಿಟ್ಟವರಿಗೆ ಇನ್‌ಕ್ರಿಮೆಂಟು ಇದ್ದ ಕಾಲ. ಸುಮ್ಮನೇ ನೂಕಿದರೆ ಬಿದ್ದು ಹೋಗುತ್ತದೆನ್ನುವಂತಿದ್ದ, ನೆರಿಕೆಬಾಗಿಲು ಮೈನ ಕನಿಷ್ಠ ಬಿಲ್ಲೆಯೊಂದು ದಿನವಿಡೀ ಹೆಂಡದಂಗಡಿಯಲ್ಲೇ ಬಿದ್ದಿರುತ್ತಿತ್ತು. ಸಮಸ್ಯೆ ಏನಪಾ ಅಂದ್ರೆ, ಸಾಲಿ ಹುಡುಗರು ನಾವು ಯಾರಾದರೂ ಅತ್ತಕಡೆ ಹೋದಾಗ, ಅದರ ಕಣ್ಣಿಗೆ ಬಿದ್ದರೆ ಸಾಕು, 'ಲೇ ವಿದ್ಯಾರ್ಥಿ ಬಾ ಇಲ್ಲೀ' ಎಂದು ಕೂಗಿ ಕರೆಯುತ್ತಿತ್ತು. ಪೊಲೀಸರೆಂದರೆ ಹೆದರಿ ಪೈಜಾಮಗುಂಟ ಒದ್ದೆಮಾಡಿಕೊಳ್ಳುತ್ತಿದ್ದ ದಿನ ಅವು. ಸೇಂದಿ ವಾಸನೆಗೆ ಮೂಗು ಮುಚ್ಚಿಕೊಂಡು ಹತ್ತಿರ ಹೋದರೆ ಸಾಕು. ಜಬರ್‌ದಸ್ತಾಗಿ ಕೇಳುತ್ತಿದ್ದ ಒಂದೇ ಒಂದು ಪ್ರಶ್ನೆ: 'ಯಾರ ಮಗಲು, ಏನ್ ಆಗ್ಯಾಳ ಹೇಳು' ಆತ ಒಡ್ಡುತ್ತಿದ್ದ ಒಂದೇ ಯಕ್ಷ ಪ್ರಶ್ನೆ. ಹೇಳದಿದ್ದರೆ, ನಮ್ಮಲ್ಲಿದ್ದ ಪೆನ್ನು, ಪುಸ್ತಕ, ಅವ್ಯಾವೂ ಇಲ್ಲದಿದ್ದರೆ ತಲೆಯ ಮೇಲಿನ ಗಾಂಧಿ ಟೊಪ್ಪಿಗೆಯನ್ನಾದರೂ ಸೈ ಕಿತ್ತುಕೊಂಡು ಸರಿ ಉತ್ತರ ಹೇಳುವಂತೆ ಸತಾಯಿಸಿಬಿಡುತ್ತಿದ್ದ. ಆತನ ಉಪಟಳಕ್ಕೆ ಬೇಸತ್ತು ನಾವೆಲ್ಲ ಆ ಮಾರ್ಗವಾಗಿ ಓಡಾಡುವುದನ್ನೇ ಬಿಟ್ಟೆವು. ಆದರೆ, ಸುತ್ತಲ ಹಳ್ಳಿಗಳಿಂದ ಹೈಸ್ಕೂಲಿಗೆ ಬರುತ್ತಿದ್ದ ಹುಡುಗರು ಅದೇ ಮಾರ್ಗವಾಗಿ ಹೋಗಬೇಕು. ಆತನ ಕೈಗೆ ಸಿಕ್ಕಿದರೆ ತೀರಿತು. ಪಾಟೀಚೀಲ, ಸೈಕಲ್ಲು ಕಿತ್ತುಕೊಂಡು ಗೋಳಾಡಿಸುತ್ತಿದ್ದ. ಒಮ್ಮೆ ಮೋಡ ಕವಿದು ಈಗಲೋ

ಆಗಲೋ ಮಳೆ ಇಳಿಯುವ ಸಂಭವ. ಹಳ್ಳಿಯ ನನ್ನ ಗೆಳೆಯನಿಗೆ ಊರು ಸೇರುವ ಧಾವಂತ. ಕನಿಷ್ಠಬಿಲ್ಲೆ ಸೈಕಲ್ಲು ಸಮೇತ ವಶಕ್ಕೆ ತೆಗೆದುಕೊಂಡು ಕಾಡಿಸುತ್ತಿದೆ. 'ಯಾರ ಮಗಳು ಏನಾದರೇನು ? ನಮಗೇನು ಬಂತು ಬಿಡ್ರೀ, ಮಳಿ ಬರ್ಲಾಗೇತಿ ಲಗೂನ ನಾನು ಊರು ಸೇರಿಕ್ಯಾಬೇಕು' ಎಂದು ಅವ ಗೋಗರೆಯುತ್ತಲೇ ಇದ್ದ. ಬೆಕ್ಕಿಗೆ ಆಟ - ಇಲಿಗೆ ಪ್ರಾಣ ಸಂಕಟ. ಆತನ ನ್ಯೂಟ್ರೈಪ್ ಕ್ವಶ್ಚನ್‌ಗೆ ಕೊನೆಗೊಂದು ದಿನ, ಉತ್ತರ ಪತ್ತೆ ಹಚ್ಚಿದೆವು. 'ನೇರು ಮಗಳು ಪ್ರಧಾನಿ ಆಗ್ಯಾಳ'. ಸದರಿ ಕನಿಷ್ಠಬಿಲ್ಲೆಯ ದೃಷ್ಟಿ ನಮ್ಮತ್ತ ಹೊರಳುತ್ತಿದ್ದಂತೆಯೇ ಅದೇ ಉತ್ತರ ಒದರಿ ಕಾಲಿಗೆ ಬುದ್ಧಿ ಹೇಳುತ್ತಿದ್ದೆವು.

ಸೇಂದಿ ಮರ, ಸಿಂದಿ ಮರ ಎಂದೆಲ್ಲ ಕರೆಯುವ ಈ ಈಚಲ ಗಿಡಕ್ಕೆ ಅದರದೇ ಆದ ಇತಿಹಾಸವಿದೆ, ದೇಶೀತನವಿದೆ. ನನಗೂ ಇದಕ್ಕೂ ಇರುವ ಅವಿನಾಭಾವ ನಂಟಿನ ಪರಿಯ ಹೇಗೆ ಹೇಳಬೇಕೆಂಬುದೇ ನನ್ನ ಸಮಸ್ಯೆ. 'ಅಂಟಿದ ನಂಟಿನ ಕೊನೆಯ ಬಲ್ಲವರಾರು ಕಾಮಾಕ್ಷಿಯೆ ?' ಗಾಳಿಯ ಸೆಳಕೂ ಇಲ್ಲದ ರಣ ಬಿಸಿಲಿನ ಮಟ ಮಟ ಮಧ್ಯಾಹ್ನದ ಹೊತ್ತಿನಲ್ಲಿ ಅಷ್ಟು ದೂರದಲ್ಲಿ ಒಂಟಿಯಾಗಿ ನಿಂತ ಈಚಲ ಮರ ಕಂಡರೆ ನನ್ನ ಪ್ರತಿಬಿಂಬವನ್ನೇ ನೋಡಿದಂತಾಗುತ್ತದೆ. ಅದರ ಕಾಲಬುಡದಲ್ಲಿ ಬಿಸಿಲಗುದುರೆ ನಳನಳಿಸುತ್ತಿರುತ್ತದೆ. ಅಸಡ್ಡಾಳ ದೇಹ, ಎಣ್ಣೆ ಕಾಣದ ಹಿಪ್ಪಿಗೂದಲು, ಈಚಲ ಪೊರಕೆಯಂತೆ ಎರಡೂ ಕಿವಿಗಳ ಮೇಲೆ ಇಳಿಬಿದ್ದ ನನ್ನ ಆಗಿನ ಆಕಾರವನ್ನು ನೆನೆದರೆ, ಖಂಡಿತ ನಾನೂ ಒಂದು ಈಚಲ ಮರವೇ. ಹೀಗಾಗಿ ಈಚಲ ಮರದಲ್ಲಿ ನನ್ನನ್ನು, ನನ್ನಲ್ಲಿ ಈಚಲು ಮರವೇ ಕಾಣಿಸಿಕೊಂಡಂತಾಗಿ ಬೆಚ್ಚಿಬಿದ್ದು ಒಂದು ಕ್ಷಣ ಅದ್ವೈತ ತತ್ವವೇ ಅಮರಿಕೊಂಡಂತಾಗಿ ಆ ಸುಖದಲ್ಲಿ ನರಳುತ್ತೇನೆ. ಇದನ್ನೇ ನಾನು ಈಚಲು ಮರಕ್ಕೂ ನನಗೂ ಇರುವ ಅವಿನಾಭಾವ ಸಂಬಂಧವೆಂದು ಹೇಳಿದ್ದು. ಈ ಜಾಗತೀಕರಣದ ಹೊಸ್ತಿಲಲ್ಲಿ ನಿಂತು ಅದನ್ನೇ ಕನವರಿಸುತ್ತಿದ್ದೇನೆ – ಬಾಲ್ಯದ ಅಂಗಳಕ್ಕಿಳಿದಂತೆ !

ಮರಳುಗಾಡಿನಲ್ಲಿ ಖರ್ಜೂರವಿದ್ದಂತೆ, ನಮ್ಮ ಬರದ ನಾಡಿನಲ್ಲಿ ಈ ಈಚಲು ಮರ ಪ್ರಕೃತಿ ವ್ಯವಸ್ಥೆ ಮಾಡಿದ ಡೆಮ್ಮಿಯಂತೆ ತೋರುತ್ತದೆ. ನಾವೂ ಅದನ್ನೇ ಕೃತಾರ್ಥ ಭಾವದಿಂದ ಅಪ್ಪಿಕೊಂಡಿದ್ದೇವೆ. ಆಗಿನ್ನೂ ಸಮೃದ್ಧ ಮಳೆಗಾಲವಿತ್ತಾದುದರಿಂದಾಗಿ, ಹಳ್ಳ ಕೊಳ್ಳಗಳೆಲ್ಲ ತುಂಬಿ ಹರಿಯುತ್ತಿದ್ದಾಗ, ಮನುಷ್ಯನ ಹಂಗಿಲ್ಲದೆ ಈಚಲು ವನವೂ ದಟ್ಟವಾಗಿ ಹೆಣೆದುಕೊಂಡು ಬೆಳೆಯುತ್ತಿತ್ತು. ರಾಷ್ಟ್ರಪಿತನ ಹತ್ಯೆಯಾಗುತ್ತಿದ್ದಂತೆ ಗಾಂಧಿ ಕನಸಿನ ಗ್ರಾಮ ರಾಜ್ಯದ ಪರಿಕಲ್ಪನೆಯೂ ಮಸುಕಾಗುತ್ತಲೇ, ಮತ್ತೊಂದು ಕಡೆ ನೆಹರೂ ಪ್ರಣೀತ ಆಧುನಿಕ ಕೈಗಾರಿಕೆಗಳು ಬಡಾಯಿಸುತ್ತ ಬಂದವು. ಗಾಂಧೀವಾದಿಗಳೂ ನೆಹರೂ ತತ್ವಕ್ಕೆ ಮಣಿದು ತಾವಾಗೇ ಉಪಾಯವಾಗಿ ತಲೆಯ ಮೇಲೆ ಹೊತ್ತು ಕುಣಿಯುವಂತೆ ಮಾಡಲಾಯಿತು. ಮನುಷ್ಯ ಪ್ರಯತ್ನವಿಲ್ಲದೆ ಬೆಳೆದುನಿಲ್ಲುತ್ತಿದ್ದ ಈಚಲು ಮರ ತನ್ನ ದೇಶೀತನ ಉಳಿಸಿಕೊಂಡಂತೆಯೇ ಬಯಸಿ ಬಂದವರಿಗೆ ನೊರೆ ಉಕ್ಕುವ ಅಮೃತ ಉಣಿಸಿ ತನ್ನ ಪಾಡಿಗೆ ತಾನು ಸರ್ಕಾರಕ್ಕೆ ಆದಾಯ ತರುತ್ತಲೇ ಇತ್ತು. ಅಷ್ಟರಲ್ಲಿ ಸೇಂದಿಗಿಡ ಕಡಿಯುವ ಚಳವಳಿ ಹಮ್ಮಿಕೊಂಡ ಗಾಂಧೀವಾದಿಗಳ ಕೊಡಲಿಗೆ ಈಚಲು ಮರ ಮೈಕೊಟ್ಟಿತು. ಕುಡಿಯುವವರ ಸಂಖ್ಯೆಯೇನು ಕಡಿಮೆಯಾಯಿತೆ ಅದೂ ಇಲ್ಲ. ಬೇರೆ ಬೇರೆ ಮದ್ಯಗಳತ್ತ ಜನರನ್ನು ಒಲಿಯುವಂತೆ ಮಾಡಿದ ತಂತ್ರ ಅದರ ಹಿಂದೆ ಇತ್ತು. ಗಾಂಧೀವಾದಿಗಳನ್ನೇ ಒಲಿಸಿ ಕೈಗಾರಿಕೆಗಳತ್ತ ಹೋಗುವಂತೆ ಮಾಡಿದ – ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವ ಜಾಣತನ.

ಅದೇ ಆಗ ನಾವು ಅಕ್ಷರ ಪ್ರಪಂಚಕ್ಕೆ ಕಣ್ಣು ಕೀಲಿಸುತ್ತಿದ್ದ ಹುಡುಗರು. ಪಠ್ಯಗಳಲ್ಲಿ, ದಿನಪತ್ರಿಕೆಗಳಲ್ಲಿ ಅಚ್ಚಾಗಿರುತ್ತಿದ್ದ ನಿಲುವಂಗಿಯ ಎಡೆಯ ಮೇಲೆ ಕೆಂಪು ಗುಲಾಬಿ ಅಂಟಿಸಿಕೊಂಡ, ನೀಟ ಮೂಗಿನ ನೆಹರೂ ಚಿಕ್ಕಪ್ಪನ ಮಂದಸ್ಮಿತವನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತಲೇ ; ಬಣ್ಣ ಬಣ್ಣದ ಲಂಗದ ನಿರಿಗೆಗಳಲ್ಲಿ ಲಂಬಾಣಿ ಹೆಂಗಸರು ಬುಟ್ಟಿಯಲ್ಲಿ ಹೊತ್ತು ತರುತ್ತಿದ್ದ ಅದೇ ಗುಲಾಬಿ ಕಡುಗೆಂಪಿನ ಸವಿಯಾದ ಈಚಲು ಹಣ್ಣುಗಳು ಎಷ್ಟೊಂದು ಸೋವಿ. ಐದು ಪೈಸೆಗೂ ಪಾವು ತುಂಬಿ ಕೊಡುತ್ತಿದ್ದರು. ಅದನ್ನೆ ಖರ್ಜೂರದಂತೆ ಮೆದ್ದು, ಬೀಜವನ್ನು ಹಕ್ಕಿಗಳಂತೆ ಎಲ್ಲೆಂದರಲ್ಲಿ ಉಗಿಯುತ್ತಿದ್ದೆವು.

### ಕಳಂಕ

ರಾಜಕೀಯ

'ಕಳಂಕಿತ'ರ ಮಾತು ಹಾಗಿರಲಿ;

ಪ್ರಜಾಪ್ರಭುತ್ವದಲ್ಲಿ

ಎಲ್ಲರೂ 'ಕಳಂಕಿತ'ರೇ :

ಚುನಾವಣೆ ಸಮಯದಲ್ಲಿ

ಬೆರಳಿಗೆ ಹಚ್ಚುತ್ತಾರಲ್ಲವೆ,

ಅಳಿಸಲಾಗದ ಮಸಿ ?

(ಒಂದು ಚುನಾವಣೆ ಕಳೆದರೆ,

ಮತ್ತಾವುದೋ ಬರುತ್ತದೆ !)

ಸಿ.ಪಿ.ಕೆ.
ಮೈಸೂರು

ಮಳೆಗಾಲ ಕಚ್ಚಿಕೊಳ್ಳುತ್ತಿದ್ದಂತೆ, ಒಂದು ಬಾರಿ ಸರುವು ತುಂಬಿ ಹರಿದು ಹೋದರೆ ಸಾಕು. ಮರುದಿನ, ಸರುವಿನಲ್ಲಿ ಬಿಟ್ಟಿರುತ್ತಿದ್ದ ಆ ಉಸುಕಿನಲ್ಲಿ ನಳನಳಿಸುವ ಈಚಲ ಸಸಿ. ಚೋಟುಕಡ್ಡಿಯಿಂದ ಅದರ ಬುಡ ಗೆಬರಿದರೆ ವಾಹ್ ! ಬಾಣಂತಿ ಮೈಯಂತೆ ತೋರುತ್ತಿದ್ದ ಮೊಳಕೆಯೊಡೆವ ಈಚಲ ಬೀಜ ಎಷ್ಟೊಂದು ಮಧುರ. ಹಳೆಯ ಮೈಸೂರು ಕಡೆ ಬೀಜವನ್ನು ಮೊಳಕೆ ಬರಿಸಿ ತಿನ್ನುವ ಪರಿಪಾಠ ಆಗಿನ್ನೂ ನಮಗೆ ಗೊತ್ತಿರಲಿಲ್ಲ. ಆದರೆ, ಹುಡುಗರು ಹಿರಿಯರ ಅಪ್ಪಣೆಯಿಲ್ಲದೆ ಹಾಗೆ ಮರಳಿನಲ್ಲಿ ಮೊಳಕೆಯೊಡೆದ ಮೆತ್ತನೆಯ ಸವಿಯಾದ ಈಚಲು ಬೀಜವನ್ನು ಒರೆಸಿಕೊಂಡು ಮೆದ್ದದ್ದು ಎಲ್ಲಾದರೂ ಮರೆಯಲು ಸಾಧ್ಯವೆ ?

ಈಚಲು ಗರಿಗೆದರಿಕೊಂಡು ಬೆಳೆದು, ಒಂದು ಅಡಿಯಾಗುತ್ತಿದ್ದಂತೆ, ಕುಡುಗೋಲು ಕೊಡಲಿಗಳಿಗೆ ಬಲಿಯಾಗಿ, ನಡುವಿನ ಸುಳಿ ಕಿತ್ತರೆ ಅದೂ ಒಂದು ಸವಿ. ಅದನ್ನು 'ಈಚಲ ಕೊಬ್ಬರಿ' ಎಂದೇ ನಾವೆಲ್ಲ ಬಾಯ್ತುಂಬ ಕರೆಯುತ್ತಿದ್ದದ್ದು. ಮೇಲುವರ್ಗದ ಹುಡುಗರು ಬೇಯಿಸಿದ ಕೋಳಿ ತತ್ತಿ ತಿನ್ನಲು ಕದ್ದು ಬರುತ್ತಿದ್ದ ತೆರದಲ್ಲಿಯೇ, ನಮ್ಮ ಜೊತೆಗೆ ಈಚಲು ಕೊಬ್ಬರಿ ಮೆಲ್ಲಲೂ ಕದ್ದು ಬರುತ್ತಿದ್ದುದುಂಟು. ಆದರೆ, ಹೆಂಡ ಇಳಿಸುವ ಮೂಲಕ ಸರಕಾರಕ್ಕೆ ವರಮಾನ ತರುತ್ತಿದ್ದುದರಿಂದ ಈಚಲು ವನ ಗುತ್ತಿಗೆದಾರರ ಕೈವಶವಾಗಿ, ಅದಕ್ಕೂ ಕಾವಲುಗಾರರನ್ನು ನೇಮಿಸಲಾಯಿತು.

ಹಿಂದಿನ ರಾತ್ರಿ ಮನೆಗೆ ಮರಳದ ಎಮ್ಮೆಯನ್ನು ಹುಡುಕಿಕೊಂಡು ನಸುಕಿನಲ್ಲಿಯೇ ಒಮ್ಮೆ ಈಚಲು ವನ ಪ್ರವೇಶಿಸಿದ ನಾನೂ ನನ್ನ ಹತ್ತಿರದ ಬಂಧುವೂ ನೀರಾ ಕುಡಿಯುವ ಕುತೂಹಲಕ್ಕೆ ಬಿದ್ದೆವು. ಒಂದು ಕೂಗು ಹಾಕಿ ನೋಡಿ, ಪ್ರತಿಕ್ರಿಯೆ ಬಾರದೇ ಇದ್ದಾಗ, ಹತ್ತಿರದಲ್ಲಿ ಕಾವಲುಗಾರ ಇಲ್ಲವೆಂದು ನಿರ್ಧರಿಸಿ, ಆ ಅರೆಗತ್ತಲಿನಲ್ಲಿಯೇ ಈಚಲು ಮರವೊಂದನ್ನು ಹತ್ತಿ ಕಷ್ಟಪಟ್ಟು ಗೊಬ್ಬಿ (ಮಣ್ಣಿನ ಮಡಿಕೆ) ಇಳಿಸಿ ಆ ಸವಿಯಾದ ದ್ರವವನ್ನು ಮನಸೇಚ್ಛೆ ಕುಡಿಯುವಲ್ಲಿ ಮುಳುಗಿದ್ದೆವು. ಅಷ್ಟರಲ್ಲಿ ಹತ್ತಿರವೇ ಹೆಜ್ಜೆ ಸಪ್ಪಳ, ಹಿಂದೆಯೇ ಕಲ್ಲು ತೂರಿ ಬಂದ ಶಬ್ದಕ್ಕೆ ಬೆಚ್ಚಿ, ಸತ್ತೆವೋ ಕೆಟ್ಟೆವೋ ಎಂದು ಓಡಿ, ಅಂಗಿ ಹರಿದುಕೊಂಡು, ಮುಳ್ಳಿಂದ ಮೈಯೆಲ್ಲ ತರಚು ಗಾಯ ಮಾಡಿಕೊಂಡು ಒಂದೇ ಉಸಿರಲ್ಲಿ ಓಡಿ ಓಡಿ ಊರಿನ ಹತ್ತಿರಕ್ಕೆ ಬಂದು ನಿಂತು ದಣಿವಾರಿಸಿಕೊಂಡಿದ್ದೆವು. ಈಗ ಪಂಚತಾರಾ ಹೋಟೆಲುಗಳಲ್ಲಿ ಕೂತು ವಿದೇಶೀ ಮದ್ಯಗಳನ್ನು ಸವಿಯುವ ಅವಕಾಶ ಇದ್ದರೂ, ಬಾಲ್ಯದಲ್ಲಿ ಹಾಗೆ ಕದ್ದು ಕುಡಿದಿದ್ದರ ನೆನಪೇ ಈಗ ಅದೆಷ್ಟು ಮಧುರ. ಪ್ರತಿಯೊಂದೂ ಹಾಗೇ. ಕದ್ದು ಅನುಭವಿಸುವುದರಲ್ಲಿಯೂ ಒಂದು ಸೊಗಸು ಇರುತ್ತದೇನೋ ಎಂದೆಲ್ಲ ಅನ್ನಿಸುತ್ತದೆ.

ಬೆಳಗಿನ ಅರೆಗತ್ತಲೆಯಲ್ಲಿ ನೀರಾ ಆಗಿದ್ದ ದ್ರವ, ಸೂರ್ಯನ ಕಿರಣಗಳು ಸ್ಪರ್ಶಿಸುತ್ತಿದ್ದಂತೆ, ಪ್ರಕೃತಿಯ ಪ್ರಯೋಗಶಾಲೆಯಲ್ಲಿ ರಾಸಾಯನಿಕ ಕ್ರಿಯೆ ಜರುಗಿ ಅದು ಹೆಂಡವಾಗಿ ಪರಿವರ್ತನೆಗೊಂಡು ನೊರೆ ಉಕ್ಕಿ ಹರಿಯಲಾರಂಭಿಸುತ್ತದೆ. ಸೂರ್ಯೋದಯಕ್ಕೆ ಮೊದಲಿನ ಆ ಮಾಧುರ್ಯ ಮಾಗಿ, ಈಗ ಹುಳಿ-ಸವಿ-ಖಾರಗಳ ಹದವಾದ ಮಿಶ್ರಣವಾಗಿ 'ಸೇಂದಿ' ಎಂಬ ಅಭಿದಾನ ಹೊತ್ತು ಗೊಬ್ಬಿಗಳಲ್ಲಿ, ಗಡಿಗೆಗಳಲ್ಲಿ, ಕಟ್ಟಿಗೆ ಪೀಪಾಯಿಗಳಲ್ಲಿ ತುಂಬಿ ತೊನೆಯುತ್ತದೆ. ಒಂದಷ್ಟು ದೊಡ್ಡ ಪ್ರಮಾಣದಲ್ಲಿ ಸೇವಿಸಿದವರಿಗೆ ನಿಶೆಯೂ ಏರಿಸಿ ಓಲಾಡುವಂತೆ ಮಾಡುತ್ತದೆ. ಅದು ಅದರ ಅಂತಿಮ ಗುರಿ.

ಗುರಿ ಎಂದ ತಕ್ಷಣ ನೆನಪಾಗುತ್ತದೆ. ಸ್ವಾಮಿ ವಿವೇಕಾನಂದರು 'ಏಳಿ, ಎದ್ದೇಳಿ, ನಿಮ್ಮ ಗುರಿ ಮುಟ್ಟುವವರೆಗೆ ನೀವೆಲ್ಲಿಯೂ ನಿಲ್ಲಬೇಡಿ' ಎಂದು ಯುವ ಜನಾಂಗಕ್ಕೆ ಕರೆ ಕೊಟ್ಟಿದ್ದನ್ನು ಬಾಲ್ಯದಲ್ಲಿ ನಾವೆಲ್ಲ ಮಾತಿಗೆ ಮೊದಲು ಉಗ್ಗಡಿಸಿದ್ದೇ ಉಗ್ಗಡಿಸಿದ್ದು. ಈಗ ಬೆಂಗಳೂರು ನಗರದ ರಸ್ತೆಗಳಲ್ಲಿ ಮದ್ಯದ ಕಂಪನಿಯೊಂದು 'What is life without a Royal Challenge' ಎಂಬ ಜಾಹೀರಾತು ಪ್ರದರ್ಶಿಸಿದೆ. ನಮ್ಮ ಯುವಕರ ಮುಂದೆ ಒಂದು ರಾಯಲ್ ಚಾಲೆಂಜ್ ಅನ್ನುವುದು ಇರದಿದ್ದರೆ

ಬದುಕಿಗೇನು ಅರ್ಥ ? ಕುಡಿಯುವುದೇ ಪರಮಗುರಿ ಎನ್ನುವ ತೆರದಲ್ಲಿ ಘೋಷಿಸುವ ಮೂಲಕ ವಿವೇಕಾನಂದರ ವಾಣಿಯನ್ನು ಅಣಕಿಸುವಂತಿದೆ. 'ಗ್ಲೋಬಲ್ ವಿಲೇಜ್' ಆಗುತ್ತಿರುವ ಕಾಲದಲ್ಲಿ ಇಂಥವೆಷ್ಟೊ ಸಂಗತಿಗಳನ್ನು ಅರಗಿಸಿಕೊಳ್ಳಲು ದೇಶ ಸಿದ್ಧವಾಗಬೇಕಾಗಿದೆ. ದೇಶೀ-ವಿದೇಶೀ ಸಂಘರ್ಷದಲ್ಲಿ ಅದೆಷ್ಟೋ ದೇಶೀ ಸರಕುಗಳು ನಿರ್ನಾಮವಾಗಿರುವಾಗ, ಹಿಂದೆ ಈಚಲು ಮರದಿಂದ ಧಾರಾಕಾರವಾಗಿ ಹರಿಯುತ್ತಿದ್ದ ದೇಶೀ ಮದ್ಯ ಕುರಿತು ಕನವರಿಸುವುದಷ್ಟೇ ನನ್ನಂಥವರ ಪಾಲಿಗೆ ಈಗ ಉಳಿದಿರುವುದು.

ಗಾಂಧೀ ಯುಗದ ಮಂದಿ ತುಂಬ ಹಿಂದೆಯೇ ಸ್ವದೇಶೀ ಬಟ್ಟೆಗಳನ್ನೇ ಬಳಸುವಂತೆ ಕರೆ ಕೊಟ್ಟು, ವಿದೇಶೀ ವಸ್ತ್ರಗಳ ದಹನದಂಥ ಚಳವಳಿಯನ್ನು ದೇಶವ್ಯಾಪಿ ಹಮ್ಮಿಕೊಂಡಿದ್ದರು. ಅವೇ ದಿನಗಳಲ್ಲಿ ಒಮ್ಮೆ ನೆಹರೂ ಕೈಯಲ್ಲಿ ಉರಿಯುತ್ತಿದ್ದ ವಿದೇಶೀ ಸಿಗರೇಟು ಕಂಡು 'ನೆಹರೂಜಿ ಇದೇನಿದು ನೀವು ಮಾಡುತ್ತಿರುವುದು ?' ಎಂದು ಪಕ್ಕದಲ್ಲಿದ್ದವರು ಯಾರೋ ಕೇಳಿದ್ದಕ್ಕೆ, ಚಾಚಾ ಅಷ್ಟೇ ತಣ್ಣಗಿನ ದನಿಯಲ್ಲಿ 'ನಾನೂ ವಿದೇಶೀ ವಸ್ತುವನ್ನು ಸುಡುತ್ತಿದ್ದೇನಲ್ಲ' ಎಂದು ಚಾಣಾಕ್ಷ ಉತ್ತರ ನೀಡಿ ಬಾಯಿ ಮುಚ್ಚಿಸಿದ್ದರಂತೆ. ಬಾಯಿ ಇದ್ದವರು ಏನೇ ಆಡಿದರೂ ಅದಕ್ಕೆ ಅರ್ಥವಿರುತ್ತದೆ. ಬಾಯಿ ಇದ್ದವನು ಬರಗಾಲ ದಲ್ಲೂ ಬದುಕಿದ ಎಂಬ ನಾಣ್ಣುಡಿಯೇ ಇದೆಯಲ್ಲ.

ಬರಗಾಲ ಅಂದ ತಕ್ಷಣ ನೆನಪಾಯಿತು. ೧೯೭೨, ೭೩, ೭೪ರ ಸಾಲುಗಳೆಂದರೆ ನಮ್ಮ ರಾಜ್ಯ ಕಂಡ ಭೀಕರ ಬರಗಾಲ. ರೈತರು ಎತ್ತುಗಳನ್ನು ಸಾಕಲಾಗದೆ, ಕಸಾಯಿಖಾನೆಗೆ ಮಾರಲು ಮನಸ್ಸು ಬಾರದೆ ಗೋಳಾಡುತ್ತಿದ್ದ ದಿನಗಳು. ಆ ದಿನಗಳಲ್ಲಿ ಭೂಮಿಯ ಮೇಲೆ ಈಚಲು ವನ ಮಾತ್ರ ಉಳಿದಿತ್ತು. ಎತ್ತುಗಳನ್ನು ಬಸವಣ್ಣನೆಂದು ನಂಬಿ ಪೋಷಿಸುತ್ತಿದ್ದ ಮುಗ್ಧ ಮಡಿವಂತ ಜನಕ್ಕೆ 'ಶೇಂದಿ ಮರ'ವಾದ ಈಚಲು ಗರಿಯನ್ನು ಹೇಗೆ ಎತ್ತುಗಳ ಬಾಯಿಗೆ ಒಡ್ಡಬೇಕೆಂದು ಒದ್ದಾಡಿ, ಜೀವ ಉಳಿದರೆ ಸಾಕೆಂದು ಕಡೆಗೆ ಅದನ್ನೇ ಮಾಡಿದರು. ಎತ್ತುಗಳು ಈಚಲು ಪೊರಕೆಯನ್ನೇ ತಿಂದು ಜೀರ್ಣಿಸಿ ಕೊಳ್ಳುವಾಗಿನ ಚಿತ್ರ ಕರುಳು ಕಿವುಚುತ್ತಿತ್ತು. ಪ್ರಕೃತಿ ವಿಕೋಪದ ಮುಂದೆ ಮಾನವ ಹುಳು ಯಾವ ಲೆಖ್ಖ ? ಆಗಿನ ಸತತ ಬರಗಾಲದ ದವಡೆಗೆ ಸಿಕ್ಕ ಈಚಲು ವನವೂ ನಾಶವಾಗಿ ಹೋಯಿತು. ಈಗ ರಣ ಬಿಸಿಲಿನಲ್ಲಿ ಅಲ್ಲೊಂದು ಇಲ್ಲೊಂದು ಒಂಟಿ ಮರ ನಿಂತು ಮೂಕ ಸಾಕ್ಷಿ ಹೇಳುತ್ತಿವೆ.

ನಮ್ಮ ಇಂದಿನ ದೂರದರ್ಶನ ಚಾನೆಲ್ಲುಗಳನ್ನು ತಿರುವಿದರೆ ಬರೀ ಬಾತ್‌ರೂಮು, ಬೆಡ್‌ರೂಮುಗಳಲ್ಲಿ ಬಳಸಬೇಕಾದ ಸರಕುಗಳನ್ನೇ ಜಾಹೀರಾತುಗಳ ಮೂಲಕ ತೋರಿಸಿ ತೋರಿಸಿ ಶ್ರಮ ಸಂಸ್ಕೃತಿಯಿಂದ ವಿಮುಖ ಗೊಳಿಸಿ ಬರೀ ಮೋಜು - ಮಜಾ ಅಷ್ಟೇ ಬದುಕಿನ ಗುರಿ ಎನ್ನುವ ಭ್ರಮೆ ಹುಟ್ಟಿಸುತ್ತಲಿವೆ. ಜಾಗತೀಕರಣದ ಉದಾರತೆಯಿಂದಾಗಿ ಆಗಲೇ ವಿದೇಶೀ ಕಂಪನಿಗಳ ಸರಕು ಗಳೆಲ್ಲ ಭಾರತೀಯ ಮಾರುಕಟ್ಟೆಯಲ್ಲಿ ಅಗ್ಗದ ದರಗಳಲ್ಲಿ ಧಾರಾಳವಾಗಿ ತಂದು ಸುರಿಯುತ್ತಿರುವುದರಿಂದ ನಮ್ಮ ದೇಶವಾಸಿಗಳ ಮನಸ್ಸೂ 'ಡಂಪಿಂಗ್ ಯಾರ್ಡ್' (ಕಸದ ತಿಪ್ಪೆ) ಆಗುತ್ತಿರುವ ಮುನ್ಸೂಚನೆ ಆಗಲೇ ಸಿಕ್ಕಿದೆ.

ತಲೆಕೂದಲು ತೊಳೆದುಕೊಳ್ಳಲು ನಮ್ಮ ಬಿಸಿಲ ಸೀಮೆಯಲ್ಲಿ ಸೀಗೆಮರ ಎಲ್ಲಿಂದ ಬರಬೇಕು ? ಅದೇನಿದ್ದರೂ ಮಲೆನಾಡಿನ ಬಾಬತ್ತು. ನಾವುಗಳು ಮತ್ತದೇ ಈಚಲಗಿಡಕ್ಕೇ ಮೊರೆ ಹೋಗಬೇಕು. ಮಳೆಗಾಲ ಮುಗಿದು, ಹಳ್ಳ ಹಾದುಹೋದ ಈಚಲ ಪೊದೆಗಳಲ್ಲಿ ಚಳಿಗಾಲದಲ್ಲಿ ಸವುಳು (ಚೌಳು) ಏಳುತ್ತದೆ. ಕೆರಕ ಹಿಡಿದು ತೂರಿ ಕೆನೆ ಕೆನೆಯಾಗಿ ಎದ್ದಿರುತ್ತಿದ್ದ ಸವುಳನ್ನು ಬಳಿದುಕೊಂಡು ಹೊತ್ತು ತರುತ್ತಿದ್ದೆವು. ನನ್ನ ಹನುಮಮ್ಮತ್ತೆಯ ಜೊತೆಗೆ, ನಸುಕಿನ ಚಳಿಯಲ್ಲಿಯೇ ಕಾಡಿಗೆ ಹೋಗಿ, ಕಾಕುಳ್ಳು (ಕಾಡಿನ ಕುಳ್ಳು - ಸುಟ್ಟು ಹಲ್ಲುಜ್ಜಲು ಸೊಗಸಾಗಿರುವ ಕಾಡಿನ ಬೆರಣಿ) ಆರಿಸಿ, ಬಳಿದು ಗಂಟುಕಟ್ಟಿದ್ದ ಸೌಳನ್ನೂ ಹೊತ್ತು ತರಲು ಹೇಸರಗತ್ತೆಯಂತೆ ನಾನೂ ಹೋಗಿರುತ್ತಿದ್ದೆ. ಹಬ್ಬ-ಹರಿದಿನಗಳಲ್ಲಿ ತಲೆಯ ಎಣ್ಣೆ ಕಮಟನ್ನು ಕಿತ್ತೆಗೆಯಲು ಸದರಿ ಚೌಳೇ ನಮಗೆ ಆ ದಿನಗಳಲ್ಲಿ ಈಗಿನ ಶಾಂಪೂಗಿಂತ ಪರಮಾಯಿಶಿ ಅನುಭವ ನೀಡುತ್ತಿತ್ತು. ಈಗ ಆ ಈಚಲ ಕಾಡೂ ಇಲ್ಲ, ಅದರ ಕಾಲಬುಡದಲ್ಲಿ ಭೂಮಿಯ ಮೇಲೆ ಹರಡುತ್ತಿದ್ದ ದೇಶೀ ಶಾಂಪೂ ಇಲ್ಲ. ನೆನಪಷ್ಟೇ ನನ್ನಂಥವರ ಪಾಲಿಗೆ. ನೆನಪುಗಳಿಗೆ ಸಾವೆಂಬುದಿಲ್ಲವಲ್ಲ. 'ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ' ಕವಿ ಅಡಿಗರ ಪದ್ಯವೊಂದಿದೆಯಲ್ಲ. ಬಿದಿರು, ಬೊಂಬು ಎಲ್ಲಿ, ಹೇಗೆ ಬೆಳೆಯುತ್ತವೆಯೋ ಆಗ ನಮಗೆ ಗೊತ್ತಿರಲಿಲ್ಲ. ನಮ್ಮದೇನಿದ್ದರೂ ಈಚಲು ಕಾಡು, ಹುಟ್ಟಿದ ಮಗು ಹೊರಳಾಡಿ ಬೆಳೆಯಲು ಈಚಲು ಚಾಪೆ. ಸತ್ತಾಗ ಹೊತ್ತೊಯ್ಯಲು ಈಚಲು ಚಾಪೆಯೇ. ಅದೇ ಈಚಲ ಚಾಪೆಗಳನ್ನೇ ಮಡಿಸಿ ಹೊಲಿದು, ಸಂತೆ ಗಳಲ್ಲಿ ಬೆಲ್ಲದ ಕರಣೆ ತುಂಬಿ ಮಾರುತ್ತಿದ್ದ ಪರಿ ನೋಡಿರಿ. ಕವಿ ಬೇಂದ್ರೆಯವರ ಭಾವಗೀತೆಯ ಸಾಲು ಇದೆಯಲ್ಲ – 'ಬಳಸಿಕೊಂಡೆವದನೆ ನಾವು, ಅದಕು ಇದಕು ಎದಕೂ'.

ಈಚಲ ಗರಿಗಳನ್ನು ತರಿದು ಚಾಪೆ, ಚೀಲ ಹೆಣೆಯು ವುದು ಹೆಂಗಸರ ಬೇಸಿಗೆ ಕಾಲದ ಬಿಡುವಿನ ಕುಸುರೀ



ಕೆಲಸ ಒಂದು ಕಡೆಗಾದರೆ, ಇಡಿಯಾದ ಈಚಲು ಪೊರಕೆಗಳನ್ನೇ ಕೊಯ್ದು ಹೊರೆಗಟ್ಟಲೇ ತಂದು ಉದ್ದ-ಅಡ್ಡ ನಿಲ್ಲಿಸಿ ಕಟ್ಟಿ, ದಂಟಿನಿಂದ ಬಿಗಿದು ಸೆರಿಕೆ ಗೋಡೆ, ತಡಿಕೆ ಕೋಣೆಗಳನ್ನು ನಿರ್ಮಿಸುತ್ತಿದ್ದುದೂ ಉಂಟು. ಬಡವರ ಮನೆಯಂಗಳದ ಸ್ನಾನದ ಕೋಣೆಯೂ ಆಗಿರುತ್ತ, ಈಚಲು ಹೆಂಗಳೆಯರ ಮಾನ ಕಾಯುತ್ತಿದ್ದುದೂ ಉಂಟು. ಅದು ಅಷ್ಟೊಂದು ಅನಿವಾರ್ಯ.

ನನ್ನ ಬಂಧುವೊಬ್ಬರ ಹಳೆಯ ಕಾಲದ ಮಣ್ಣಿನ ಮನೆಯ ಪಡಸಾಲೆಯಲ್ಲಿ ಸಪೂರವಾಗಿಸಿದ್ದ ಎರಡು ಈಚಲು ಮರದ ಕಾಂಡಗಳನ್ನೇ ಛತ್ತಿಗೆ ಆಧಾರವಾಗಿ ನಿಲ್ಲಿಸಲಾಗಿತ್ತು. ಕಾಲಾಂತರದಲ್ಲಿ, ಆ ಮನೆಯ ಯಜಮಾನನ ಹಿರಿಯ ಮಗ ನಮ್ಮೆಲ್ಲರ ಕಣ್ಣೆದುರೇ ಬಾಯಲ್ಲಿದ್ದ ಬೀಡಿ ನೆಲಕ್ಕೆ ಹೊಸಕಿ, ಆ ಕಂಭವನ್ನು ಒದ್ದು ಒದ್ದು 'ಇದೇ ನಮ್ಮಪ್ಪ ಕಟ್ಟಿಸಿದ್ದ ಆರ್‌ಸಿಸಿ ಕಂಬ' ಎಂದು ತನ್ನಪ್ಪನನ್ನು ಹೀಯಾಳಿಸುತ್ತಿದ್ದ ಚಿತ್ರ ದಿಗ್ಭ್ರಮೆ ಹುಟ್ಟಿಸುತ್ತಿತ್ತು. ನಿರುಮ್ಮಳಾಗಿ ಎರಡು ತಲೆಮಾರುಗಳನ್ನು ಕಂಡಿದ್ದ ಆ ಈಚಲು ಮರಗಳು ಗಾತ್ರದಲ್ಲಿ, ರೂಪದಲ್ಲಿ ಸಾಕ್ಷಾತ್ ಆರ್‌ಸಿಸಿ ಪಿಲ್ಲರ್‌ಗಳನ್ನೇ ಹೋಲುತ್ತಿದ್ದವು. ಒಡಲಲ್ಲಿ ದೇಶೀತನ ಅದುಮಿಟ್ಟುಕೊಂಡೂ ಬಾಹ್ಯದಲ್ಲಿ ಆಧುನಿಕತೆಗೆ ಅಣಕವಾಗಿದ್ದು ಎಂಥ ಐಚೋಜಿಗ !

ಅಷ್ಟೇ ಅಲ್ಲ, ಕೊರವರ ಹೆಂಗಸರು ಈಚಲು ಗರಿಯನ್ನು ಹೆಣೆದು ತಂದು ತೀರ ಅಗ್ಗದ ದರದಲ್ಲಿ ಮಾರುತ್ತಿದ್ದ ಗಿಲಕಿ, ಆಟದ ಸಾಮಾನುಗಳನ್ನು ನೋಡಬೇಕು. ತೊಟ್ಟಿಲಲ್ಲಿ ಆಡುತ್ತಿದ್ದ ಮಗುವಿನ ಕೈಗೆ ಕೊಡಿ. ಅವೇ ಗರಿಯನ್ನು ತರಿದು, ಬರಲಿನಲ್ಲಿ ಬುಟ್ಟಿ ಹೆಣೆಯುವ ಕಸುಬು ಬೇರೆ. ಈ ಕರಕುಶಲ ಕಲೆಯನ್ನು ಯಾವ ತರಬೇತಿ ಶಾಲೆಯಲ್ಲಿ ಕಲಿತಿದ್ದರೋ, ಪ್ರಕೃತಿ ಯೊಂದಿಗಿನ ಒಡನಾಟವೇ ಆ ಪರಂಪರೆಯ ಕಲಿಕೆ.

ಹೋದ ವರ್ಷ ಹೈದರಾಬಾದು ಕರ್ನಾಟಕದ ದೊಡ್ಡ ಲೇಖಕಿ ಗೀತಾ ನಾಗಭೂಷಣರ 'ಬದುಕು' - ಬೃಹತ್ ಕಾದಂಬರಿಯನ್ನು ಓದಿ ಕೆಳಗಿಟ್ಟಾಗ, ಈಚಲ ಮರವೂ ಅಲ್ಲಿ ಒಂದು ಸಜೀವ ಪಾತ್ರವಾಗಿ ಸಂಚರಿಸಿದಂತೆ ಗೋಚರಿಸಿತ್ತು. ಬಾಲ್ಯದಂಗಳಕ್ಕೆ ಅನಾಮತ್ತಾಗಿ ಬಿಟ್ಟಂತಾಗಿತ್ತು ನನಗೆ. ಇದ್ದಕ್ಕಿದ್ದಂತೆ ಧುತ್ತೆಂದು ನಿಂತವು ಛತ್ರಿ-ಚಾಮರಗಳಂತಿದ್ದ ಈಚಲು ಮರಗಳು. ದೂರದಲ್ಲೆಲ್ಲೋ ಹಳ್ಳಿಯ ಮಹಾ ಮೌನವನ್ನು ಭೇದಿಸಿಕೊಂಡು ಕೇಳಿಸುತ್ತಿತ್ತು ಆ ಹಾಡು :

'ಕುಂಟ ಕುದರೀಮ್ಯಾಲಿ ಕುಣಕಂತ ಬರತಾಳ
ಈಚಲ ಮರದವ್ವ, ನಮ್ಮವ್ವ ನೀನೆಂಥಾಕೆವ್ವಾ'

ಆ ಅಂಬಣ್ಣನೂ ಈಗ ಇಲ್ಲ. ಆತ ನಂಬಿದ್ದ ಈಚಲ ಮರದವ್ವನೂ ಉಳಿದಿಲ್ಲ. ಎಲ್ಲವೂ ಬಟ್ಟಬಯಲಾಗಿ ಬಣಬಣ. ಹೊಡೆಯುವ ರಣ ಬಿಸಿಲಿನ ಬೇಗೆಯಲ್ಲಿ ಕಣ್ಣೆದುರು ಬಿಸಿಲಗುದುರೆಯ ಥಕಥೈ. ನಾನೀಗ ಇಲ್ಲಿ ಒಂಟಿ ಈಚಲು ಮರ.

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಕಾವೇರಿ ಭವನ, ಎಫ್ ಬ್ಲಾಕ್
ಬೆಂಗಳೂರು - ೫೬೦ ೦೦೯



# ಎಂ. ಎಸ್. ಪುಟ್ಟಣ್ಣನವರ ಕನ್ನಡ ಮತ್ತು ಇಂಗ್ಲಿಷ್ ಲೇಖನಗಳು

ಸಂಗ್ರಹ ಮತ್ತು ಸಂಪಾದನೆ : ಡಾ॥ ಎಚ್. ಎಸ್. ಸುಜಾತಾ
ಪ್ರ : ಸುಹಾಸ ಪ್ರಕಟನೆಗಳು, ಕುವೆಂಪು ನಗರ, ಮೈಸೂರು - ೫೭೦ ೦೦೯
ಬೆಲೆ : ರೂ. ೩೨೫/- ಪುಟ : ೩೩೬

## ಕೋ. ಚೆನ್ನಬಸಪ್ಪ

ಇಪ್ಪತ್ತನೇ ಶತಮಾನದ ಎರಡು, ಮೂರು, ನಾಲ್ಕನೇ ದಶಕಗಳಲ್ಲಿ ಎಂ. ಎಸ್. ಪುಟ್ಟಣ್ಣನವರ 'ನೀತಿ ಚಿಂತಾಮಣಿ' ಭಾಗ ೧, ೨ ಮತ್ತು ೩ ಪುಸ್ತಕಗಳು ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಸುಪರಿಚಿತವಾಗಿದ್ದವು. ವಿದ್ಯಾರ್ಥಿಗಳು ಮಾತ್ರವೆ ಅಲ್ಲದೆ ಸಾಮಾನ್ಯ ಓದುಗರೂ ಬಹುಮಟ್ಟಿಗೆ ಆ ಪುಸ್ತಕಗಳನ್ನು ಓದಿರುತ್ತಿದ್ದರು. ಅವುಗಳ ಕರ್ತೃ ನೀತಿ ಚಿಂತಾಮಣಿ ಪುಟ್ಟಣ್ಣನವರೆಂದೇ ಪ್ರಸಿದ್ಧರಾಗಿದ್ದರು.

ಪುಟ್ಟಣ್ಣನವರ ಹೆಸರು ಹೆಚ್ಚು ಪ್ರಸಿದ್ಧಿಗೆ ಬಂದದ್ದು ಅವರು ಬರಹಗಾರರಾಗಿದ್ದರೆಂದು. ಅವರು ಮೊದಲು ಪ್ರೌಢಶಾಲಾ ಸಹೋಪಾಧ್ಯಾಯರಾಗಿ, ತರುವಾಯ ಮೈಸೂರು ಚೀಫ್ ಕೋರ್ಟ್ ಭಾಷಾಂತರಕಾರರಾಗಿ, ಆಗಿನ ಕಾಲದಲ್ಲಿ ತಾಲೂಕಿನ 'ದೊರೆ'ಯೆಂದೆ ಕರೆಯಲಾಗುತ್ತಿದ್ದ ಅಮಲ್ದಾರರಾಗಿ, ಆ ಹುದ್ದೆಗೆ ರಾಜೀನಾಮೆ ಕೊಟ್ಟು, ನಂತರ ವಕೀಲರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕರಲ್ಲಿ ಒಬ್ಬರಾಗಿ, ಕಾರ್ಯದರ್ಶಿಯಾಗಿ, ಸಾರ್ವಜನಿಕ ಸೇವಕರಾಗಿ ಆಗ ಬಹು ಪ್ರಸಿದ್ಧರಾಗಿದ್ದರು.

೧೯೮೧ರಲ್ಲಿ ಪುಟ್ಟಣ್ಣನವರನ್ನು ಕನ್ನಡಿಗರಿಗೆ ನೆನಪು ಮಾಡುವ ಒಂದು ಪುಸ್ತಕವನ್ನು ಡಾ॥ ಎಚ್. ಎಸ್. ಸುಜಾತಾ ಅವರು ಬರೆದರು. 'ಎಂ. ಎಸ್. ಪುಟ್ಟಣ್ಣ: ಒಂದು ಅಧ್ಯಯನ'. ಆ ಗ್ರಂಥ – ಸುಜಾತಾ ಅವರ ಡಾಕ್ಟರೇಟ್ ಪದವಿಯ ಪ್ರೌಢ ಪ್ರಬಂಧ. ಎಂ. ಎಸ್. ಪುಟ್ಟಣ್ಣನವರ ಸಮಗ್ರ ಸಾಹಿತ್ಯವನ್ನು ಅಪಾರ ನಿಷ್ಠೆಯಿಂದ, ಪರಿಶ್ರಮದಿಂದ, ಶ್ರದ್ಧೆಯಿಂದ ಅಭ್ಯಾಸ ಮಾಡಿರುವುದಲ್ಲದೆ, ಆ ಪರಿಶ್ರಮದ ಫಲವನ್ನು ಕನ್ನಡಿಗರಿಗೆ ಕೊಡುತ್ತ ಬಂದಿದ್ದಾರೆ ಡಾ॥ ಸುಜಾತಾ. ಅವರು ಈಗ 'ಎಂ. ಎಸ್. ಪುಟ್ಟಣ್ಣನವರ ಕನ್ನಡ ಮತ್ತು ಇಂಗ್ಲಿಷ್ ಲೇಖನಗಳು' ಎಂಬ ೩೩೬ ಪುಟಗಳ ಅಮೂಲ್ಯ ಗ್ರಂಥವನ್ನು ಸಂಪಾದಿಸಿ ಮೈಸೂರಿನ ಸುಹಾಸ ಪ್ರಕಟಣೆಯಲ್ಲಿ ಹೊರತಂದಿದ್ದಾರೆ.




ಸಂಪಾದಕಿ ಸುಜಾತಾ ಇಪ್ಪತ್ತು ಪುಟಗಳ ವಿದ್ವತ್ಪೂರ್ಣ ಅಭ್ಯಾಸಪೂರ್ಣ 'ಮುನ್ನುಡಿ' ಬರೆದಿದ್ದಾರೆ. ಆ ಮುನ್ನುಡಿಯಲ್ಲಿ ಅವರು ಹೇಳುತ್ತಾರೆ :

''ಪುಟ್ಟಣ್ಣನವರ ಅನೇಕ ಲೇಖನಗಳು ಇಂದಿಗೂ ಪ್ರಸ್ತುತವಾಗಿವೆ. ಇನ್ನು ಕೆಲವು ಅಂಶಗಳು ಪಳೆಯುಳಿಕೆಯಂತೆ ಭಾಸವಾದರೂ ಬರೆದ ಕಾಲಕ್ಕೆ ಕನ್ನಡಿ ಹಿಡಿಯುತ್ತವೆ... ಇಲ್ಲಿನ ಮೊದಲ ಲೇಖನ ಪ್ರಕಟವಾದದ್ದು ೧೮೮೩ರಲ್ಲಿ... ಪುಟ್ಟಣ್ಣನವರು ದಿವಂಗತರಾದದ್ದು ೧೯೩೦ರಲ್ಲಿ. ಅಂದರೆ ಹಸ್ತಪ್ರತಿಯಲ್ಲಿದ್ದ ಲೇಖನಗಳು ರಚಿತವಾಗಿ ಏಳು ದಶಕಗಳಿಗೂ ಮಿಕ್ಕ ಕಾಲ ಸಂದಿದೆ. ಈ ಹಿನ್ನೆಲೆಯಲ್ಲಿ ಈ ಸಂಕಲನದ ಪ್ರಕಟಣೆಗೆ ಹಳೆಯ ದಾಖಲೆಗಳು ಕಳೆಯಬಾರದೆಂಬ ನಿಲುವು ಮುಖ್ಯ ಕಾರಣವಾಗಿದೆ ಎಂಬುದನ್ನು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ.'' ಇದು ನ್ಯಾಯವಾದ ದೃಷ್ಟಿ. ಆಗ ೧೮೮೩ರಷ್ಟು ಹಿಂದೆ, ೧೨೦ ವರ್ಷಗಳ ಹಿಂದೆ ಬರೆದದ್ದರಲ್ಲಿ ಈಗ ಪ್ರಸ್ತುತವಾದದ್ದೂ ಇದೆ ಎಂಬುದು ಆಶ್ಚರ್ಯವೆನಿಸಿದರೂ, ಆ ಮಾತುಗಳಲ್ಲಿ ಉತ್ಪ್ರೇಕ್ಷೆಯಾಗಲಿ ಅತಿ ಮೋಹವಾಗಲಿ ಇಲ್ಲ ಹಾಗೂ ಈಗಿನವರು ಉಪೇಕ್ಷಿಸುವಂಥವುಗಳಲ್ಲ. ನೂರಿಪ್ಪತ್ತು ವರ್ಷಗಳು ಗತಿಸಿದರೂ ನಾವು ಕೆಲವು ವಿಚಾರಗಳಲ್ಲಿ ಅಷ್ಟೇನೂ ಬದಲಾವಣೆ ಆಗಿಲ್ಲ ಎಂಬ ಸತ್ಯವನ್ನು ಅರಿತುಕೊಳ್ಳಬೇಕಾದ ಅಗತ್ಯವನ್ನು ಸುಜಾತಾ ಅವರು ನಮ್ಮ ಮುಂದಿಟ್ಟಿದ್ದಾರೆ. ಈ ಮಾತನ್ನು ಸಮರ್ಥಿಸುವ ಪುಟ್ಟಣ್ಣನವರ ಕೆಲವು ಅಭಿಪ್ರಾಯಗಳನ್ನು ಗಮನಿಸಬೇಕು.

೧೯೧೫ರಲ್ಲಿ ಪ್ರಥಮ ಕರ್ನಾಟಕ (ಈಗ ಕನ್ನಡ) ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಬರೆದ 'ಕನ್ನಡ: ಕೆಲವು ವಿಚಾರಗಳು' (ಪು ೯೯-೧೧೦) ಎಂಬ ಲೇಖನದಲ್ಲಿ ಪುಟ್ಟಣ್ಣನವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ :

''ಲಾರ್ಡ್ ಬೆಂಟಿಂಕನ ಕಾಲದಲ್ಲಿಯೂ, ಈಚೆಗೂ ದೇಶಭಾಷೆಗೆ ಪ್ರಾಶಸ್ತ್ಯ ಕೊಡಬೇಕೆಂದು ಕಂಪನಿ ಸರ್ಕಾರದವರು ಮಾಡಿದ ಅಪ್ಪಣೆಯು ಇಂಗ್ಲಿಷ್ ಸರ್ಕಾರದವರು ಇಟ್ಟ ಶಾಲೆಗಳು ಪ್ರಚಾರಕ್ಕೆ ಬರುವ ತನಕ ಚೆನ್ನಾಗಿ ಜಾರಿಗೆ ಬರಲಿಲ್ಲ.'' ಈ ಮಾತನ್ನು ಬರೆಯುವಾಗ ಆಗ ಕನ್ನಡ ಮಾತನಾಡುವ ಜನರು ವಿವಿಧ ರಾಜ್ಯಗಳಲ್ಲಿ ಹಂಚಿಹೋಗಿ ಉತ್ತರ ಕರ್ನಾಟಕದಲ್ಲಿ ಮರಾಠಿ ಭಾಷೆಯಲ್ಲಿ ಆಡಳಿತೆ ಆಗುತ್ತಿದ್ದುದನ್ನು ಗಮನದಲ್ಲಿಟ್ಟುಕೊಂಡಿದ್ದರು. ಮೈಸೂರು ಸೀಮೆಯಲ್ಲೂ ''ಆ ಭಾಷೆಯನ್ನು ಬಲ್ಲ ಅಧಿಕಾರಿಗಳು ದೊಡ್ಡ ಅಧಿಕಾರಗಳಿಗೆ ಬಂದರು. ಅಯ್ಯನವರು ಮೂಲೆಗೆ ಬಿದ್ದರು. ರಾಯರು ವೃದ್ಧಿಯಾದರು. ರಾಜ್ಯಭಾರದಲ್ಲಿ ಮರಾಠಿ ದಫ್ತರು ಹುಟ್ಟಿತು. ಶಾನುಭೋಗರ ಲೆಕ್ಕ ಮಾತ್ರ ಕನ್ನಡದಲ್ಲಿ ಇರುತ್ತಿತ್ತು''. ಈ ಮಾತುಗಳು ಈಗಲೂ ಪ್ರಸ್ತುತವೆ ಅಲ್ಲವೆ ಎಂಬುದನ್ನು ಆಲೋಚಿಸಬೇಕು. ಆಡಳಿತ ಭಾಷೆ ಸಂಪೂರ್ಣ ಕನ್ನಡ ಆಗಬೇಕೆಂದು ಈಗಲೂ ನಾವು ಬೊಬ್ಬೆ ಇಡುತ್ತಿರುವುದು ಏಕೆ ? ಆಗ ಮರಾಠಿ, ಪರ್ಶಿಯನ್ ಭಾಷೆಗಳ ಪಾರುಪತ್ಯೆ ಇತ್ತು. ಈಗ ಇಂಗ್ಲಿಷಿನ ವ್ಯಾಮೋಹ.

ಮೇಲಿನಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಮೇಲೆ ಪುಟ್ಟಣ್ಣನವರು: ''ಕರ್ನಾಟಕ ಭಾಷೆಯನ್ನು ಮಾತೃಭಾಷೆಯಾಗಿ ಉಳ್ಳ ಜನರಿಗೆ ಮೂಲಸ್ಥಾನವಾಗಿರುವ ಮೈಸೂರು ದೇಶದಲ್ಲಿ ಕನ್ನಡ ಯಾವ ಸ್ಥಿತಿಗೆ ಬಂತು ? ಮುಂದೆ ನೋಡೋಣ'' ಎಂದು ಅಂದಿನ ಪರಿಸ್ಥಿತಿಯನ್ನು ಬಣ್ಣಿಸಿದ್ದಾರೆ. ಈಗ ಯಾವ ಸ್ಥಿತಿಗೆ ಬಂದಿದೆ ಎಂಬುದನ್ನು ಎಲ್ಲರೂ ಬಲ್ಲರು! ಅವರ ಈ ಬರಹ ಈಗ ಪ್ರಸ್ತುತವಲ್ಲವೆ ? ಕರ್ನಾಟಕದಲ್ಲಿ ಕನ್ನಡಕ್ಕೆ ಆಡಳಿತೆಯಲ್ಲಿ, ಶಿಕ್ಷಣದಲ್ಲಿ ಅಗ್ರಸ್ಥಾನ ಇರಬೇಕೆಂಬ ಅಂದಿನವರ ಬಯಕೆ ಇಂದಿಗೂ ಎಷ್ಟರಮಟ್ಟಿಗೆ ಈಡೇರಿದೆ ?

ಈ ಗ್ರಂಥದಲ್ಲಿ ಪುಟ್ಟಣ್ಣನವರ ೧೫ ಇಂಗ್ಲಿಷ್ ಲೇಖನಗಳಿವೆ. ಅದರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕರು, ಮೈಸೂರು ಚೀಫ್ ಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಗಳೂ ಆಗಿದ್ದ ಹೆಚ್. ವಿ. ನಂಜುಂಡಯ್ಯನವರನ್ನು ಕುರಿತದ್ದು ಒಂದು. ಅದರಲ್ಲಿ ಒಂದು ಘಟನೆಯ ಪ್ರಸ್ತಾಪ ಬರುತ್ತದೆ. ಮೈಸೂರಿನ ಕನ್ನಡಿಗರೊಬ್ಬರು, ಸರ್ಕಾರಿ ನೌಕರಿಗಾಗಿ ಮದ್ರಾಸ್ ಸರ್ಕಾರಕ್ಕೆ ಅರ್ಜಿ ಹಾಕಿಕೊಂಡಿರುತ್ತಾರೆ. ಅವರಿಗೆ ಸಂದರ್ಶನ ಸೂಚನಾ ಪತ್ರ ಬಂತು. ಅವರು ಸಂದರ್ಶನಕ್ಕೆ ಹಾಜರಾದರು. ಸಂದರ್ಶನದ ಕಾಲಕ್ಕೆ ಆ ತಮಿಳು ಅಧಿಕಾರಿ (ರಾಮ ಐಯಂಗಾರ್ ಎಂಬಾತ) ''ನೀವು ಎಲ್ಲಿಯವರು ?'' ಎಂದು ಕೇಳಿದರು. ಇವರು (ಸುಬ್ಬರಾವ್ ಎಂಬ ಅಭ್ಯರ್ಥಿ) 'ಮೈಸೂರು' ಎಂದು ಉತ್ತರ ಕೊಟ್ಟರು. ಅದನ್ನು ಕೇಳಿದ ರಾಮ ಐಯಂಗಾರ್ : 'ನೀವು ನಿಮ್ಮ ಸೀಮೆಯಲ್ಲೆ ನೌಕರಿ ಅರಸಬೇಕು. ಈ ಆಧಿಪತ್ಯದಲ್ಲಿ ಹೊರಗಿನವರಿಗೆ ನೌಕರಿ ಒದಗಿಸಲಾಗುವುದಿಲ್ಲ', ಎಂದರಂತೆ. ಇದಕ್ಕೆ ಉತ್ತರವಾಗಿ ಸುಬ್ಬರಾವ್ : 'ಮದ್ರಾಸಿಗಳು ಮೈಸೂರಿಗೆ ಹೊರಗಿನವರಲ್ಲವೆ ? ನೂರಾರು ಮದ್ರಾಸಿಗಳು ಮೈಸೂರಿನಲ್ಲಿ ನೇಮಕಾಗಿಲ್ಲವೆ ? ನಿಮ್ಮ ರಾಜ್ಯದವರು ನಮ್ಮ ರಾಜ್ಯದಲ್ಲಿ ನೌಕರಿಗೆ ಸೇರಿ ನಮ್ಮವರ ಅನ್ನವನ್ನು ಕಸಿದುಕೊಳ್ಳುವ, ಆದರೆ ನಮ್ಮನ್ನು ಹೊರಗಿನವರೆಂದು ದೂರ

ಇಡುವ ಇದೆಂಥ ನ್ಯಾಯ?' ಎಂದು ಉತ್ತರಿಸಿದರಂತೆ. (ಪು. ೨೪೭). ಈ ಘಟನೆ ಈಗಿನ ಸಂದರ್ಭಕ್ಕೆ ಏನಾದರೂ ಪ್ರಸ್ತುತವಾಗಿದೆಯೆ ಎಂಬುದನ್ನು ಕರ್ನಾಟಕ ಸರ್ಕಾರ, ಕನ್ನಡಿಗರು ಆಲೋಚಿಸಬೇಕು.

ಇಂಗ್ಲಿಷ್ ಲೇಖನಗಳಲ್ಲಿ 'The Last Hour of Tippu Sultan' (ಟಿಪ್ಪು ಸುಲ್ತಾನನ ಕೊನೆ ಘಳಿಗೆ) ಎಂಬುದೊಂದು ಲೇಖನವನ್ನು ಪುಟ್ಟಣ್ಣ ಬರೆದಿದ್ದಾರೆ. ಟಿಪ್ಪು ಸುಲ್ತಾನ ಹಿಂದು ಮತ ದ್ವೇಷಿಯೆಂದು ಅವನ ಬಗ್ಗೆ ಅಬ್ಬರದ ಅಪಪ್ರಚಾರ ನಡೆಯುತ್ತಿರುವ ಈ ದ್ವೇಷಪೂರಿತ ಕಾಲದಲ್ಲಿ ಟಿಪ್ಪುವಿನ ಬಗ್ಗೆ ತಿಳಿಯಬೇಕಾದದ್ದು ಅಗತ್ಯ. ಅವನ ಸೋಲಿಗೆ, ಈಗ ಮಹಾದೇಶಭಕ್ತ ಎಂದು ಕೆಲವರು ವೈಭವೀಕರಿಸುವ, ಬ್ರಿಟಿಷರಿಗೆ ಸಹಾಯ ಮಾಡಿದ ಮೀರ್ ಸಾದಕನ ಇತಿಹಾಸವನ್ನು ದಾಖಲಿಸಿದ್ದಾರೆ. ಅದನ್ನು ಬರೆದು ನೂರು ವರ್ಷಗಳಾಗುತ್ತ ಬಂದಿದೆ. ಈಗಲೂ ಅದು ಪ್ರಸ್ತುತವೊ ಅಲ್ಲವೊ ಓದಿ ನಿರ್ಧರಿಸಬೇಕು.

ಈ ತೊಂಬತ್ತು ವರ್ಷಗಳಿಗೂ ಹಿಂದಿನ ಬರಹಗಳನ್ನು ಈಗ ಓದುವುದರಿಂದ ಏನಾದರೂ ಪ್ರಯೋಜನವಿದೆಯೇ ಎಂಬುದನ್ನು ನಿರ್ಧರಿಸಬೇಕಾದರೆ, ಆಗ ಬರೆದ "ಮೈಸೂರು ಸೀಮೆಯಲ್ಲಿ ನಶಿಸಿಹೋದ ವೃತ್ತಿಗಳು" (ಪುಟ ೬೧-೬೬) ಎಂಬ ಲೇಖನವನ್ನು ಓದಬೇಕು. ನಮ್ಮ ಹಳ್ಳಿಗಳಲ್ಲಿ ಆಗ ಪ್ರಚಾರದಲ್ಲಿದ್ದ ಗುಡಿ ಕೈಗಾರಿಕೆಗಳು ಕ್ರಮೇಣ ಹಾಳಾಗಿ ಹಳ್ಳಿಯ ಜನ ಉದ್ಯೋಗಹೀನರಾಗಿ ದರಿದ್ರರಾಗುತ್ತಿದ್ದ ದಾರುಣ ಸ್ಥಿತಿಯನ್ನು ಬಣ್ಣಿಸಿದ್ದಾರೆ. ಗಾಂಧೀಜಿ ನಮ್ಮ ಗ್ರಾಮ ಕೈಗಾರಿಕೆಗಳನ್ನು ಉಳಿಸಿಕೊಳ್ಳಬೇಕೆಂದು ಪ್ರತಿಪಾದಿಸಿದ ಸತ್ಯ ಜಾಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆಯ ಈ ಮಾರಣಯಜ್ಞದ ಕಾಲದಲ್ಲೂ ಪ್ರಸ್ತುತ ಎಂಬುದು ಸತ್ಯವಾದರೆ ಪುಟ್ಟಣ್ಣನವರ ಲೇಖನವೂ ಪ್ರಸ್ತುತ. ಓದಿ ದಿಟಪಡಿಸಿಕೊಳ್ಳಬಹುದು.

ಇನ್ನು ಕೊನೆಯದಾಗಿ 'ಲಂಚ' ಎಂಬ ಸುದೀರ್ಘ (ಪುಟ ೭೪-೮೭) ಲೇಖನ ಆಗ್ಗಿಂತಲೂ ಈಗ ಹೆಚ್ಚು ಪ್ರಸ್ತುತವಾಗಿದೆ ಎನಿಸುತ್ತದೆ. 'ಲಂಚ' ಶಬ್ದದ ಅರ್ಥವ್ಯಾಪ್ತಿಯನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಅವರು ಅಮಲ್ದಾರರಾಗಿದ್ದಾಗ ದಂಡಾಧಿಕಾರಿಗಳಾಗಿ ಕೆಲಸ ಮಾಡಿದ್ದವರು, ವಕೀಲರಾಗಿಯೂ ಕೆಲಸಮಾಡಿದವರು, ಆ ಲೇಖನದಲ್ಲಿ 'ಲಂಚ'ದ ವಿವಿಧ ಮುಖಗಳನ್ನು ತೋರಿಸಿದ್ದಾರೆ. ಆಗ ಸರ್ಕಾರಿ ನೌಕರರಲ್ಲಿದ್ದ ಅತ್ಯಲ್ಪ ಪ್ರಮಾಣದ ಲಂಚ ಪ್ರವೃತ್ತಿಯಿಂದ ಪುಟ್ಟಣ್ಣನವರು ಬೇಸತ್ತು ವೃತ್ತಿಗೆ ರಾಜೀನಾಮೆ ಕೊಟ್ಟು ತಮ್ಮ ೫೪ನೇ ವಯಸ್ಸಿನಲ್ಲಿ ವಕೀಲವೃತ್ತಿಯನ್ನು ಅವಲಂಬಿಸುತ್ತಾರೆ. ಸರ್ಕಾರಿ ನೌಕರರಲ್ಲಿ ಈಗ ಬೃಹದಾಕಾರವಾಗಿ, ಭೂಮಿ ಆಕಾಶವನ್ನು ಆವರಿಸುವಷ್ಟು ಲಂಚ ಬೆಳೆದಿರುವಾಗ ಅವರು ಆಗ ಬರೆದದ್ದನ್ನು ಈಗ ಓದುವುದರಿಂದ ಏನಾದರೂ ಪಾಠ ಕಲಿಯಬಹುದೆ ? ಪ್ರಸ್ತುತವೆ ?

ಅಷ್ಟೇನೂ ಪ್ರಸ್ತುತವಲ್ಲದ, ಆಗಿನ ಕಾಲದ ಸಾಮಾಜಿಕ ಜೀವನ, ಹಬ್ಬ ಹರಿದಿನ, ಜಾತ್ರೆ... ಇತ್ಯಾದಿಗಳ ಬಗೆಗೂ ಲೇಖನಗಳಿವೆ. ಅದರಿಂದ ಆಗಿನ ಕಾಲದ ಜನಜೀವನ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯಬಹುದು.

ಹೀಗೆ ಪುಟ್ಟಣ್ಣನವರ ಎಲ್ಲ ಬರಹಗಳನ್ನೂ ಪ್ರಕಟಿಸಿದರೆ ಆಸಕ್ತರಿಗೆ ಮಹದುಪಕಾರವಾಗುತ್ತದೆ. ಶಿಕ್ಷಣ ತಜ್ಞರು, ಸರ್ಕಾರದ ಶಿಕ್ಷಣ ಇಲಾಖೆಯೂ ಇತ್ತ ಗಮನ ಹರಿಸಬೇಕು. ಶಿಕ್ಷಣದಲ್ಲಿ ನೀತಿಪಾಠಗಳಿಗೆ ಯಾವ ಸ್ಥಾನ? ಮಕ್ಕಳ ಮನದಲ್ಲಿ ನೀತಿವಂತರಾಗುವ ಆದರ್ಶ ಮೂಡಿಸಲು 'ನೀತಿ ಚಿಂತಾಮಣಿ'ಯಂಥ ಕಥೆಗಳನ್ನು ಶಾಲೆಯಲ್ಲಿ ಬೋಧಿಸುವುದು ಉಚಿತವೆ ? ಈಗ ನೀತಿ ಎಂಬುದು ಜನರ ಮನದಿಂದ ಮಾಯವಾಗಿರುವುದಕ್ಕೆ ನಮ್ಮ ಶಿಕ್ಷಣ ಪದ್ಧತಿಯಲ್ಲಿ ಏನಾದರೂ ಕೊರತೆಯಿದೆಯೆ ? ಆ ಕೊರತೆಯನ್ನು ತುಂಬುವ ಉಪಾಯ ಶಿಕ್ಷಣದಿಂದ ಸಾಧ್ಯವೆ ಎಂಬುದನ್ನು ಗಂಭೀರವಾಗಿ ಆಲೋಚಿಸಬೇಕು. ಈ ದೃಷ್ಟಿಯಿಂದ ಪುಟ್ಟಣ್ಣನವರ ಲೇಖನಗಳು ಗಮನಾರ್ಹ, ಇಂದಿಗೂ ಪ್ರಸ್ತುತ.

ಕೋ. ಚೆನ್ನಬಸಪ್ಪ
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ, ಬೆಂಗಳೂರು - ೫೬೦ ೦೮೬




ವಸಂತ ಋತುವಿನ ಆಗಮನದೊಂದಿಗೇ ಗ್ರಾಮೀಣ ಪರಿಸರದ ಬಾನಂಗಳದಲ್ಲೊಂದು ಹೊಯ್ದಾಡುವ ನೃತ್ಯವನ್ನು ನಾವು ಕಾಣಬಹುದು. ಇದೇನು ಬಾನಿನಲ್ಲಿ ನೃತ್ಯ ಎಂದು ಅಚ್ಚರಿಪಡಬೇಕಾಗಿಲ್ಲ, ಪ್ರಣಯದ ಆಟದಲ್ಲಿ ಲೀನವಾಗುವ ಬಣ್ಣ ಬಣ್ಣದ ಚಿಟ್ಟೆಗಳು ಪ್ರದರ್ಶಿಸುವ ರಮ್ಯ, ಜಟಿಲ, ಶಾಸ್ತ್ರೋಕ್ತ ಪದ್ಧತಿಯ ಆದರ್ಶ ಪ್ರಣಯ ನೃತ್ಯವಿದು.

ಈ ಪ್ರಿಯಾರಾಧನೆಯ ನೃತ್ಯದಲ್ಲಿ, ಗಂಡು-ಹೆಣ್ಣುಗಳು ಪರಸ್ಪರ ಸೆಳೆದುಕೊಳ್ಳುವ ಈ ದೃಶ್ಯದಲ್ಲಿ ಕೆಲವು ನಿಗೂಢತೆಗಳೂ ಇವೆ. ಲೈಂಗಿಕ ಆಕರ್ಷಕಗಳು ಈ ಕ್ರಿಯೆಯಲ್ಲಿ ಮಹತ್ವದ ಪಾತ್ರವಹಿಸುತ್ತವೆ. ಗಂಡು ಚಿಟ್ಟೆ ಹೆಣ್ಣಿನ ಮುಂದೆ ಕುಳಿತು ತನ್ನ ದೇಹವನ್ನು ಬಿಲ್ಲಿನಾಕಾರದಲ್ಲಿ ಬಾಗಿಸಿ, ಕುಡಿಮೀಸೆಗಳಿಂದ ಹೆಣ್ಣಿನ ದೇಹದಿಂದ ಹೊರಸೂಸುವ ಲೈಂಗಿಕ ಆಕರ್ಷಕವನ್ನು ಆಸ್ವಾದಿಸುತ್ತದೆ. ಗಂಡಿನ ಈ ವರ್ತನೆಯಿಂದ ಪುಳಕಿತಗೊಂಡ ಹೆಣ್ಣು ಎತ್ತರಕ್ಕೆ ಹಾರಿಬಿಡುತ್ತದೆ. ಗಂಡು ಹೆಣ್ಣನ್ನು ಹಿಂದಿಕ್ಕಿ ತನ್ನ ಲೈಂಗಿಕ ಆಕರ್ಷಕವನ್ನು ಅದರ ರೆಕ್ಕೆಯ ಮೇಲೆ ಹರಡಿಬಿಡುತ್ತದೆ, ಕೂಡಲೇ ಹೆಣ್ಣಿನ ರೆಕ್ಕೆಬಡಿತ ನಿಶ್ಚಲವಾಗಿ ಅದು ಕೆಳಕ್ಕಿಳಿದು ಸಸ್ಯಗಳನ್ನು ಆಶ್ರಯಿಸುತ್ತದೆ.

ಜೋಡಿಯಾಗುವುದು ಹೆಣ್ಣಿಗೆ ಇಷ್ಟವಿಲ್ಲದಿದ್ದರೆ ಅದು ತನ್ನ ರೆಕ್ಕೆಗಳನ್ನು ಮಡಿಚುವುದೇ ಇಲ್ಲ! ಹೆಣ್ಣು ಚಿಟ್ಟೆ ರೆಕ್ಕೆಗಳನ್ನು ಮಡಿಚಿ ಕುಳಿತರೆ ತನ್ನ ಸಮ್ಮತಿಯನ್ನು ಸೂಚಿಸಿದಂತೆಯೇ. ಚಿಟ್ಟೆಗಳಲ್ಲಿ ಜೋಡಿಯಾಗುವ ಅವಧಿ ಬರೇ ೩೦ ಸೆಕೆಂಡುಗಳಷ್ಟು ಕಾಲ. ಜೋಡಿಯಾದ ನಂತರ ಅವು ಮೇಲೆ ಕೆಳಗೆ ಹಾರಾಡುತ್ತಿರುತ್ತವೆ.

ಕೆಲವು ಪ್ರಭೇದದ ಚಿಟ್ಟೆಗಳಲ್ಲಿ ಗಂಡು ಹೆಣ್ಣಿನ ಮುಂದೆ ಕುಳಿತು ತನ್ನ ಮುಂಭಾಗದ ರೆಕ್ಕೆಗಳನ್ನು ಹೆಣ್ಣಿನ ಕುಡಿಮೀಸೆಗಳ ಮೇಲೆ ಲಯಬದ್ಧವಾಗಿ ಮೇಲೆ, ಕೆಳಗೆ ಆಡಿಸುತ್ತದೆ. ಹೆಣ್ಣು ಗಂಡಿನ ಲೈಂಗಿಕ ಆಕರ್ಷಕದ ಪ್ರಭಾವಕ್ಕೊಳಗಾಗುತ್ತದೆ. ಹೆಣ್ಣು ಲೈಂಗಿಕ ಆಕರ್ಷಕದ ಪ್ರಭಾವಕ್ಕೊಳಗಾಗದಿದ್ದರೆ ತನ್ನ ಹಟಮಾರಿತನವನ್ನು ಪ್ರದರ್ಶಿಸುತ್ತದೆ. ಈ ನಾಟಕೀಯ ವರ್ತನೆ ಬಹಳ ಆಕರ್ಷಣೀಯವಾದುದು. ಹೆಣ್ಣು ತನ್ನ ರೆಕ್ಕೆಗಳನ್ನು ಜೋರಾಗಿ ಬಡಿದು ಗಂಡನ್ನು ದೂರವಿರಿಸಲು ಪ್ರಯತ್ನಿಸುತ್ತದೆ. ಗಂಡು ಇನ್ನೂ ಪೀಡಿಸಿದರೆ ಅದು ಎತ್ತರಕ್ಕೆ ಹಾರಿಬಿಡುತ್ತದೆ. ದೃಢ ನಿರ್ಧಾರದಿಂದ ಗಂಡು ಹೆಣ್ಣು ಚಿಟ್ಟೆಯನ್ನು ಹಿಂಬಾಲಿಸಿ ಜೋಡಿಯಾಗುವುದರಲ್ಲಿ ಯಶಸ್ಸು ಗಳಿಸಿದರೆ ಆ ಪ್ರಣಯದಾಟ ಕೆಲವು ನಿಮಿಷಗಳವರೆಗೆ ಮುಂದುವರಿಯುತ್ತದೆ!

ಚಿಟ್ಟೆಗಳ ಈ ಕಂಪಿಸುವ, ಮರುಳುಗೊಳಿಸುವ, ಮನೋಹರ ಪ್ರಣಯದಾಟ ಮನುಷ್ಯರಿಗೆ ಒಂದು ಒಗಟಾಗಿಯೇ ಉಳಿದಿದೆ. ಅದರಲ್ಲಿರುವ ರಮ್ಯತೆ ಮತ್ತು ಸೌಂದರ್ಯ, ಸಂಗೀತ – ನೃತ್ಯ ಸಂಯೋಜನೆಗಳಿಗೆ ಆಧಾರವಾಗಿವೆ.

ಡಾ|| ಪಿ. ಎಸ್. ರೈ
೩೦೩, ಕ್ಯಾಸ್ಸೆಲ್ ಅಪಾರ್ಟ್‌ಮೆಂಟ್, ಕದ್ರಿ, ಮಂಗಳೂರು - ೫೭೫ ೦೦೨

# ಕ್ರೀಡಾ ಕ್ಷೇತ್ರದಲ್ಲಿ

# ರಾಜಕೀಯ

ಇತ್ತೀಚೆಗೆ ಭಾರತ ಕ್ರಿಕೆಟ್ ನಿಯಂತ್ರಣ ಮಂಡಳಿಯ ಚುನಾವಣೆಯಲ್ಲಿ ಎನ್‌ಸಿಪಿ ಪಕ್ಷದ ನಾಯಕ ಶರದ್ ಪವಾರ್ ಸ್ಪರ್ಧೆಮಾಡಿದ ಹಿನ್ನೆಲೆಯಲ್ಲಿ ಕ್ರೀಡಾಕ್ಷೇತ್ರದಲ್ಲಿ ರಾಜಕಾರಣಿಗಳ ಪ್ರವೇಶದ ಬಗ್ಗೆ ಹೆಚ್ಚು ಚರ್ಚೆ ನಡೆಯುತ್ತಿದೆ. ನಿಜಕ್ಕೂ ಹೇಳಬೇಕೆಂದರೆ, ನಮ್ಮಲ್ಲಿ ವಿವಿಧ ಪಕ್ಷಗಳಿಗೆ ಸೇರಿದ ರಾಜಕಾರಣಿಗಳು ಕ್ರೀಡಾಕ್ಷೇತ್ರದಲ್ಲಿಯೂ 'ಸೇವೆ' ಮಾಡಲು ಮುಂದಾಗುವುದು ಹೊಸದೇನಲ್ಲ. ಅವರ 'ಸೇವೆ'ಯಿಂದಾಗಿ ಕ್ರೀಡಾಕ್ಷೇತ್ರವು ಹೆಚ್ಚು ಸಮಸ್ಯೆ ಹಾಗೂ ವಿವಾದಗಳ ಕೇಂದ್ರವಾಗಿದೆ ಎಂಬುದು ಜನಸಾಮಾನ್ಯರ ಅನಿಸಿಕೆ.

ಮಾಧವರಾವ್ ಸಿಂಧಿಯಾ ಕಾಂಗ್ರೆಸ್ ಪಕ್ಷದ ಪ್ರಮುಖ ನಾಯಕರಾಗಿದ್ದು, ಬಹಳ ಹಿಂದಿನಿಂದಲೂ ಕ್ರಿಕೆಟ್ ಮಂಡಳಿಯ ಮುಖ್ಯಸ್ಥರಾಗಿದ್ದರು. ಸುರೇಶ್ ಕಲ್ಮಾಡಿ ಇಂಡಿಯನ್ ಒಲಿಂಪಿಕ್ ಅಸೋಸಿಯೇಶನ್‌ನಲ್ಲಿ ದೀರ್ಘಕಾಲ ತಳ ಊರಿದವರು. ಈ ಪಟ್ಟಿಗೆ ಈಗ ಭಾರತೀಯ ಜನತಾ ಪಕ್ಷದ ನಾಯಕರೂ ಸೇರುತ್ತಾರೆ. ಈಗೀಗ ಅರುಣ್ ಜೇಟ್ಲಿ ಮತ್ತು ಪ್ರಮೋದ ಮಹಾಜನ್ ಕ್ರಿಕೆಟ್ ಕ್ಷೇತ್ರದಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದಾರೆ. ಈ ಬಾರಿ ಕ್ರಿಕೆಟ್ ಮಂಡಳಿಯ ಅಧ್ಯಕ್ಷ ಸ್ಥಾನದ ಮೇಲೆ ಅರುಣ್ ಜೇಟ್ಲಿ ಕಣ್ಣಿಟ್ಟಿದ್ದರಂತೆ. ಕಡೆಗೆ, ಚುನಾವಣೆಯಲ್ಲಿ ಪವಾರ್ ಸೋಲಿಗೆ ಸೋನಿಯಾ ಗಾಂಧಿಯವರ ಕೈವಾಡವಿತ್ತು ಎಂಬ ವರದಿಗಳೂ ಮಾಧ್ಯಮಗಳಲ್ಲಿ ಪ್ರಕಟವಾದವು.

ಕ್ರೀಡಾಕ್ಷೇತ್ರ ರಾಜಕೀಯದಿಂದ ಮುಕ್ತವಾಗಿರಬೇಕು, ಇಲ್ಲಿಯವರೆಗೂ ಅಂತಹ ಪರಿಶುದ್ಧತೆ ಇತ್ತು ಎಂಬ ಅಭಿಪ್ರಾಯವನ್ನು ನಮ್ಮಲ್ಲಿ ಅನೇಕರು ಹೊಂದಿದ್ದಾರೆ. ಹೀಗಾಗಿ ಕ್ರೀಡೆ ಮತ್ತು ರಾಜಕೀಯದ ನಡುವೆ ಇರುವ ಸಂಬಂಧ ಎಂಥದು, ರಾಜಕೀಯದ ಪ್ರಭಾವ ಹೇಗಿರುತ್ತದೆ, ಕ್ರೀಡೆಯ ಬಗ್ಗೆ ರಾಜಕಾರಣಿಗಳ ಹೆಚ್ಚುತ್ತಿರುವ ಆಸಕ್ತಿ ಮತ್ತು ಭಾಗವಹಿಸುವಿಕೆಯ ಹಿಂದೆ ಇರುವ ಉದ್ದೇಶಗಳು ಯಾವವು – ಇವೇ ಮೊದಲಾದ ಪ್ರಶ್ನೆಗಳನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಬೇಕಿದೆ.

ಇಲ್ಲಿನ ಚರ್ಚೆಯನ್ನು ಮುಂದುವರೆಸುವ ಮುನ್ನ ಕೆಲವೊಂದು ವಿಷಯಗಳ ಬಗ್ಗೆ ಸ್ಪಷ್ಟವಾದ ಅಭಿಪ್ರಾಯಗಳನ್ನು ಹೊಂದಿರಬೇಕಾದ ಅಗತ್ಯವಿದೆ.

ನಾಗರಿಕತೆಯಲ್ಲಿ ಕ್ರೀಡೆಯ ಪಾತ್ರವೇನು? ಅನಾದಿಕಾಲದಿಂದಲೂ ಮನುಷ್ಯ ಗಾಢವಾಗಿ ಪ್ರೀತಿಸುತ್ತಾ ಬಂದಿರುವ ಈ ಚಟುವಟಿಕೆಯಿಂದ ನಮಗೆ ಆಗಬೇಕಾದ ಒಳಿತಿನ ಅಂಶ ಯಾವುದು?

ಕ್ರೀಡೆ ಮಗುವಿನ ಒಂದು ಸಹಜ ಚಟುವಟಿಕೆ. ಅದರ ದೈಹಿಕ ಆರೋಗ್ಯ ಅಭಿವೃದ್ಧಿ ಹೊಂದಲು ಹಾಗೂ ಸುತ್ತಲಿನ ಜಗತ್ತಿನ ಬಗ್ಗೆ ಅರಿವು ಮೂಡಿಸಿಕೊಳ್ಳಲು ಮಗುವಿಗೆ ಆಟಗಳ ಅವಶ್ಯಕತೆಯಿದೆ. ಮಗು ದೊಡ್ಡದಾಗುವಂತೆ ಕ್ರೀಡೆಗಳೂ ಹೆಚ್ಚು ವ್ಯವಸ್ಥಿತವಾಗುತ್ತವೆ. ಅವು ನಮಗೆ ನೀಡುವ ಕೊಡುಗೆಗಳು ಸಹ ವೈವಿಧ್ಯಪೂರ್ಣ. ಇತರರೊಂದಿಗೆ ಬೆರೆಯಲು, ಸಹಕಾರ ಮನೋವೃತ್ತಿ ಬೆಳೆಯಲು ಕ್ರೀಡೆ ನಮಗೆ ಕಲಿಸುತ್ತದೆ. ಹಾಗೆಯೇ ಸೋಲನ್ನು ನಗು ನಗುತ್ತಾ ಸ್ವೀಕರಿಸುವುದು, ಇನ್ನೊಬ್ಬರ ಉತ್ತಮ ಸಾಧನೆಯನ್ನು ಮೆಚ್ಚುವುದು, ಪ್ರೋತ್ಸಾಹಿಸುವುದು ಇವೆಲ್ಲವನ್ನು ಸಹ ನಾವು ಕ್ರೀಡೆಯಿಂದ ಕಲಿಯುತ್ತೇವೆ. ಕ್ರೀಡಾ ನೈತಿಕತೆ ನಮ್ಮ ವ್ಯಕ್ತಿತ್ವಕ್ಕೆ ಪೋಷಕ.

ಆದರೆ ಬಹುತೇಕ ಇಂದಿನ ಸಾಂಘಿಕ ಕ್ರೀಡೆಗಳು ಈ ಎಲ್ಲಾ ಧನಾತ್ಮಕ ಅಂಶಗಳಿಗೆ ತದ್ವಿರುದ್ಧವಾದ ಪ್ರವೃತ್ತಿಗಳನ್ನು ಹುಟ್ಟುಹಾಕುತ್ತಿವೆ. ಎಲ್ಲಿ ಕ್ರೀಡೆಗಳು ಇನ್ನೂ ಅಸಂಘಟಿತವಾಗಿವೆಯೋ, ಕೆಲವೊಬ್ಬ ವ್ಯಕ್ತಿಗಳ ಮುಂದೊಡಗಿನಿಂದ ಭಾಗವಹಿಸಿದವರ ಮನೋಲ್ಲಾಸಕ್ಕೆ ಕಾರಣವಾಗಿದೆಯೋ ಅಲ್ಲಿ ಮಾತ್ರ ಕ್ರೀಡೆಯು ತನ್ನ ಸಹಜ ಮುಗ್ಧತೆಯ ಗುಣಗಳು ಉಳಿದುಕೊಂಡಿವೆ. ಕ್ರೀಡೆ ಹೆಚ್ಚು ವ್ಯವಸ್ಥಿತವಾದ ಕೂಡಲೇ ಅದರಲ್ಲಿ ಪ್ರಾಯೋಜಕತ್ವದ (sponsorship) ಭೂತ ಪ್ರವೇಶಿಸುತ್ತದೆ. ಅದರ ಹಿಂದೆಯೇ ಟಿವಿ ಜಾಹಿರಾತು ಹಕ್ಕುಗಳು ಇವೇ ಮುಂತಾದ ಸಮಸ್ಯೆಗಳು ಸೇರಿಕೊಳ್ಳುತ್ತಿವೆ. ಕ್ರೀಡೆಯಲ್ಲಿ ಹಣದ ಪ್ರಭಾವ ಹೆಚ್ಚುತ್ತಿದ್ದಂತೆ ಮಾಫಿಯಾದಂತಹ ದುಷ್ಟಶಕ್ತಿಗಳು ಅದರಲ್ಲಿ ಪ್ರವೇಶಿಸುತ್ತವೆ.

ಕ್ರೀಡೆಯಲ್ಲಿ ರಾಜಕೀಯ ಇಣುಕುಹಾಕಿದೆಯೇ ಎಂದರೆ, ಅದನ್ನು 'ಕ್ರೀಡೆಯಲ್ಲಿ ಕೆಲವು ರಾಜಕಾರಣಿಗಳ ಪ್ರವೇಶ' ಎಂಬಂತೆ ಅಥವಾ ಹೊಲಸು ಗುಂಪುಗಾರಿಕೆ ಅಥವಾ ಆಂತರಿಕ ಜಗಳಗಳು ಎಂಬುದಕ್ಕೆ ಮಾತ್ರ ಸೀಮಿತಗೊಳಿಸದೆ ವಿಶಾಲ ಅರ್ಥದಲ್ಲಿ ಅದನ್ನು ಚರ್ಚಿಸುವುದು ಸೂಕ್ತ.

ಶೋಷಕ ವರ್ಗದ ರಾಜಕೀಯವು ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಕಾಪಾಡಿಕೊಂಡು ಹೋಗಲು ಯತ್ನಿಸುತ್ತದೆ. ಆದ್ದರಿಂದಲೇ ಅದು ಜನತೆಯ ಒಗ್ಗಟ್ಟನ್ನು ಮುರಿಯಲು ಇಚ್ಛಿಸುತ್ತದೆ. ಅವರಲ್ಲಿರುವ ಮೌಲ್ಯಪ್ರಜ್ಞೆಯನ್ನು ನಾಶಮಾಡಿ ಅವರನ್ನು ವಿಕೃತಾವಸ್ಥೆಗೆ ತಳ್ಳಲು ಯತ್ನಿಸುತ್ತದೆ. ಸಾಮಾಜಿಕ ಕ್ರಿಯೆಯಲ್ಲಿ ನಂಬಿಕೆ ಕಳೆದುಕೊಂಡ ಜಡಜೀವಚ್ಛವಗಳನ್ನು ಉತ್ಪಾದಿಸುವುದೇ ಆ ವರ್ಗದ ಗುರಿಯಾಗಿದೆ.

ಇದಕ್ಕೆ ವಿರುದ್ಧವಾಗಿ ಶೋಷಣೆಗೆ ತುತ್ತಾದ ಜನರು ನಡೆಸುವ ರಾಜಕೀಯವು ಸಮಾಜದ ಐಕ್ಯತೆಯನ್ನು ಕಾಪಾಡಲು ಯತ್ನಿಸುತ್ತದೆ. ಅದು ಮರ್ದಿತ ಜನತೆಯಲ್ಲಿ ಪ್ರಗತಿಶೀಲ ಮಾನವ ಮೌಲ್ಯಗಳನ್ನು ಪೋಷಿಸುತ್ತದೆ. ಅವರಲ್ಲಿ ಜೀವನೋಲ್ಲಾಸವನ್ನು, ಮಾನವ ಪ್ರಯತ್ನದ ಕುರಿತಾದ ಆತ್ಮವಿಶ್ವಾಸವನ್ನು ಹುಟ್ಟುಹಾಕಿ ಸಾಮಾಜಿಕ ಕ್ರಿಯೆಗೆ ಅವರನ್ನು ಪ್ರೇರೇಪಿಸುತ್ತದೆ.

ಈ ಎರಡೂ ಹಿತಾಸಕ್ತಿಗಳೂ ಏಕಕಾಲದಲ್ಲಿ ಸಮಾಜದ ಒಳಗೆ ಕಾರ್ಯೋನ್ಮುಖವಾಗಿದ್ದರೂ ಸಹ, ಸದ್ಯಕ್ಕೆ ಇಲ್ಲಿ ಶೋಷಿತರ ರಾಜಕೀಯದ್ದೇ ಮೇಲುಗೈ. ಅದು ಸಾಹಿತ್ಯ, ಕ್ರೀಡೆ, ಶಿಕ್ಷಣ ಹೀಗೆ ಎಲ್ಲಾ ಕ್ಷೇತ್ರದಲ್ಲೂ ವಿಜೃಂಭಿಸುತ್ತಿದೆ. ಈ ಅರ್ಥದಲ್ಲಿ ಅದು ಸರ್ವಾಂತರ್ಯಾಮಿ. ಆದರೆ ಅದು ಸರ್ವಶಕ್ತವಾಗದಂತೆ ನೋಡಿಕೊಳ್ಳಬೇಕಾದದ್ದು, ಕ್ರಮೇಣ ಅದು ಕ್ಷೀಣವಾಗುವಂತೆ ಕಾರ್ಯತಂತ್ರಗಳನ್ನು ರೂಪಿಸಬೇಕಾದದ್ದು ಜನಸಾಮಾನ್ಯರ ಕರ್ತವ್ಯ.

ಶೋಷಕರ ಹಿತಾಸಕ್ತಿಗಳು ಕ್ರೀಡೆಯಲ್ಲಿ ಹೇಗೆ ವ್ಯಕ್ತವಾಗುತ್ತಿದೆ? ಶೋಷಕರು ಕ್ರೀಡೆಯನ್ನು ಒಂದು ಲಾಭಪ್ರೇರಿತ ಉದ್ಯಮವನ್ನಾಗಿಸಲು ಶತಾಯಗತಾಯ ಪ್ರಯತ್ನಿಸುತ್ತಾರೆ. ಅದರಿಂದಾಗಿ ತಮಗೆ ಅಥವಾ ತಾವು ಪ್ರತಿನಿಧಿಸುವ ಸಂಸ್ಥೆಗಳಿಗೆ 'ಎಷ್ಟು ಗಿಟ್ಟುತ್ತದೆ?'

ಡಾ|| ಬಿ. ಆರ್. ಮಂಜುನಾಥ್





# ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.)

(ನೋಂದಣಿ ಸಂಖ್ಯೆ : ಜಿಎಎನ್-4-00223-2004-05/25.08.2004)
ಸಂಖ್ಯೆ 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
ದೂರವಾಣಿ / ಫ್ಯಾಕ್ಸ್: 22203580/81 e-mail: msktrust@rediffmail.com

## ವಿನಮ್ರ ಮನವಿ

ಕಾರ್ಮಿಕ ವರ್ಗದ ಮುಂದಾಳು, ಭಾರತ ಕಮ್ಯುನಿಸ್ಟ್ ಪಕ್ಷದ ಅದ್ವಿತೀಯ ನಾಯಕ ಹಾಗೂ ಮೂರು ಬಾರಿ ರಾಜ್ಯದ ವಿಧಾನಸಭೆಯ ಸದಸ್ಯರಾಗಿ ನಿಸ್ವಾರ್ಥ ಸೇವೆ ಸಲ್ಲಿಸಿದ ದಿ|| ಎಂ. ಎಸ್. ಕೃಷ್ಣನ್ ಕರ್ನಾಟಕದ ಎಲ್ಲ ವಿಭಾಗಗಳ ಜನತೆಗೆ ಪರಿಚಿತರಾಗಿದ್ದವರು.

ಮಾಜಿ ಸಂಸತ್ ಸದಸ್ಯರು, ಶಾಸಕರು ಆಗಿದ್ದ ರಾಜ್ಯದ ಕಮ್ಯುನಿಸ್ಟ್ ಚಳುವಳಿಯ ರೂವಾರಿ ಶ್ರೀ ಬಿ. ವಿ. ಕಕ್ಕಿಲ್ಲಾಯ, ಖ್ಯಾತ ಸಾಹಿತಿ ಶ್ರೀ ವ್ಯಾಸರಾಯ ಬಲ್ಲಾಳ, ಶಿಕ್ಷಕರು ಮತ್ತು ವಿಜ್ಞಾನ ಸಾಹಿತ್ಯ ಬರಹಗಾರರೂ ಆದ ಪ್ರೊ|| ಜೆ. ಆರ್. ಲಕ್ಷ್ಮಣರಾವ್, 'ಹೊಸತು' ತಿಂಗಳ ಪತ್ರಿಕೆಯ ಸಂಪಾದಕರು, ಲೇಖಕರು, ವಿಚಾರವಾದಿಗಳೂ ಆದ ಡಾ|| ಜಿ. ರಾಮಕೃಷ್ಣ, ನವಕರ್ನಾಟಕ ಪ್ರಕಾಶನ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್, ಮಾಜಿ ಶಾಸಕರು, ಹಿರಿಯ ವಕೀಲರು ಮತ್ತು ಎ.ಐ.ಟಿ.ಯು.ಸಿ ಕಾರ್ಮಿಕ ಸಂಘಟನೆಯ ನಾಯಕರಾದ ಶ್ರೀ ಎಂ. ಸಿ. ನರಸಿಂಹನ್, ಶ್ರೀಮತಿ ಪುಷ್ಪಾ ಕೃಷ್ಣನ್ ಮತ್ತು ಕರ್ನಾಟಕ ಪತ್ರಕರ್ತರ ಸಂಘದ ಸಂಸ್ಥಾಪಕ ಸದಸ್ಯರಲ್ಲೊಬ್ಬರಾದ ಹಿರಿಯ ಪತ್ರಕರ್ತ ಶ್ರೀ ಸಿ. ಆರ್. ಕೃಷ್ಣರಾವ್, ಸಮಾಜ ಸೇವಾಕರ್ತ, ಭಾರತ ಸರಕಾರದಲ್ಲಿ ಟೆಲಿಕಾಂ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀ ಕೆ. ಎಸ್. ಪಾರ್ಥಸಾರಥಿ, ಇವರು ಈ ಸ್ಮರಣ ಸಂಸ್ಥೆಯ ಸಂಸ್ಥಾಪಕರಾಗಿದ್ದಾರೆ.

ಸಂಸ್ಥೆಯು ಈಗ ಹನ್ನೆರಡು ಮಂದಿ ಟ್ರಸ್ಟಿಗಳನ್ನು ಹೊಂದಿದ್ದು ಈ ಕೆಳಗೆ ಹೆಸರಿಸಿದವರು ಪದಾಧಿಕಾರಿಗಳಾಗಿದ್ದಾರೆ :

1. ಶ್ರೀ ಕೋ. ಚೆನ್ನಬಸಪ್ಪ - ಅಧ್ಯಕ್ಷರು
2. ಶ್ರೀ ಕೆ. ಎಸ್. ಪಾರ್ಥಸಾರಥಿ - ಕಾರ್ಯನಿರ್ವಾಹಕ ಟ್ರಸ್ಟಿ
3. ಶ್ರೀ ಕೆ. ಶ್ರೀನಿವಾಸಮೂರ್ತಿ - ಖಜಾಂಚಿ

ಇತರ ಟ್ರಸ್ಟಿಗಳು : ಶ್ರೀಮತಿ ಸುರೇಖ ಶೆಟ್ಟಿ, ಶ್ರೀಯುತರಾದ ಮುರಳೀಧರ, ಆರ್. ಎಸ್. ರಾಜಾರಾಮ್, ಜಿ. ಶ್ರೀನಿವಾಸರಾಜು, ಸಿದ್ದನಗೌಡ ಪಾಟೀಲ, ಎಚ್. ವಿ. ಅನಂತಸುಬ್ಬ ರಾವ್, ಎಸ್. ಸುರೇಂದ್ರ, ಎ. ರಮೇಶ ಉಡುಪ, ಎಂ. ಡಿ. ಹರಿಗೋವಿಂದ್.

ಎಂ. ಎಸ್. ಕೃಷ್ಣನ್ ಅವರು ಜೀವನವಿಡೀ ದುಡಿದು ಕನಸುಕಂಡ, ಹಂಬಲಿಸಿದ ಆಶಯಗಳನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಅರ್ಥಪೂರ್ಣ ಯೋಜನೆಗಳು ಹಾಗೂ ಕ್ರಿಯಾಶೀಲ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಧ್ಯೇಯೋದ್ದೇಶಗಳನ್ನು ಸ್ಮರಣ ಸಂಸ್ಥೆ ಹೊಂದಿದೆ.

ವೃದ್ಧಾಶ್ರಮ, ಅಬಲೆಯರು ಮತ್ತು ಬಡಮಕ್ಕಳಿಗೆ ವಸತಿ ಗೃಹವೇ ಅಲ್ಲದೆ ಅವರ ಆರ್ಥಿಕ ಸ್ವಾವಲಂಬನೆಗೆ ಅಗತ್ಯವಾದ ತಾಂತ್ರಿಕ ಶಿಕ್ಷಣ ತರಬೇತಿ, ಸಮಾಜ ವಿಜ್ಞಾನಕ್ಕೆ ಸಂಬಂಧಪಟ್ಟಂತೆ ಸಂಶೋಧನಾ ಕೇಂದ್ರ, ಅನಕ್ಷರತೆ, ಮೂಢನಂಬಿಕೆ, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಪಿಡುಗುಗಳ ನಿರ್ಮೂಲನಾ ಕಾರ್ಯಕ್ರಮ, ಭೂಕಂಪ ಪ್ರವಾಹಗಳಂತಹ ಪ್ರಕೃತಿ ವಿಕೋಪಗಳು ಸಂಭವಿಸಿದ ಸಂದರ್ಭಗಳಲ್ಲಿ ನೊಂದ ಸಂತ್ರಸ್ತರಿಗೆ ನೆರವು – ಇವೇ ಮೊದಲಾದ ಯೋಜನೆಗಳಿಗೆ ಸಂಸ್ಥೆ ಆದ್ಯತೆ ನೀಡುತ್ತದೆ.

ತಮ್ಮ ಕಡೆಯ ದಿನಗಳವರೆಗೂ ಮಾನವೀಯ ಅನುಕಂಪ, ಸಜ್ಜನಿಕೆಗಳಿಂದ ಕೂಡಿದ ಸಾರ್ಥಕ ಬದುಕಿನಿಂದ ಎಂ. ಎಸ್. ಕೃಷ್ಣನ್ ಎಲ್ಲರಿಗೂ ಆತ್ಮೀಯರಾಗಿದ್ದವರು. ಅವರ ಆಶಯ, ಕನಸುಗಳನ್ನು ಕಾರ್ಯರೂಪಕ್ಕೆ ತರಲು ಉದ್ದೇಶಿಸಿರುವ ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಗೆ ಸಮಾಜದ ಎಲ್ಲ ವಿಭಾಗದ ಜನರು, ಅವರ ಸಂಗಾತಿಗಳು, ಅಭಿಮಾನಿಗಳು ಸಂಸ್ಥೆಯ ಬಗ್ಗೆ ಆದರವಿಟ್ಟು ಉದಾರ ಕೊಡುಗೆ, ಬೆಂಬಲ ಸಹಕಾರಗಳನ್ನು ನೀಡಬೇಕೆಂದು ಮನವಿಮಾಡಿಕೊಳ್ಳುತ್ತೇವೆ. ಚೆಕ್/ಡಿ.ಡಿ./ಎಂ.ಒ.ಗಳನ್ನು **ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.)** ಅಥವಾ M. S. Krishnan Memorial Trust (Regd.) ಹೆಸರಲ್ಲಿ ಕಳಿಸಿ ಅಥವಾ **ಕೆನರಾ ಬ್ಯಾಂಕ್**, ಮಾಧವನಗರ ಶಾಖೆ, ಬೆಂಗಳೂರು - 560 001 ಇಲ್ಲಿ ಈ ಸಂಸ್ಥೆಯ **ಉಳಿತಾಯ ಖಾತೆ ಸಂಖ್ಯೆ 56309**ಗೆ ಜಮಾ ಮಾಡಬೇಕಾಗಿ ಕೋರಿಕೆ.

ವಿವರಗಳಿಗೆ ಸಂಪರ್ಕಿಸಿ : ಕೆ. ಎಸ್. ಪಾರ್ಥಸಾರಥಿ, ಮೊಬೈಲ್ : 94480 93966
ಇ-ಮೇಯಿಲ್ : kspsarathy@rediffmail.com

(ಕೋ. ಚೆನ್ನಬಸಪ್ಪ)
ಅಧ್ಯಕ್ಷರು

(ಕೆ. ಎಸ್. ಪಾರ್ಥಸಾರಥಿ)
ಕಾರ್ಯನಿರ್ವಾಹಕ ಟ್ರಸ್ಟಿ

ಎಂದು ಲೆಖ್ಖಾಚಾರ ಹಾಕುತ್ತಾರೆ. ಇದಲ್ಲದೆ, ಆಳುವವರ್ಗ ಪ್ರತಿನಿಧಿಸುವ ವಿಕೃತಮೌಲ್ಯಗಳನ್ನು ಪ್ರಚುರಪಡಿಸಲು ಸಹ ಕ್ರೀಡೆ ಅವರಿಗೆ ಪ್ರಭಾವಶಾಲಿ ಮಾಧ್ಯಮವಾಗುತ್ತದೆ. ಕ್ರೀಡೆ ಜನಾಂಗೀಯವಾದ, ಮತೀಯವಾದ ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ರಾಷ್ಟ್ರದ ಬಗ್ಗೆ ಅಂಥ ಅಭಿಮಾನವನ್ನು ಉದ್ದೀಪನಗೊಳಿಸಲು ಉಪಯೋಗವಾಗುತ್ತಿದೆ.

**ಲಾಭಕ್ಕಾಗಿ ಕ್ರೀಡೆ**

ಭಾರತೀಯ ಕ್ರೀಡಾ ಜಗತ್ತಿನಲ್ಲಿ ನಡೆಯುತ್ತಿರುವ ಎಲ್ಲಾ ಅವ್ಯವಹಾರಗಳನ್ನು ಹಾಗೂ ದುರ್ವಿದ್ಯಗಳನ್ನು ಅರ್ಥ ಮಾಡಿಕೊಳ್ಳಬೇಕೆಂದರೆ, ನಮ್ಮ ದೇಶದ ಕ್ರಿಕೆಟ್ ಆಟವನ್ನು ಸೂಕ್ಷ್ಮವಾಗಿ ಗಮನಿಸುವುದು ಅಗತ್ಯ. ಅತಿಹೆಚ್ಚು ಜಾಹಿರಾತು ಪ್ರಾಯೋಜಕತ್ವವಿರುವ, ಅತಿ ಹೆಚ್ಚು ಹಣ ಕೇಂದ್ರೀಕೃತವಾಗಿರುವ ಕ್ರಿಕೆಟ್ ಆಟ, ಆ ಕಾರಣದಿಂದಲೇ ಅತಿ ಹೆಚ್ಚು ಹೊಲಸಿಗೆ ತವರೂರಾಗಿದೆ. ತತ್ಫಲವಾಗಿ ಹೆಚ್ಚಿನ ಸಂಖ್ಯೆಯಲ್ಲಿ, ಅತಿ ಪ್ರಭಾವಶಾಲಿ ರಾಜಕಾರಣಿಗಳು ಇದಕ್ಕೆ ಮುಗಿಬಿದ್ದಿದ್ದಾರೆ.

ಭಾರತದಾದ್ಯಂತ ಟೆಲಿವಿಷನ್‌ನ ಜಾಲ ಹಬ್ಬುವುದಕ್ಕೂ ಭಾರತ ೧೯೮೩ರಲ್ಲಿ ಕ್ರಿಕೆಟ್ ವಿಶ್ವಕಪ್‌ಅನ್ನು ಗೆಲ್ಲುವುದಕ್ಕೂ ಸರಿಹೋಯಿತು. ಅಲ್ಲಿಂದಾಚೆಗೆ ಇವೆರಡರ ನಂಟು ಬೆಳೆಯುತ್ತಲೇ ಹೋಗಿದೆ. ಜೊತೆಗೆ ಪಂದ್ಯಕ್ಕೆ ಮುನ್ನ, ಪಂದ್ಯದ ನಂತರ ಮತ್ತು ಎಲ್ಲಕ್ಕೂ ಮಿಗಿಲಾಗಿ, ಪಂದ್ಯದ ಮಧ್ಯೆ – ಓವರ್‌ಗಳ ಮಧ್ಯೆಯೂ ಸಹ ಜಾಹಿರಾತಿನ ಭರಾಟೆ ಆರಂಭವಾಯಿತು. ಇದರಿಂದ ಕ್ರಿಕೆಟ್ ಮಂಡಳಿಯ ಖಜಾನೆಯೂ ಭರ್ತಿಯಾಯಿತು. ಇದರಲ್ಲಿ ಜಗಮೋಹನ್ ದಾಲ್ಮಿಯಾ, ಮುತ್ತಯ್ಯ (SPIC ಗೊಬ್ಬರ ಹಗರಣದ ಖ್ಯಾತಿ) ಮೊದಲಾದ ಉದ್ಯಮಪತಿಗಳು, ವಿವಾದಾಸ್ಪದ ವ್ಯಕ್ತಿಗಳೂ ಪ್ರವೇಶಿಸಿದರು. ಹಾಗೆಯೇ ಕೇವಲ ಪ್ರತಿಷ್ಠೆ ಮತ್ತು ವರ್ಚಸ್ಸಿಗಾಗಿ ಅಥವಾ ಕೇವಲ ಹವ್ಯಾಸಕ್ಕಾಗಿ ಎಂಬಂತೆ ಕ್ರಿಕೆಟ್ ಮಂಡಳಿಯನ್ನು ಪ್ರವೇಶಿಸುತ್ತಿದ್ದ ರಾಜಕಾರಣಿಗಳು ಈಗ ಹೆಚ್ಚು ಆಸಕ್ತಿಯಿಂದ ಇದರಲ್ಲಿ ಪ್ರವೇಶಿಸಲು ಆರಂಭಿಸಿದ್ದಾರೆ.

ಈ ಬಾರಿಯ ಇಂಡಿಯಾ-ಆಸ್ಟ್ರೇಲಿಯಾ ಮಧ್ಯದ ಟೆಸ್ಟ್ ಸರಣಿಗೆ ಮುನ್ನ ಪಂದ್ಯಗಳ ಪ್ರಸರಣ ಹಕ್ಕಿಗೆ ಸಂಬಂಧಿಸಿದಂತೆ ದೊಡ್ಡ ಕೋಲಾಹಲವೇ ಸಂಭವಿಸಿತು. ಇದೇನೂ ಹೊಸ ಬೆಳವಣಿಗೆಯಲ್ಲ. ಕಳೆದ ವಿಶ್ವಕಪ್ ಸಂದರ್ಭದಲ್ಲಿ, ಈ ಪ್ರಸರಣ ಹಕ್ಕಿಗೆ ಸಂಬಂಧಿಸಿದಂತೆ ವಿವಾದಗಳು ನಡೆಯುತ್ತಲೇ ಇದ್ದವು. ಆದರೆ ಈ ಬಾರಿಯ ವಿವಾದದಲ್ಲಿ ಕೆಲವೊಂದು ಮುಖ್ಯಾಂಶಗಳು ಬೆಳಕಿಗೆ ಬಂದಿವೆ.

> ## ಪ್ರಶಸ್ತಿಗಳ ಜಾತ್ರೆ
>
> ರಾಜ್ಯೋತ್ಸವದಂದು
> ಪ್ರಶಸ್ತಿಗಳ ಜಾತ್ರೊ ಜಾತ್ರೆ
> ೩-೪ ಪಟ್ಟಿಗೆ ೧೧೯ ಜನಾಯ್ಕೆ
> ಇದಕೆ ಕಣ್ಣಿಗೆ ಕಾಣದ ಋಣಭಾರ
> ವಿಧಾನ ಸಭಾಕ್ಷೇತ್ರಕ್ಕೊಂದು
> ಮಾರಿಬಿಡೋಣವೆಂದರೆ
> ಪರಿಷತ್ ಸದಸ್ಯರ ಗೊಂದಲ
> ಜಿ.ಪಂ.ನಲ್ಲಿ ಕೋಲಾಹಲ
> ತಾ.ಪಂ., ಗ್ರಾ.ಪಂ. ಬೇಡಿಕೆ ಪಟ್ಟಿ
> ಕಾವೇರಿ ಕೃಷ್ಣೆಯವರೆಗೆ
>
> **ಶಾಂತಕುಮಾರ್ ಪೂಜಾರ್**
> ಎ. ಕೆ. ಎನ್. ಮಾಡಲ್ ಇಂಗ್ಲಿಷ್ ಹೈಸ್ಕೂಲ್, ಕೆ. ಪಿ. ಪೂರ್ವ
> ೭ನೇ ಅಡ್ಡರಸ್ತೆ, ಶೇಷಾದ್ರಿಪುರಂ, ಬೆಂಗಳೂರು - ೫೬೦ ೦೨೦

ಭಾರತದಲ್ಲಿ ಕ್ರಿಕೆಟ್‌ನ ನಾಲ್ಕು ವರ್ಷಗಳ ಪ್ರಸರಣ ಹಕ್ಕಿಗೆ ಟೆಂಡರ್ ಕರೆಯಲಾಗಿತ್ತು. ಇದರಲ್ಲಿ ಝೀ ಟಿವಿ ಗೆದ್ದು ೩೦೮ಕೋಟಿ ರೂಪಾಯಿಗಳಿಗೆ ಈ ಹಕ್ಕನ್ನು ಪಡೆದುಕೊಂಡಿತ್ತು. ಇದಕ್ಕೆ ೨೦ ಕೋಟಿ ಮುಂಗಡವನ್ನು ಸಂದಾಯ ಮಾಡಿತು. ಆದರೆ ಇದರ ವಿರುದ್ಧ ಇಎಸ್‌ಪಿಎನ್ ಹಾಗೂ ಸ್ಟಾರ್ ಟಿವಿಗಳು ಕೋರ್ಟು ಮೆಟ್ಟಲು ಹತ್ತಿದವು. ಇಂಥ ಪ್ರಸರಣವನ್ನು ಮಾಡಲು ಕನಿಷ್ಠ ಎರಡು ವರ್ಷಗಳ ಅನುಭವವಿರಬೇಕು, ಅದು ಝೀ ಟಿವಿಗೆ ಇಲ್ಲ ಎಂಬುದು ಅವರ ವಾದ. ಕಡೆಗೆ ಗೋಜಲು ಗೋಜಲಾದ ಈ ಕೇಸಿನಲ್ಲಿ ಸರಣಿಯನ್ನು ದೂರದರ್ಶನವೇ ಪ್ರಸರಿಸಲಿ ಎಂಬಂತಾಯಿತು.

ಅದೇನೇ ಇರಲಿ, ಈ ಕೇಸಿನುದ್ದಕ್ಕೂ ಕ್ರಿಕೆಟ್ ಮಂಡಳಿ (ಬಿಸಿಸಿಐ) ತೆಗೆದುಕೊಂಡ ನಿಲುವುಗಳು ಕುತೂಹಲಕರವಾಗಿವೆ. ಕ್ರಿಕೆಟ್ ಮಂಡಳಿಯು ವಿವಾದದಲ್ಲಿ ಮೊದಲು ತೊಡಗಿದ್ದ ಎರಡು ಟಿವಿ ಗುಂಪುಗಳಿಗೂ ಟೆಂಡರ್‌ನಲ್ಲಿ ಭಾಗವಹಿಸುವ ಅರ್ಹತೆ ಇದ್ದಿತು ಎಂಬ ಹೇಳಿಕೆ ನೀಡಿತು. ಅನಂತರ ಇಬ್ಬರಿಗೂ ಅರ್ಹತೆ ಇರಲಿಲ್ಲ ಎಂದು ಅದೇ ಮಂಡಳಿಯೇ ನ್ಯಾಯಾಲಯದಲ್ಲಿ ಸ್ವಲ್ಪವೂ ಸಂಕೋಚವಿಲ್ಲದೆ ತನ್ನ ನಿಲುವು ಬದಲಾಯಿಸಿತು. ಕೇಸು ನಡೆಯುತ್ತಿದ್ದಾಗ ಸರ್ಕಾರಿ ವಕೀಲರು ಕ್ರಿಕೆಟ್ ಮಂಡಳಿಯು ಸರ್ಕಾರದಿಂದ ಹಲವು ಸವಲತ್ತುಗಳನ್ನು ಪಡೆಯುವಂಥದ್ದು, ಅದು ಸರ್ಕಾರಕ್ಕೆ ಲೆಖ್ಖ ಒಪ್ಪಿಸಬೇಕು, ಸರ್ಕಾರದ ನಿಯಂತ್ರಣವನ್ನು ಒಪ್ಪಬೇಕು ಎಂದು ವಾದಿಸಿದರು. ಮಂಡಳಿಯು, ನಾವು ಸರ್ಕಾರದಿಂದ ಧನ ಸಹಾಯವನ್ನು ಪಡೆದಿಲ್ಲವಾದ್ದರಿಂದ ನಾವು ಸರ್ಕಾರಕ್ಕೆ ಜವಾಬು ನೀಡಬೇಕಾಗಿಲ್ಲ, ಸರ್ಕಾರಕ್ಕೆ ನಮ್ಮ ವ್ಯವಹಾರದಲ್ಲಿ ಮಧ್ಯಪ್ರವೇಶ ಮಾಡುವ ಹಕ್ಕೂ ಇಲ್ಲ ಎಂದಿತು. ಮುಂದುವರೆದು ಅದು ತನ್ನ ಲೆಖ್ಖಪತ್ರಗಳನ್ನು ಸಾರ್ವಜನಿಕ ತಪಾಸಣೆಗೆ ಒಡ್ಡುವ ಸಾಧ್ಯತೆಯನ್ನೂ ನಿರಾಕರಿಸಿತು. ಭಾರತ ತಂಡದ ವಿದೇಶಿ ಪ್ರವಾಸಗಳಿಗೆ ಸರ್ಕಾರವೇ ಅನುಮತಿ ನೀಡುವ ಪದ್ಧತಿ ಚಾಲ್ತಿಯಲ್ಲಿದ್ದರೂ ಮಂಡಳಿಯು ಸರ್ಕಾರದ ಮುಖ್ಯಪಾತ್ರವನ್ನು ತಳ್ಳಿಹಾಕಿ, ''ಭಾರತ ಕ್ರಿಕೆಟ್ ತಂಡ ಎಂಬುದು ವಾಸ್ತವದಲ್ಲಿ ಬಿಸಿಸಿಐ ತಂಡ, ಅದು ಭಾರತ ದೇಶದ ತಂಡವಲ್ಲ'' ಎಂದೂ ವ್ಯಾಖ್ಯಾನ ಮಾಡಿತು! ಭಾರತ ತಂಡದ ಹೆಸರಿನಲ್ಲಿ ದೇಶಾಭಿಮಾನನ್ನು ಪ್ಯಾಕೇಜ್ ಮಾಡುತ್ತಿದ್ದವರಿಗೆಲ್ಲಾ ಇದರಿಂದ ಬೇಸರವಾಗಿದೆ. ಕೆಲವು ಹಳೇ ಆಟಗಾರರೂ ಇದಕ್ಕೆ ಖಾರವಾಗಿ ಪ್ರತಿಕ್ರಿಯಿಸಿದ್ದಾರೆ. ಪಾಪ, ಕ್ರೀಡಾಂಗಣದಲ್ಲಿ ಭಾರತದ ಬಾವುಟ ಹಿಡಿದು ಕುಣಿಯುವ ಹಾಗೂ ಮುಖದ ಮೇಲೆ ಬಾವುಟದ ಬಣ್ಣ ಬಳಿದುಕೊಳ್ಳುವ ಕ್ರೀಡಾಭಿಮಾನಿಗಳಿಗೂ ಇದು ಆಘಾತ ಉಂಟುಮಾಡಿದೆ!

**ಚುನಾವಣೆಯ ಪ್ರಹಸನ**

ಇದೇ ಸಂದರ್ಭದಲ್ಲಿ ಕ್ರಿಕೆಟ್ ಮಂಡಳಿ ನಾಟಕದ ಇನ್ನೊಂದು ಅಂಕವೂ ಆರಂಭವಾಯಿತು. ಹಲವಾರು ವರ್ಷಗಳಿಂದ ಅಧ್ಯಕ್ಷ ಪದವಿಗೆ ಅಂಟಿಕೊಂಡಿದ್ದ ದಾಲ್ಮಿಯಾ ಈ ಬಾರಿ ಮತ್ತೆ ಆಯ್ಕೆ ಆಗುವಂತಿರಲಿಲ್ಲ. ಆದರೆ ಅವರು ಮಂಡಳಿ ಮೇಲಿನ ಹಿಡಿತವನ್ನು ಬಿಡಲು ಸುತರಾಂ ಸಿದ್ಧರಿರಲಿಲ್ಲ. ಆದ್ದರಿಂದ ತಮ್ಮ ಪರವಾಗಿ ಸೂತ್ರದ ಗೊಂಬೆಯಾಗಿರಲು ರಣಬೀರ್ ಸಿಂಗ್ ಮಹೇಂದ್ರ ಎಂಬ ವ್ಯಕ್ತಿಯನ್ನು ಅವರು ಅಖಾಡಕ್ಕೆ ಇಳಿಸಿದರು. ಅದು ಸಾಲದೆಂಬಂತೆ ಮಂಡಳಿಯ ಸಂವಿಧಾನದಲ್ಲೇ ಇರದಿದ್ದ ಪೇಟ್ರನ್-ಇನ್-ಚೀಫ್ ಎಂಬ ಪದವಿಯನ್ನು ಸೃಷ್ಟಿಸಿಕೊಂಡರು.

ದಾಲ್ಮಿಯಾ ವಿರೋಧಿಗಳು ಮದ್ರಾಸ್ ಹೈಕೋರ್ಟಿನಿಂದ ಒಬ್ಬ ನಿವೃತ್ತ ನ್ಯಾಯಾಧೀಶರು ಮೇಲ್ವಿಚಾರಕರಾಗಿ ನೇಮಕವಾಗುವಂತೆ ನೋಡಿಕೊಂಡರೆ, ದಾಲ್ಮಿಯಾ ಗುಂಪು ಅದಕ್ಕೆ ವಿರುದ್ಧವಾಗಿ ನಾವು ಇನ್ನೊಂದು ತೀರ್ಪು ತಂದಿದ್ದೇವೆ ಎಂದರು. ದಾಲ್ಮಿಯಾ ವಿರೋಧಿ ಬಣ ದಾಲ್ಮಿಯಾರನ್ನು ಸೋಲಿಸಲೆಂದು ಶರದ್ ಪವಾರ್‌ರನ್ನು ಕಣಕ್ಕಿಳಿಸಿತು. ನಂತರ ನಡೆದ ಚುನಾವಣೆಯಲ್ಲಿ ಪವಾರ್ ಪರವಾಗಿ ಮತ ಚಲಾಯಿಸಲು ಬಂದ ಮಹಾರಾಷ್ಟ್ರದ ಕ್ರಿಕೆಟ್ ಮಂಡಳಿಯ ಪ್ರತಿನಿಧಿಗಳಿಗೆ ಮತದಾನ ಮಾಡಲು ಅವಕಾಶ ನೀಡಲಿಲ್ಲವಂತೆ. ಇದರಲ್ಲಿ ಸರಿ ಯಾರದು, ತಪ್ಪು ಯಾರದು ಎನ್ನುವುದರ ಬಗ್ಗೆ ಹಲವಾರು ವ್ಯಾಖ್ಯಾನಗಳಿವೆ. ಒಂದೊಂದು ಪತ್ರಿಕೆಯೂ ಒಂದೊಂದು ರೀತಿ ಬರೆಯುತ್ತಿದೆ. ಕ್ರಿಕೆಟ್ ಬಗ್ಗೆ ಬರೆಯುವ ಲೇಖಕರೂ ಬೇರೆ ಬೇರೆ ಗುಂಪಿನ ವಕ್ತಾರರಂತೆ ಕಾಣಿಸುತ್ತಿದ್ದಾರೆ. ಕೆಲವರು ಚುನಾವಣೆಯ ಸಮಯದಲ್ಲಿ ಝೀ ಟಿವಿ ಗುಂಪಿನವರು ಪವಾರ್‌ಗೆ ಬೆಂಬಲವಾಗಿ ಕಲ್ಕತ್ತಾದಲ್ಲಿ ಮೊಕ್ಕಾಂ ಮಾಡಿದ್ದರು ಎನ್ನುತ್ತಾರೆ. ''ದಾಲ್ಮಿಯಾ ಕ್ರಿಕೆಟ್ಟನ್ನು ಜಾಗತೀಕರಣಗೊಳಿಸಿದ ಕ್ರಿಯಾಶೀಲ, ಇಂಟರ್‌ನ್ಯಾಷನಲ್ ಕ್ರಿಕೆಟ್ ಕಾನ್ಫರೆನ್ಸಿಗೆ ಸಡ್ಡುಹೊಡೆದ ಧೀರ, ಮಂಡಳಿಯ ಕಚೇರಿಯಲ್ಲಿ ಲಕ್ಷ್ಮಿ ಕಾಲುಮುರಿದು ಬಿದ್ದುಕೊಂಡಿರುವಂತೆ ಮಾಡಿದ ಹಣಕಾಸಿನ ಜಾದೂಗಾರ'' ಎಂದು ಕೆಲವು ಪತ್ರಿಕೆಗಳು ಜಗಮೋಹನ್ ದಾಲ್ಮಿಯಾರನ್ನು ಹೊಗಳಿ ಅಟ್ಟಕ್ಕೇರಿಸಿವೆ.

ಒಟ್ಟಿನಲ್ಲಿ ದಾಲ್ಮಿಯಾ ಗುಂಪಾಗಲಿ, ಪವಾರ್ ಗುಂಪಾಗಲಿ ಕ್ರಿಕೆಟ್ಟನ್ನು ಉದ್ಧಾರ ಮಾಡಲು ಇಳಿದುಬಂದಿಲ್ಲ ಎಂಬುದು ಎಲ್ಲರೂ ತಿಳಿಯಬೇಕಾದ ವಿಷಯ. ಅವರು ಹಲವು ಬಂಡವಾಳಶಾಹಿ ಕಂಪನಿಗಳಿಗೆ ಲಾಭ ಖಚಿತಪಡಿಸಲು ಹಾಗೂ ಆ ಪ್ರಕ್ರಿಯೆಯಲ್ಲಿ ತಾವೂ ದುಡ್ಡು ಬಾಚಿಕೊಳ್ಳಲು ಹಗಲುರಾತ್ರಿ ಪ್ರಯತ್ನಿಸುತ್ತಿದ್ದಾರೆ. ಬಂಡವಾಳವು ಕ್ರಿಕೆಟ್ಟಿನ ಸೂತ್ರಗಳನ್ನು ಕೈನಲ್ಲಿ ಹಿಡಿದು ಆಡಿಸಲಾರಂಭಿಸಿದ ಮೇಲೆ ಇದೆಲ್ಲಾ ಆ ಪ್ರಕ್ರಿಯೆಯ ತಾರ್ಕಿಕ ಅಂತ್ಯವಷ್ಟೇ.

**ಆಟಗಾರರ ಮನೋಭಾವ**

ಈ ಧನ ಬೆಂಬಲದ ರಾಜಕೀಯವು ಕ್ರೀಡಾಪಟುಗಳ ಮೇಲೂ ತನ್ನ ದುಷ್ಪ್ರಭಾವವನ್ನ ಬೀರುತ್ತಿದೆ. ಆಟಗಾರರು ''ಇದು ಸ್ಪರ್ಧಾತ್ಮಕ ಜಗತ್ತು, ಇಲ್ಲಿ ಹೇಗಾದರೂ ಮೇಲೆ

ಬರಬೇಕು'' ಎಂಬ ಬೂರ್ಷ್ವಾ ಸಿದ್ಧಾಂತವನ್ನು ವಿಧೇಯತೆಯಿಂದ ಪಾಲಿಸುತ್ತಾರೆ. ಎದುರಾಳಿಗಳನ್ನು ವ್ಯಾಜ್ಯಕ್ಕೆಳೆದು ಅವರ ಏಕಾಗ್ರತೆಯನ್ನು ಭಂಗಗೊಳಿಸುವ 'ಸ್ಲೆಡ್ಜಿಂಗ್' ಎಂಬ ಕೆಟ್ಟ ಆಚರಣೆಯನ್ನು ಆ ಜನ ಕಲೆಯ ಮಟ್ಟಕ್ಕೇರಿಸಿದ್ದಾರಂತೆ! ಸದಾ ವಿಕೆಟ್‌ನ ಹಿಂದೆ ಕಪ್ಪೆಯಂತೆ ವಟಗುಟ್ಟುತ್ತಾ, ಕಾಲುಕೆರೆದು ಜಗಳ ತೆಗೆಯುವುದು ಶ್ರೇಷ್ಠ ವಿಕೆಟ್ ಕೀಪರ್‌ನ ಲಕ್ಷಣವಂತೆ. ಗಂಗೂಲಿ, ಫ್ಲಿಂಟಾಫ್ ಮುಂತಾದವರು ಮ್ಯಾಚು ಗೆದ್ದರೆ ಸಾಕು ಶರ್ಟ್ ಬಿಚ್ಚಿ ಮೈದಾನದಲ್ಲಿ ಓಡುತ್ತಾರೆ. ಇನ್ನು ಕೆಲವರು ತಮಗೆ ಸಮಾಜದ ಬಗ್ಗೆ ಕಾಳಜಿ ಇದೆ ಎಂದು ತೋರಿಸಲು ಮಾಡುವ ಯತ್ನಗಳು ಸಹ ವಿಶ್ವಸುಂದರಿಯರ ಸಾಮಾಜಿಕ ಕಳಕಳಿಯಂತೆಯೇ ಕಾಣುತ್ತದೆ. ಇನ್ನು ಇವರಲ್ಲಿ ಸಾಧನೆಯನ್ನು ಹೆಚ್ಚಿಸಿಕೊಳ್ಳಲು ಉದ್ದೀಪನ ಮದ್ದು ಸೇವಿಸುವವರೂ ಇದ್ದಾರೆ.

ಈ ಬಾರಿಯ ಒಲಿಂಪಿಕ್ಸ್ ತಂಡದ ಮದ್ದು ತಿಂದ ಮುದ್ದುಮುಖದ ಕ್ರೀಡಾಪಟುಗಳು ಹಲವಾರು ಜನ. ಅದನ್ನು ಗಮನಿಸಿದ ಕೆಲವರು ಇನ್ನೇನು ಭಾರತಕ್ಕೆ ದಂಡಿಯಾಗಿ ಪದಕಗಳು ಬರುವ ಕಾಲ ಹತ್ತಿರವಾಗಿದೆ ಎಂದು ಕುಹಕವಾಡುತ್ತಿದ್ದಾರೆ!

**ವಿಕೃತ ಜಾಹಿರಾತುಗಳು**

ಕ್ರಿಕೆಟ್ ಪ್ರಸರಣದ ಸಂದರ್ಭದಲ್ಲಿ ಬರುವ ಜಾಹಿರಾತುಗಳ ಮಾಯಾಜಾಲದ ಬಗ್ಗೆ ಸಹ ನಾವು ಎಚ್ಚರಿಕೆಯಿಂದಿರಬೇಕು. ಕ್ರಿಕೆಟ್ಟನ್ನು ನೋಡುವವರಲ್ಲಿ ಬಹುದೊಡ್ಡ ವಿಭಾಗ ಯುವ ಜನತೆ. ಅಷ್ಟೇ ದೊಡ್ಡ ಸಂಖ್ಯೆಯಲ್ಲಿ ಕ್ರಿಕೆಟ್ ವೀಕ್ಷಿಸುವವರು ಇನ್ನೂ ವ್ಯಕ್ತಿತ್ವವೇ ರೂಪುಗೊಳ್ಳದ ಎಳೆಯ ವಯಸ್ಸಿನವರು.

ಇವರೆಲ್ಲಾ ಕ್ರಿಕೆಟ್ ನೋಡುವಾಗ ಕೊಳ್ಳುಬಾಕ ಸಂಸ್ಕೃತಿಯ, ಅಮೆರಿಕದ ಕೊಳಕು ಜೀವನಶೈಲಿಯ ಆರಾಧಕರಾಗುತ್ತಿದ್ದಾರೆ. ಇನ್ನೂ ಆತಂಕದ ವಿಷಯವೆಂದರೆ ಈಗ ಜಾಹಿರಾತುಗಳಲ್ಲಿ ಬಹಳಷ್ಟು ಹೆಂಡದ ಕಂಪನಿಗಳದ್ದು, ಅವರು 'ಮಿನರಲ್ ವಾಟರ್'ನ ಹೆಸರಿನಲ್ಲಿ ತಾವು ತಯಾರಿಸಿದ ಹೆಂಡದ ಬ್ರಾಂಡನ್ನು 'ಸರೋಗೇಟ್ ಜಾಹಿರಾತು'ಗಳ ಮೂಲಕ ಜನಪ್ರಿಯಗೊಳಿಸುತ್ತಿದ್ದಾರೆ. ಹಾಗೆಯೇ ಎಳೆಯ ಮನಸ್ಸುಗಳು ಅಶ್ಲೀಲತೆಯ ದಾಳಿಗೆ ಸಿಲುಕುತ್ತಿವೆ. ಹೀಗೆ, ಇದು ನಮ್ಮ ಮುಂದಿನ ತಲೆಮಾರುಗಳನ್ನು ಟಿವಿಗೆ ಅಂಟಿದ ಮೌಲ್ಯಹೀನ, ನಿರ್ವೀರ್ಯ ಕೀಟಗಳನ್ನಾಗಿ ಪರಿವರ್ತಿಸುವುದು ಬೂರ್ಷ್ವಾ ರಾಜಕೀಯ ಹಿತಾಸಕ್ತಿಯಲ್ಲದೆ ಮತ್ತೇನು?

**ರಾಷ್ಟ್ರಾಂಧಾಭಿಮಾನದ ವಾಹಕವಾಗಿ**

ಭಾರತದ ಆಳುವ ವರ್ಗ ಕ್ರೀಡೆಯನ್ನು ಅದರಲ್ಲೂ ಹಾಕಿ ಮತ್ತು ಕ್ರಿಕೆಟ್‌ಗಳನ್ನು ರಾಷ್ಟ್ರೀಯ ಅಂಧಾಭಿಮಾನವನ್ನು ಪೋಷಿಸಲು ಉಪಯೋಗಿಸಿಕೊಳ್ಳುತ್ತಾ ಬಂದಿದೆ. ಪಾಕಿಸ್ತಾನದಲ್ಲಿ ಇರುವ ಕೆಲವು ಪಾತಕಿಗಳಂತೂ ಭಾರತ-ಪಾಕ್ ನಡುವಿನ ಪಂದ್ಯಗಳನ್ನು 'ಜೆಹಾದ್' ಎಂದು ಕರೆದಿದ್ದಾರೆ. ಇದು ಸಂಘಪರಿವಾರ ಮತ್ತು ಶಿವಸೇನೆಯ ನಾಯಕರ ಕಿವಿಗೆ ಮಧುರ ಸಂಗೀತದಂತೆ ಕೇಳಿಸುತ್ತದೆ. ಅವರಿಗೆ ಭಾರತೀಯ ಮುಸ್ಲಿಮರ ವಿರುದ್ಧ ಹಿಂದೂಗಳನ್ನು ಕೆರಳಿಸಲು ಇದು ಸಹಕಾರಿಯಾಗುತ್ತದೆ. ಮೊದಮೊದಲು ಶಿವಸೇನೆಯು ಭಾರತ-ಪಾಕ್ ಪಂದ್ಯಗಳು ಜರುಗುವ ಮೈದಾನಗಳಲ್ಲಿ ಪಿಚ್‌ಗಳನ್ನು ಅಗೆದುಹಾಕಿತು. ಈಗ ಬಿಜೆಪಿ, ''ಹಾಗೆ ಮಾಡುವುದು ಬೇಡ, ಪಂದ್ಯಗಳನ್ನು ನಡೆಸುವುದರಿಂದಲೇ ನಮ್ಮ ರಾಜಕೀಯಕ್ಕೆ ಲಾಭವಿದೆ'' ಎಂದು ತನ್ನ ಮಿತ್ರಪಕ್ಷದ ಮನ ಒಲಿಸಿದಂತಿದೆ.

ಕಳೆದಬಾರಿ ಭಾರತ ಅನಿರೀಕ್ಷಿತವಾಗಿ ಆಸ್ಟ್ರೇಲಿಯಾದ ಮೇಲೆ ಅವರ ದೇಶದಲ್ಲೇ ಚೆನ್ನಾಗಿ ಆಡಿದ ಮೇಲೆ ಕ್ರಿಕೆಟ್ ಪ್ರಿಯರಲ್ಲಿ ಒಂದು ಬಗೆಯ ಆನಂದ ಲಹರಿ ಆರಂಭವಾಯಿತು. ಆಗಲೇ ಲಾಲ್ ಕೃಷ್ಣ ಆಡ್ವಾನಿಯವರ 'ಫೀಲ್ ಗುಡ್' ಪ್ರಚಾರ ತಂತ್ರವೂ ಆರಂಭವಾಯಿತು. ಚುನಾವಣೆಗೆ ಕೆಲವೇ ದಿನಗಳ ಮುಂಚೆ ಮುಗಿದ ಭಾರತ-ಪಾಕ್ ಸರಣಿಯಲ್ಲಿ ಭಾರತ 'ಪ್ರಚಂಡ' 'ರೋಮಾಂಚಕಾರಿ' ವಿಜಯವನ್ನು ಸಾಧಿಸಿತು. ಇವೆಲ್ಲಾ ಬಿಜೆಪಿಗೆ ಚುನಾವಣೆಯಲ್ಲಿ ವಿಜಯವನ್ನು ಖಾತ್ರಿ ಪಡಿಸಲಿಲ್ಲವೆಂಬುದೇನೋ ನಿಜ, ಆದರೆ ಆ ಸಂದರ್ಭದಲ್ಲಿ ಕ್ರಿಕೆಟ್ಟನ್ನು ರಾಜಕೀಯ ದಾಳವನ್ನಾಗಿ ಉಪಯೋಗಿಸಿಕೊಳ್ಳಬೇಕೆಂಬ ಹುನ್ನಾರ ನಡೆಯಿತೆಂಬುದು ಸಹ ಕಡೆಗಣಿಸಲಾಗದ ಸತ್ಯ.

ಫುಟ್‌ಬಾಲ್, ಬ್ಯಾಸ್ಕೆಟ್‌ಬಾಲ್ ಕ್ರೀಡೆಗಳನ್ನು ಹೇಗೆ ರಾಷ್ಟ್ರಾಂಧಾಭಿಮಾನಕ್ಕೆ ಪೂರಕವಾಗಿ ಬೆಳೆಸಿಕೊಳ್ಳಬಹುದು ಎಂಬುದನ್ನು ಯುರೋಪ್, ಲ್ಯಾಟಿನ್ ಅಮೆರಿಕಾ ಹಾಗೂ ಸಂಯುಕ್ತ ಸಂಸ್ಥಾನಗಳಲ್ಲಿ ವಿವಿಧ ಸರ್ಕಾರಗಳು ಚೆನ್ನಾಗಿಯೇ ಪ್ರದರ್ಶಿಸಿವೆ.

**ಕ್ರೀಡೆ ಹಾಗೂ ಸಮಾಜವಾದ**

ಹಿಂದಿನ ಸಮಾಜವಾದಿ ರಾಷ್ಟ್ರಗಳು ಹಾಗೂ ಇಂದಿನ ಕ್ಯೂಬಾದಂಥ ಪುಟ್ಟ ರಾಷ್ಟ್ರ ಕ್ರೀಡೆಯನ್ನು ಎಷ್ಟು ಆರೋಗ್ಯಕರವಾಗಿ ಅಭಿವೃದ್ಧಿಪಡಿಸಿವೆ ಎಂಬ ಅಂಶವು ಯಾವುದೇ ಪೂರ್ವಗ್ರಹವಿಲ್ಲದೆ ಯೋಚಿಸಬಲ್ಲ ವ್ಯಕ್ತಿಗೆ ಮನದಟ್ಟಾಗುತ್ತದೆ. ರೋಗಿಷ್ಠ ರಾಷ್ಟ್ರಗಳಾಗಿದ್ದ ಇವು ಹೇಗೆ ತಮ್ಮ ಜನತೆಯನ್ನು ಸಾಂಸ್ಕೃತಿಕವಾಗಿ ಶರವೇಗದಲ್ಲಿ ಮುಂದೆ ನಡೆಸಿದವು ಎಂಬುದನ್ನು ಇತಿಹಾಸ ದಾಖಲಿಸಿದೆ.

ಈ ಬಾರಿಯ ಒಲಿಂಪಿಕ್ಸ್‌ನಲ್ಲಿನ ಪದಕ ಪಟ್ಟಿಗಳನ್ನು ಗಮನಿಸಿದರೆ ಕೆಲವು ಗಮನಾರ್ಹ ಅಂಶಗಳು ಕಣ್ಣಿಗೆ ಹೊಡೆಯುತ್ತವೆ. ಪ್ರಥಮ ಸ್ಥಾನದಲ್ಲಿರುವ ಅಮೆರಿಕಾ ಗಳಿಸಿರುವ ಚಿನ್ನದ ಪದಕಗಳು ೩೪ ಆದರೆ ಚೀನಾ ಹಾಗೂ ರಷ್ಯಾ ಅನುಕ್ರಮವಾಗಿ ೩೧ ಮತ್ತು ೨೭ ಚಿನ್ನದ ಪದಕಗಳನ್ನು ಗಳಿಸಿವೆ. ಇನ್ನು ಬೆಳ್ಳಿ ಹಾಗೂ ಕಂಚನ್ನು ಸೇರಿಸಿದರೆ – ಎಲ್ಲವನ್ನು ಸೇರಿಸಿ ನೋಡಿದರೆ ಒಂದು ದೇಶದ ಸಾಧನೆಯ ಚಿತ್ರಣ ಸಮಗ್ರವಾಗಿ ಇರುತ್ತದೆ ಎಂಬುದು ನಮ್ಮ ಅಭಿಮತ – ಅಮೆರಿಕಾ, ಚೀನಾ ಹಾಗೂ ರಷ್ಯಾದ ಸಾಧನೆ ಅನುಕ್ರಮವಾಗಿ ೧೦೦, ೬೨ ಹಾಗೂ ೮೪ ಪದಕಗಳಾಗಿರುತ್ತವೆ. ಹಾಗೇ ಹಳೆಯ ಸೋವಿಯತ್ ಒಕ್ಕೂಟದಲ್ಲಿದ್ದ ಎಲ್ಲಾ ದೇಶಗಳ ಒಟ್ಟಾರೆ ಸಾಧನೆ ೪೦ ಚಿನ್ನ, ೪೬ ಬೆಳ್ಳಿ, ೭೧ ಕಂಚು, ಒಟ್ಟು೧೫೭ ಆಗುತ್ತವೆ!

ಇದನ್ನು ಗಮನಿಸಿಯೇ ಟೈಂಸ್ ಆಫ್ ಇಂಡಿಯಾ ದೈನಿಕವು ಒಲಿಂಪಿಕ್ಸ್ ಮುಗಿಯುತ್ತಿದ್ದಂತೆ, ಸಂಪಾದಕೀಯದ ಕೆಳಗೆ ಒಂದು ಟಿಪ್ಪಣಿಯನ್ನು ಪ್ರಕಟಿಸಿತು. ಟಿಪ್ಪಣಿ ಭೂತಪೂರ್ವ ಹಾಗೂ ಇಂದಿನ ಸಮಾಜವಾದಿ ರಾಷ್ಟ್ರಗಳು ಏಕೆ ಕ್ರೀಡೆಯಲ್ಲಿ ಇನ್ನೂ ಮುಂದಿವೆ ಎಂಬ ಪ್ರಶ್ನೆಯನ್ನು ಮುಂದಿಟ್ಟಿದೆ. ಪಾಶ್ಚಾತ್ಯ ರಾಷ್ಟ್ರಗಳು ದೂಷಿಸುವಂತೆ ಅವರು ಉದ್ದೀಪನ ಮದ್ದಿನ ಸೇವನೆಯಿಂದಾಗಿ ಮುಂದಿದ್ದಾರೆಯೇ? ಅಥವಾ ಅವರನ್ನು ಕಠಿಣ ಸಿದ್ಧತೆಗೆ ಒಳಪಡಿಸಿ ಪದಕ ಉತ್ಪಾದಿಸುವ ಯಂತ್ರಗಳನ್ನಾಗಿ ಮಾಡಲಾಗಿದೆಯೇ? ಬಹಳ ವಿನೋದಮಯವಾಗಿ ಆ ಟಿಪ್ಪಣಿ ಈ ಪ್ರಶ್ನೆಗಳಿಗೆ ಉತ್ತರಿಸಿತು ಸಹ: ನಿಜಕ್ಕೂ ಅಮೆರಿಕಾ ಕಂಡುಹಿಡಿಯಲಾಗದಂಥ, ಯಾವ ತನಿಖೆಯಲ್ಲೂ ಸಿಕ್ಕುಬೀಳದ ಔಷಧಿಗಳನ್ನು ಅವರು ಕಂಡುಹಿಡಿದಿದ್ದರೆ, ಅದಕ್ಕಾಗಿಯೇ ಅವರಿಗೆ ಪದಕ ನೀಡಬೇಕು! ಮತ್ತು ಬೂರ್ಷ್ವಾ ಜನತಂತ್ರಕ್ಕೆ ಮರಳಿದ ೧೩ ವರ್ಷಗಳ ನಂತರ ಸಹ ಅವರು ಹಾಗೆಯೇ ಪದಕ ಗಳಿಸುತ್ತಿದ್ದಾರೆಂದರೆ ಅವರ ಯಶಸ್ಸಿನ ಹಿಂದೆ 'ಯಾಂತ್ರಿಕ ತರಬೇತಿ'ಯ ಕಾರಣವಿರುವುದು ಸಹ ಸಾಧ್ಯವಿಲ್ಲ!

ನಂತರ ಆ ಲೇಖನ ಹೇಳಿದ್ದು – ಸಮಾಜವಾದ ಏಕೆ ಕ್ರೀಡೆಯಲ್ಲಿ ಯಶಸ್ಸು ಗಳಿಸಿತೆಂದರೆ ಅದಕ್ಕೆ ಆ ವ್ಯವಸ್ಥೆ ನೀಡಿದ ಮಹತ್ವ, ತರಬೇತಿಯಲ್ಲಿ ವೈಜ್ಞಾನಿಕ ವಿಧಾನಗಳ ಉಪಯೋಗ, ಹೊಲಸು ಸ್ವಜನಪಕ್ಷಪಾತ – ಪ್ರಾದೇಶಿಕತಾವಾದಿ ಮನೋಭಾವ ಇವುಗಳನ್ನು ತೊಡೆದುಹಾಕಿದ್ದು, ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ವಿಶಾಲ ಜನಸ್ತೋಮ ಇಡಿಯಾಗಿ ಕ್ರೀಡೆಯಲ್ಲಿ ಭಾಗವಹಿಸಿದ್ದು. ಅಲ್ಲಿ ಕ್ರೀಡೆ ಉಳ್ಳವರ ಸ್ವತ್ತಾಗಲಿಲ್ಲ, ಲಾಭಬಡುಕರ ಉದ್ಯಮವಾಗಲಿಲ್ಲ.

ಹೀಗೆ ಕ್ರೀಡೆ ಎಲ್ಲರಿಗೂ ತಲುಪುವ ಸೌಲಭ್ಯವಾಗುವ ದಿನಗಳು ಮತ್ತೆ ಬರಲಿ ಎಂದು ಆಶಿಸಬಹುದಾಗಿದೆ. ನಾವು ನಿರಾಶರಾಗಬೇಕಾದ ಅಗತ್ಯವೇನೂ ಇಲ್ಲ. ಮೂವತ್ತು ಬಾರಿ ಪೋಲ್‌ವಾಲ್ಟ್‌ನಲ್ಲಿ ತನ್ನ ವಿಶ್ವದಾಖಲೆಯನ್ನು ತಾನೇ ಮುರಿದ ಸರ್ಜಿ ಬುಬ್ಕಾ, ಸದ್ವರ್ತನೆ ಹಾಗೂ ಸಾಮಾಜಿಕ ಬದ್ಧತೆಗೆ ಮಾದರಿಯಾದ ಶ್ರೇಷ್ಠ ಚೆಸ್ ಆಟಗಾರ ಅನಾಟೊಲಿ ಕಾರ್ಪೊವ್, ನಮ್ಮ ಯುವಜನತೆ, ಆರಿಸಿಕೊಳ್ಳಬೇಕಾದ ಮಾದರಿ ವ್ಯಕ್ತಿಗಳು. ಹಾಗೆಯೇ ಒಲಿಂಪಿಕ್ಸ್‌ನಲ್ಲಿ ೩ ಬಾರಿ ಸೂಪರ್ ಹೆವಿವೈಟ್ ಚಾಂಪಿಯನ್ ಆಗಿದ್ದೂ ವೃತ್ತಿನಿರತ ಕ್ರೀಡಾಪಟುವಾಗಿ ಮಿಲಿಯಾಂತರ ಡಾಲರ್ ಹಣ ಗಳಿಸುವ ಅವಕಾಶವನ್ನು ತಿರಸ್ಕರಿಸಿದ ಕ್ಯೂಬಾದ ಬಾಕ್ಸರ್ ಥಿಯೊಫಿಲೊ ಸ್ಟೀವನ್‌ಸನ್ ಮತ್ತು ಸೇವನ್‌ರಂಥವರು ಮತ್ತೆ ಎಲ್ಲೆಡೆ ಮೂಡಿಬರಬೇಕಿದೆ.

ಅಲ್ಲಿಯವರೆಗೂ ನಾವು ಪ್ರಗತಿಶೀಲರು ಮಾಡಬೇಕಾದ ಕೆಲಸಗಳು ಸಹ ಸಾಕಷ್ಟಿವೆ. ನಮ್ಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗರಡಿಮನೆಗಳು, ಫುಟ್‌ಬಾಲ್ ಕ್ಲಬ್‌ಗಳು ಅಸಂಖ್ಯಾತ ಧೀರ ಕ್ರಾಂತಿಕಾರಿಗಳಿಗೆ ಜನ್ಮಕೊಟ್ಟವು. ಆ ಜಾಗಗಳೇನೂ ಬಜರಂಗದಳದ ಹಿತ್ತಲಾಗಬೇಕಿಲ್ಲ. ಉನ್ನತ ಧ್ಯೇಯ, ಪ್ರಜ್ಞೆ ಹಾಗೂ ಬದ್ಧತೆಯೊಂದಿಗೆ ಹೆಚ್ಚು ಕ್ರೀಡಾ ಚಟುವಟಿಕೆಗಳನ್ನು ನಾವು ಬೆಳೆಸಬೇಕು. ನೀರಸ, ಯಾಂತ್ರಿಕ, ವಿಕೃತ ಜೀವನಶೈಲಿಯಿಂದ ಯುವಜನತೆಯನ್ನು ಹೊರಗೆಳೆದುತರಬೇಕು.

**ಡಾ|| ಬಿ. ಆರ್. ಮಂಜುನಾಥ್**
ಎಸ್. ಯು.ಸಿ.ಐ. ೩೧, ೩ನೇ ಅಡ್ಡರಸ್ತೆ, ಮಲ್ಲೇಶ್ವರ
ಬೆಂಗಳೂರು – ೫೬೦ ೦೦೩



**ಯುಗದರಿವು** (ಲೇಖನಗಳು)

ಜಿ. ರಾಮಕೃಷ್ಣ

**ಪುಟ : ೧೩೬** **ಬೆಲೆ : ರೂ. ೧೦೦**

**ಸಿ. ವಿ. ಜಿ. ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವಯಾಲಿಕಾವಲ್ ಬೆಂಗಳೂರು - ೫೬೦ ೦೦೩

ಕುವೆಂಪು ಅವರ ಜನ್ಮ ಶತಾಬ್ದಿಯ ಸಂದರ್ಭದಲ್ಲಿ ಹೊರಬಂದ ಪುಸ್ತಕಗಳ ಒಂದು ನೂರು ಕೃತಿಗಳಲ್ಲಿ ಈ ಪುಸ್ತಕವೂ ಒಂದು. ಯಾವ ಮೂಢನಂಬಿಕೆಯ, ಮತಾಂಧತೆಯ, ವಿರುದ್ಧ ಕುವೆಂಪು ಸಮರ ಸಾರಿದ್ದರೋ ಆ ದಿಶೆಯಲ್ಲೇ ಇಲ್ಲಿನ ಲೇಖನಗಳೂ ಚಿಂತಿಸುತ್ತವೆ. ಕ್ರಾಂತಿಕಾರಿ ಮನೋಭಾವನೆಯುಳ್ಳ ಒಂದು ಗುಣಾತ್ಮಕ ಬದಲಾವಣೆ ಬಯಸುವ ಎಲ್ಲರಿಗೂ ಇವು ತುಂಬ ರುಚಿಸುತ್ತವೆ. ಇಂದಿನ ಭಯೋತ್ಪಾದಕತೆ, ಧರ್ಮಾಂಧತೆಯ ಉಸಿರುಕಟ್ಟುವ ವಾತಾವರಣದಲ್ಲಿ ಅದಕ್ಕೆ ಕಾರಣವಾಗುವ ಕೆಲವು ಅಂಶಗಳನ್ನು ಸತ್ಯಗಳನ್ನು ಜನರಿಗೆ ಮನವರಿಕೆ ಮಾಡಿಕೊಡುತ್ತವೆ. ಚರಿತ್ರೆಯ ಜಗತ್ತಿನ ವಿದ್ಯಮಾನಗಳನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವ ನಮ್ಮ ನಡುವಿನ ಹಿರಿಯ ಚಿಂತಕರಾದ ಡಾ|| ಜಿ. ಆರ್. ಅವರ ಅರ್ಥಪೂರ್ಣ ಬರಹಗಳಿವು.

**ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು**

ಡಾ|| ಭೂಮಿ ಗೌಡ

**ಪುಟ : ೪೫೮** **ಬೆಲೆ : ರೂ. ೩೫೦**

**ಚೇತನ ಬುಕ್ ಹೌಸ್**, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು - ೫೭೦೦೦೨

ದಲಿತರ ಸಮಸ್ಯೆಗಳಿಗೆ ಹಲವಾರು ಕಾರಣಗಳಿದ್ದರೂ ಶತಮಾನಗಳಿಂದ ಹೇರಲ್ಪಟ್ಟ ಸ್ವಾರ್ಥಮೂಲದ ಕರ್ಮ ಸಿದ್ಧಾಂತದ ನಂಬುಗೆಯೇ ಬಲವಾದ ಕಾರಣಗಳಲ್ಲೊಂದು. ಇತ್ತೀಚಿನವರೆಗೂ ಕನ್ನಡ ಕಾದಂಬರಿಗಳಲ್ಲಿ ಅನಾವರಣಗೊಂಡ ದಲಿತರ ಬದುಕಿನ ವಾಸ್ತವತೆ ಏಕಸೂತ್ರ ಬಂಧಿತ ಚಿತ್ರಣವಾಗಿದ್ದು ಅಲ್ಲಿ ದಲಿತ ಪಾತ್ರಗಳಿಗೆ ಪ್ರಾಧಾನ್ಯತೆಯೆಂಬುದಿರಲಿಲ್ಲ ಅದು ದಲಿತರ ಬದುಕಿನ ಜೀವಂತ ದರ್ಶನವಾಗಿತ್ತು. ಮೂಕ ಪ್ರತಿಭಟನೆಯಲ್ಲೇ ತೃಪ್ತಿ ಕಂಡವರು ಮುಂದೆ ಮಾರ್ಕ್ಸ್-ಲೋಹಿಯಾ-ಅಂಬೇಡ್ಕರ್ ವಿಚಾರಧಾರೆಗಳಿಂದ ಒಮ್ಮೆಲೇ ಪ್ರಭಾವಿತರಾಗಿ ಬಂಡಾಯ ಸಾಹಿತ್ಯದ ಮೂಲಕ ತಮ್ಮ ಇರುವಿಕೆಯನ್ನು ಗುರುತಿಸತೊಡಗಿದರು. ಇಂಥ ಕಾಲಘಟ್ಟದ ಎರಡೂ ಬಗೆಯ ಕನ್ನಡ ಕಾದಂಬರಿಗಳನ್ನು ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ದಲಿತರ ಬದುಕಿನ ಸಮಗ್ರ ಚಿತ್ರಣವನ್ನೇ ಲೇಖಕರು ನಮ್ಮ ಮುಂದಿರಿಸಿದ್ದಾರೆ. ಸಮಾಜದ ಮೌಲ್ಯಗಳೇ ಸಾಹಿತ್ಯದಲ್ಲಿ ಪ್ರತಿಫಲಿಸುವ ಸತ್ಯವನ್ನು ಈ ಸಂಶೋಧನೆ ನಮಗೆ ತಿಳಿಸುತ್ತದೆ.

**ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ - ಒಂದು ಶತಮಾನ**

ಪ್ರೊ|| ಲಕ್ಷ್ಮಣ್ ತೆಲಗಾವಿ

**ಪುಟ : ೧೧೬** **ಬೆಲೆ : ರೂ. ೫೦**

**ವಾಲ್ಮೀಕಿ ಸಾಹಿತ್ಯ ಸಂಪದ**, ಹರ್ತಿಕೋಟೆ - ೫೭೭ ೫೪೫

ಚಿತ್ರದುರ್ಗ ಜಿಲ್ಲೆಯು ಐತಿಹಾಸಿಕವಾಗಿ ಬಹಳ ಮಹತ್ವದ ಸ್ಥಳವೆಂದು ಗುರುತಿಸಲಾಗಿದೆ. ಅನೇಕ ಕಾದಂಬರಿಕಾರರು ಸಾಹಿತಿ ಲೇಖಕರು ತಮ್ಮ ಕೃತಿಗಳಿಗೆ ಪರಿಸರದ ಹಿನ್ನೆಲೆಯಾಗಿ ಈ ಸ್ಥಳವನ್ನು ಆಯ್ದುಕೊಂಡಿದ್ದಾರೆ. ಚಾರಿತ್ರಿಕವಾಗಿ ಸ್ಮಾರಕ ಶಾಸನಗಳ ಆಧಾರದಿಂದ ಪ್ರಸಿದ್ಧವಾದ ಈ ಪ್ರಾದೇಶಿಕ ವಿವರಗಳನ್ನು ಕಲೆ-ಸಾಹಿತ್ಯ -ಸಂಸ್ಕೃತಿ ಮತ್ತು ಜನಜೀವನದ ಆಧಾರಗಳ ಮೇಲೆ ಸಂಶೋಧನೆ ನಡೆಸಿ ರೂಪಿಸಿದ ಈ ಪುಸ್ತಕವು ಜಿಲ್ಲೆಯ ಬಗ್ಗೆ ಹೆಚ್ಚಿನ ವಿವರಗಳನ್ನು ತಿಳಿಸಲು ಸಮರ್ಥವಾಗಿದೆ. ಸ್ಥಳೀಯ ಆಚರಣೆಗಳು ಮತ್ತು ಜಾನಪದೀಯ ಅಧ್ಯಯನದ ಮೂಲಕವೂ ಈ ಜಿಲ್ಲೆ ಶ್ರೀಮಂತವಾಗಿದೆ. ದುರ್ಗದ ಚಾರಿತ್ರಿಕ ಘಟನೆಗಳನ್ನಾಧರಿಸಿ ತೆಗೆಯಲಾದ ಚಲನ ಚಿತ್ರಗಳ ಯಶಸ್ಸು ಹಾಗೂ ಇನ್ನಿತರ ತಾಲೂಕು ಮಟ್ಟದ ಚಾರಿತ್ರಿಕ ದಾಖಲೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಸುಮಾರು ಒಂದು ಶತಮಾನ ಕಾಲದ ವಿವರಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿದ್ದು ಚಿತ್ರದುರ್ಗದ ಬಗ್ಗೆ ಅಮೂಲ್ಯ ಮಾಹಿತಿಯನ್ನೊದಗಿಸುವ ಆಕರವಾಗಿದೆ.



**ಕುವೆಂಪು ದರ್ಶನ ಸಂದರ್ಶನ**

ಜಿ. ಟಿ. ನಾರಾಯಣರಾವ್

**ಪುಟ : ೧೫೨** **ಬೆಲೆ : ರೂ. ೪೫**

**ಅತ್ರಿ ಬುಕ್ ಸೆಂಟರ್**, ೪, ಶರಾವತಿ ಕಟ್ಟಡ, ಬಲ್ಮಠ ಮಂಗಳೂರು - ೫೭೫ ೦೦೧

ಕುವೆಂಪು ಕಳೆದ ಶತಮಾನದ ಧೀಮಂತ ವ್ಯಕ್ತಿತ್ವದ ಮಹಾಕವಿ ಎಂದು ಪ್ರಸಿದ್ಧರಾಗಿದ್ದಾರೆ. ಅವರಿಂದ ನೇರ ಅಥವಾ ಪರೋಕ್ಷ ಪ್ರಭಾವಿತರಾಗದ ವ್ಯಕ್ತಿಗಳೇ ಬಹಳ ವಿರಳವೆನ್ನಬಹುದು. ಪ್ರಜ್ವಲ ವೈಚಾರಿಕ ನಿಲುವನ್ನು ಹಾಗೂ ಅಷ್ಟೇ ಕನ್ನಡ ಪ್ರೇಮವನ್ನು ಬಾಳಿನುದ್ದಕ್ಕೂ ಅಳವಡಿಸಿ ತಮ್ಮ ಸಾಹಿತ್ಯದ ಮೂಲಕ ಕನ್ನಡ ಸೇವೆಗೈದು ಕರ್ನಾಟಕದಾದ್ಯಂತ ಪ್ರಜೆಯಿಂದ ಪ್ರಭುವಿನ ತನಕ ಎಲ್ಲರ ಮನಸೂರೆಗೊಂಡಿದ್ದಾರೆ. ಇಂಥ ಮೇರು ಪ್ರತಿಭೆಯಿಂದ ಆಕರ್ಷಿಸಲ್ಪಟ್ಟು ಬಾಲ್ಯದಿಂದಲೇ ಅದು ಹೇಗೋ ಕುವೆಂಪು ವ್ಯಕ್ತಿತ್ವದ ಅಗೋಚರ ಸೆಳೆತಕ್ಕೆ ಸಿಕ್ಕಿದ ಖಗೋಳ ಗಣಿತ ವಿಜ್ಞಾನ ಲೇಖಕ ಶ್ರೀ ಜಿ. ಟಿ. ನಾರಾಯಣರಾವ್ ತುಂಬ ಸೊಗಸಾಗಿ ಕುವೆಂಪು ಅವರನ್ನು ಪರಿಚಯಿಸಿದ್ದಾರೆ. ಈ ಇಬ್ಬರು ಮಹನೀಯರ ನಡುವಿನ ಭೌತಿಕ ವಾಸ್ತವಾಂಶಗಳ ಬಗ್ಗೆ ಚರ್ಚೆ ಮತ್ತು "ರಾಮಾಯಣ ದರ್ಶನಂ" ಕೃತಿಯಲ್ಲಿನ ವೈಜ್ಞಾನಿಕ ಅಂಶಗಳಲ್ಲಿನ ವಿವರಣೆ ಅತ್ಯಂತ ಮನೋಜ್ಞವಾಗಿ ಮೂಡಿದೆ.



**ಹಿಂದಣ ಹೆಜ್ಜೆಯ ನೋಡಿ...** (ಲೇಖನಗಳು)

ಡಾ|| ಗುಂಡಣ್ಣ ಕಲಬುರ್ಗಿ

**ಪುಟ : ೧೪೦** **ಬೆಲೆ : ರೂ. ೧೨೦**

**ಸೌಜನ್ಯ ಪ್ರಕಾಶನ**, "ಸೃಷ್ಟಿ", ಈರಣ್ಣ ನಗರ, ಮೂಡಲಗಿ - ೫೯೧ ೩೧೨

ಕನ್ನಡ ಭಾಷೆಯಲ್ಲಿ ಅಸಂಖ್ಯಾತ ಕವಿಸಾಹಿತಿಗಳು ಸೃಷ್ಟಿಸಿದ ಸಾಹಿತ್ಯ ಸಂಪದವಿದೆ. ಹಿಂದಿನಿಂದಲೂ ಅಂದಂದಿನ ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಸಮಾಜದ ಒಟ್ಟೂ ಆಶಯಗಳಿಗೆ ಸ್ಪಂದಿಸುತ್ತಲೇ ಸಾಹಿತ್ಯ ರಚನೆಯಾಗಿದೆ. ಸಹಜವಾಗಿ ಅಲ್ಲಿ ವಿಭಿನ್ನ ದೃಷ್ಟಿಕೋನಗಳು ಒಡಮೂಡಿವೆ. ಹಿಂದಿನ ಒಟ್ಟು ಸಾಹಿತ್ಯದ ನೆಲೆ-ಬೆಲೆಯೇನು ? ಅವು ಇಂದಿನ ದೃಷ್ಟಿಯಲ್ಲಿ ನಗಣ್ಯ ಮತ್ತು ಅಪ್ರಸ್ತುತವೆಂದು ತಳ್ಳಿಹಾಕಲು ಸಾಧ್ಯವೆ? ಸಾವಿರಾರು ವರ್ಷಗಳಿಂದ ಹೂ ಚಿಗುರು ಕಾಯಿ ಬಿಡುತ್ತಿದ್ದ ಮರವು ಹೊಂದಿರುವುದು ಅವೇ ಬೇರುಗಳನ್ನಲ್ಲವೆ? ಇಂಥ ಹುಡುಕಾಟ ಈ ಲೇಖನಗಳ ಉದ್ದೇಶ. ಸಾಹಿತ್ಯ ರಚನೆಯೊಂದು ನಿತ್ಯನೂತನ ಕ್ರಿಯೆ ಎಂಬ ಆಧಾರ ಆಶಯಗಳನ್ನು ಇಲ್ಲಿ ಮನಗಾಣಿಸಲಾಗಿದೆ. ಹಿಂದಿನ ಹೆಜ್ಜೆಗಳನ್ನು ಗುರುತಿಸುತ್ತಲೇ ಜಾಗ್ರತೆಯಾಗಿ ಮುಂದಿನ ಹೆಜ್ಜೆಗಳನ್ನಿಡಬೇಕಾದ ಅಗತ್ಯವನ್ನು ಸಾಹಿತ್ಯ ಸಂಸ್ಕೃತಿ ವಕ್ತಾರರು ಗಮನಿಸಬೇಕಾಗಿದೆ. ಕೆಲವೊಂದು ಪದ್ಯಗಳ ತುಣುಕುಗಳನ್ನು ವಿಶ್ಲೇಷಿಸಲಾಗಿದೆ.

**ಆಯ್ದ ಸಣ್ಣ ಕತೆಗಳು**

ಸಂ : ಡಾ|| ನಾಗಾಬಾಯಿ ಬುಳ್ಳಾ

ಶ್ರೀಮತಿ ಗೀತಾ ನಾಗಭೂಷಣ

**ಪುಟ : ೧೬೪** **ಬೆಲೆ : ರೂ . ೫೦**

**ನಿರ್ದೇಶಕರು, ಪ್ರಸಾರಾಂಗ**

ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ



ಕಳೆದ ಶತಮಾನದಲ್ಲಿ ಬದುಕಿನ ಎಲ್ಲ ಮಜಲುಗಳನ್ನು ಅನಾವರಣಗೊಳಿಸುವಂಥ ವೈವಿಧ್ಯಮಯ ಕಥಾಸಾಹಿತ್ಯವು ಸಮೃದ್ಧವಾಗಿ ವಿವಿಧ ಲೇಖಕರಿಂದ ಮೂಡಿಬಂದಿದೆ. ಉತ್ತಮ ಕಥೆಗಾರರೆಂದು ಚಿತ್ತಾಲ, ನಿರಂಜನ, ಅನಂತಮೂರ್ತಿ, ಕುಂವೀ ಇವರೆಲ್ಲ ಓದುಗರ ಮನಸ್ಸಿನಲ್ಲಿ ಶಾಶ್ವತವಾದ ಸ್ಥಾನ ಪಡೆದು ಮರೆಯಲಾಗದಂಥ ಭಾವನಾತ್ಮಕ ಸಂಬಂಧವನ್ನು ಸ್ಥಾಪಿಸಿದ್ದಾರೆ. ಈಗ ಒಂದು ತಲೆಮಾರಿನ ಜನಜೀವನದಲ್ಲಿ ಸಾಕಷ್ಟು ಪರಿವರ್ತನೆಯೂ ಆಗಿದೆ. ಕಥೆಗಳ ಮೂಲಕ ಕಥೆಗಾರರು ನೀಡಿದ ಮೂಲಸಂದೇಶಕ್ಕೆ ಪ್ರಗತಿಪರ ಆಶಯಕ್ಕೆ ಪರೋಕ್ಷವಾಗಿ ಸಿಕ್ಕ ಬೆಲೆಯೋ ಎಂಬಂತೆ ಅನೇಕ ಬದಲಾವಣೆಗಳಾಗಿವೆ. ಸಹಜತೆ ಮತ್ತು ವಾಸ್ತವತೆಗೆ ತೀರ ಹತ್ತಿರವಿರುವ ಕೆಲವೊಂದು ಕಥೆಗಳನ್ನು ಇಲ್ಲಿ ಓದಬಹುದು.

ಇಂದಿರಾಕುಮಾರಿ

# ಈಜಿಪ್ಟ್‌ಗೆ ನೊಬೆಲ್ ಕಿರೀಟ ತೊಡಿಸಿದ



# ನಾಗ್ವಿಬ್ ಮಹಫೌಜ್

ಅರೆಬಿಕ್ ಸಾಹಿತ್ಯ ಲೋಕದಲ್ಲಿ ಕಾದಂಬರಿ ಎಂಬುದು ೨೦ನೇ ಶತಮಾನದಲ್ಲಿ ರೂಪ ಪಡೆದ ಒಂದು ಪ್ರಕಾರ. ಅದು ಹೆಚ್ಚು ಕಡಿಮೆ ನಾಗ್ವಿಬ್ ಅವರ ಸಮಕಾಲೀನವಾದುದು. ಅದಕ್ಕೆ ಒಂದು ಸ್ವರೂಪ ಹಾಗೂ ಸತ್ವವನ್ನು ತಂದುಕೊಟ್ಟ ಕೀರ್ತಿ ನಾಗ್ವಿಬ್ ಅವರಿಗೆ ಸಲ್ಲುತ್ತದೆ.

●

ಜ. ಹೊ. ನಾರಾಯಣಸ್ವಾಮಿ

೧೯೮೮ನೇ ಸಾಲಿನ ನೊಬೆಲ್ ಪ್ರಶಸ್ತಿಯನ್ನು ಗಳಿಸಿದ ನಾಗ್ವಿಬ್ ಈಜಿಪ್ಟ್‌ನ ಕೈರೋದ ಗಮಾಲಿಯಾದಲ್ಲಿ ೧೧-೧೨-೧೯೧೧ರಂದು ಜನಿಸಿದರು. ಅವರು ಹುಟ್ಟಿದ ಹಿಂದಿನ ದಿನ ಅಂದರೆ ೧೦-೧೨-೧೯೧೧ರಂದು ಬೆಲ್ಜಿಯಂನ ಮಾರೀಸ್ ಮೇತರ್‌ಲಿಂಕ್ ಅವರಿಗೆ ೧೯೧೧ನೇ ಸಾಲಿನ ನೊಬೆಲ್ ಪ್ರಶಸ್ತಿಯನ್ನು ಪ್ರದಾನಮಾಡಲಾಗಿತ್ತು.

ನಾಗ್ವಿಬ್ ಮೂರನೇ ಜಗತ್ತಿನಲ್ಲಿ ಮೂಡಿಬಂದ ಶ್ರೇಷ್ಠ ಸಂವೇದನಾಶೀಲ ಬರಹಗಾರರು. ಅವರ ಕರುಳು ತುಡಿದು ಮಿಡಿಯುವುದು ಮಾನವೀಯ ಮೌಲ್ಯಗಳಿಗಾಗಿ. ಕಾದಂಬರಿ, ಸಣ್ಣಕಥೆ ಹಾಗೂ ನಾಟಕ ಹೀಗೆ ಸಾಹಿತ್ಯದ ಯಾವ ಪ್ರಕಾರವೇ ಆಗಿರಲಿ ಅವು ಓದುಗನ ಹೃದಯದಲ್ಲಿ ಅನುಕಂಪದ ಅಲೆಯನ್ನೇಳಿಸುತ್ತವೆ. ಅರೆಬಿಕ್ ಭಾಷೆಯಲ್ಲಿ ಬರೆದ ಇವರ ಸಾಹಿತ್ಯವನ್ನ ಜಾನ್ ರೆನ್‌ಬೆಕ್ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

''ಗತಕಾಲದ ನಾಯಕರು ತಮ್ಮ ದೇಶದ ಒಳಿತಿಗಾಗಿ ಉಳಿದ ರಾಷ್ಟ್ರಗಳನ್ನು ಶೋಷಣೆಗೆ ಒಳಪಡಿಸಿದ್ದಾರೆ. ಮೌಲ್ಯಗಳಿಗೆ ಅವರು ಎಂದೂ ಗೌರವ ಕೊಟ್ಟಿಲ್ಲ. ಅವರು ಗೌರವ ತೋರಿದ್ದರೆ ಅದು ಅವರ ಶ್ರೇಷ್ಠತೆ ಹಾಗೂ ವೈಭವಕ್ಕೆ ಮಾತ್ರ. ಇದರಿಂದಾಗಿ, ಅನೇಕ ಆದರ್ಶಗಳು, ನೈತಿಕ ಮೌಲ್ಯಗಳು ನಿರರ್ಥಕವಾಗಿವೆ. ಈ ನಾಯಕರು ಅನೇಕ ಅನ್ಯೆತಿಕತೆಗಳನ್ನು ಸಮರ್ಥಿಸಿಕೊಂಡಿದ್ದಾರೆ. ಅಲ್ಲದೆ ಅಸಂಖ್ಯಾತ ಆತ್ಮಗಳು ಅಳಿದುಹೋಗಲೂ ಕಾರಣರಾಗಿದ್ದಾರೆ. ಸುಳ್ಳು, ವಂಚನೆ, ವಿಶ್ವಾಸಘಾತತನ, ಕ್ರೌರ್ಯ ಅವರ ಚಾತುರ್ಯ ಹಾಗೂ ಮಹತ್ವದ ಕುರುಹಾಗಿ ಆಧಿಪತ್ಯ ಸ್ಥಾಪಿಸಿವೆ. ಈಗ ಏನಾದರೂ ಬದಲಾವಣೆಯಾಗಬೇಕಾಗಿದ್ದರೆ ಅದರ ಮೂಲದಿಂದಲೇ ಆಗಬೇಕಾಗಿದೆ. ಒಬ್ಬ ನಾಗರಿಕ ನಾಯಕನ ದೊಡ್ಡತನ ಆತನ ವಿಶ್ವಮಾನವ ದೃಷ್ಟಿ ಹಾಗೂ ಮನುಕುಲದ ಜವಾಬ್ದಾರಿಯ ಸಂವೇದನೆಯಿಂದ ಇಂದು ಹೊರಹೊಮ್ಮಬೇಕಾಗಿದೆ.'' ನಾಗ್ವಿಬ್ ಅವರ ಈ ಮಾತುಗಳು ಅವರ ಚಿಂತನೆಯ ನೆಲೆಯನ್ನು ನಿರ್ದೇಶಿಸುತ್ತವೆ. ''ಬರವಣಿಗೆಯ ಪ್ರೇರಣೆ ನನ್ನ ಕೈ ಬಿಟ್ಟಂದು ಅದು ನನ್ನ ಬದುಕಿನ ಕೊನೆಯ ದಿನವಾಗಿರಲಿ'' ಎಂದು ಸದಾ ಸಂವೇದನಾಶೀಲರಾಗಿ ಸ್ಪಂದಿಸುತ್ತಿರುವ ನಾಗ್ವಿಬ್ ಅವರ ಮೇಲೆ ೧೯೯೪ರ ಅಕ್ಟೋಬರ್‌ನಲ್ಲಿ ಇಸ್ಲಾಂ ಮೂಲಭೂತವಾದಿಗಳು ಕೊಲೆಯ ಯತ್ನ ನಡೆಸಿದ್ದರು. ಅದರಿಂದ ಪಾರಾದ ನಾಗ್ವಿಬ್ ಡಿಸೆಂಬರ್ ೧೧, ೨೦೦೪ರಂದು ತಮ್ಮ ೯೩ನೇ ಜನ್ಮದಿನವನ್ನು ಆಚರಿಸಿಕೊಂಡರು. ೯೩ನೇ ವಯಸ್ಸಿನಲ್ಲಿ ತಮ್ಮ ನಿಲುವುಗಳ ಬಗ್ಗೆ ಖಚಿತವಾಗಿರುವ ನಾಗ್ವಿಬ್ ಅವರ ಚಿಂತನೆಗಳು ಮೂರನೇ ಜಗತ್ತಿನ ವಿಶಿಷ್ಟ ಬದುಕನ್ನು ಕಟ್ಟಿಕೊಡುತ್ತವೆ.

ನಾಗ್ವಿಬ್ ತಮ್ಮ ೧೭ನೇ ವಯಸ್ಸಿನಲ್ಲಿ ಬರವಣಿಗೆಯನ್ನು ಪ್ರಾರಂಭಿಸಿದರು. ಅವರ ಮೊದಲ ಕಾದಂಬರಿ ಪ್ರಕಟಗೊಂಡದ್ದು ೧೯೩೯ರಲ್ಲಿ. ಈಜಿಪ್ಟ್‌ನಲ್ಲಿ ಕ್ರಾಂತಿಯಾದದ್ದು ಜುಲೈ ೧೯೫೨ರಲ್ಲಿ. ಆ ಹೊತ್ತಿಗಾಗಲೇ ಹತ್ತು ಕಾದಂಬರಿಗಳನ್ನು ಬರೆದಿದ್ದರು. ಅವರ ಒಂದು ಕಾದಂಬರಿ ೧೯೫೩ರಲ್ಲಿ ಮರುಮುದ್ರಣವಾಯ್ತು.

೧೯೫೭ರಲ್ಲಿ ಅವರ ಕಾದಂಬರಿತ್ರಯಗಳು (ಮೂರರಕೂಟ) ಅಂದರೆ 'ಬಿಟ್ವೀನ್ ದಿ ಪ್ಲೇಸಸ್', 'ಪ್ಲೇಸ್ ಆಫ್ ಲಾಂಗಿಂಗ್' ಹಾಗೂ 'ಶುಗರ್‌ಹೌಸ್' ಪ್ರಕಟಗೊಂಡಾಗ ಅರಬ್ ಪ್ರಪಂಚದಲ್ಲಿ ಪಾರಂಪರಿಕ ಗ್ರಾಮೀಣ ಜೀವನವನ್ನ ಅಭಿವ್ಯಕ್ತಿಸಿದ ಶ್ರೇಷ್ಠ ಬರಹಗಾರರೆಂಬ ಕೀರ್ತಿಗೆ ಪಾತ್ರರಾದರು. ೧೯೫೯ರಲ್ಲಿ ಪ್ರಕಟಗೊಂಡ 'ದಿ ಚಿಲ್ಡ್ರನ್ ಆಫ್ ಗೆಬೆಲಾವಿ' ಕಾದಂಬರಿಯ ನಂತರ ಅವರು ತಮ್ಮ ಬರಹವನ್ನು ರೂಪಕ ಹಾಗೂ ಸಂಕೇತಗಳಿಂದ ರಾಜಕೀಯ ನಿರ್ಣಯಗಳನ್ನಳವಡಿಸಿಕೊಂಡ ಹೊಸ ನಾಡಿಮಿಡಿತದ ಬರಹಗಳನ್ನು ನೀಡಿದರು. ಈ ಅವಧಿಯಲ್ಲಿ ಬರೆದ ಕೃತಿಗಳಲ್ಲಿ 'ದಿ ಥೀಫ್ ಆ್ಯಂಡ್ ದಿ ಡಾಗ್ಸ್' (೧೯೬೧), 'ಆಟಮ್ ಕ್ವೈಲ್' (೧೯೬೨), 'ಸ್ಮಾಲ್ ಟಾಕ್ ಆನ್ ದಿ ನೈಲ್' (೧೯೬೬) ಹಾಗೂ 'ಮಿಗಮಾರ್' (೧೯೬೭) ಸೇರಿರುವುದರ ಜೊತೆಗೆ ಅನೇಕ ಸಣ್ಣ ಕಥಾ ಸಂಕಲನಗಳೂ ಸೇರಿವೆ.

೧೯೭೨ರ ಹೊತ್ತಿಗೆ ನಾಗ್ವಿಬ್ ಅವರು ಮೊದಲು ಮಾರ್ಸ್‌ಮೇನ್ ಪುದುವಟ್ಟಿನ ಸಚಿವಾಲಯದಲ್ಲಿ ನಾಗರಿಕ ಸೇವಕರಾಗಿ, ನಂತರ ಕಲಾಶಾಲೆಯ ಪರಿಶೀಲನಾಧಿಕಾರದ ನಿರ್ದೇಶಕರಾಗಿ, ಚಲನಚಿತ್ರ ನಿರ್ಮಾಣ ಬೆಂಬಲಿತ ಅಸ್ತಿಭಾರದ ನಿರ್ದೇಶಕರಾಗಿ ಹಾಗೂ ಅಂತಿಮವಾಗಿ ಸಂಸ್ಕೃತಿ ಸಚಿವಾಲಯದ ಸಾಂಸ್ಕೃತಿಕ ವ್ಯವಹಾರಗಳ ಸಲಹೆಗಾರರಾಗಿ ಸೇವೆ ಸಲ್ಲಿಸಿದ್ದಾರೆ. ನಾಗ್ವಿಬ್ ಅವರು ನಿವೃತ್ತಿಹೊಂದಿದ ನಂತರ ಈಜಿಪ್ಟ್‌ನ ಆಡಳಿತಶಾಹಿ ಮುಂದುವರಿದ ಕ್ರಿಯಾತ್ಮಕತೆ ಭುಗಿಲೆದ್ದುದನ್ನು ಕಂಡಿತು. ಅದು ಬಹುತೇಕ ಪ್ರಯೋಗಾತ್ಮಕವಾಗಿತ್ತು. ಆ ವೇಳೆಗೆ ನಾಗ್ವಿಬ್ ಮೂವತ್ತು ಕಾದಂಬರಿಗಳ ಕರ್ತೃವಾಗಿದ್ದರು. ಎರಡು ನೂರಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದರು. ನೂರಕ್ಕಿಂತ ಹೆಚ್ಚು ಸಣ್ಣಕಥೆಗಳನ್ನು ರಚಿಸಿದ್ದರು. ಅವರ ಕಾದಂಬರಿಗಳಲ್ಲಿ ಅರ್ಧದಷ್ಟು ಚಲನಚಿತ್ರಗಳಾಗಿರುವುದು ಒಂದು ಹೆಗ್ಗಳಿಕೆ. ಅವು ಅರಾಬಿಕ್ ಮಾತನಾಡುವ ಜಗತ್ತಿನಲ್ಲಿ ಪ್ರದರ್ಶನಗೊಂಡಿವೆ. ಈಜಿಪ್ಟ್ ದೇಶದಲ್ಲಿ ಅವರ ಪ್ರತಿಯೊಂದು ಹೊಸ ಕೃತಿಯನ್ನೂ ಒಂದು ಸಾಂಸ್ಕೃತಿಕ ಘಟನೆಯನ್ನಾಗಿ ಪರಿಗಣಿಸಲಾಗಿದೆ. ಜಿಬ್ರಾಲ್ಟರ್‌ನಿಂದ ಕೊಲ್ಲಿಯವರೆಗೆ ಅವರ ಹೆಸರು ಸಾಹಿತ್ಯದ ಮುಂಚೂಣಿಯಲ್ಲಿ ಹೇಳಬೇಕಾಗಿರುವುದು ಅನಿವಾರ್ಯ ಎನ್ನುವ ಎತ್ತರಕ್ಕೆ ನಾಗ್ವಿಬ್ ಬೆಳೆದರು. ನೊಬೆಲ್ ಪ್ರಶಸ್ತಿ ಸಂದಾಗ ಅವರಿಗೆ ೭೭ ವರ್ಷಗಳಾಗಿತ್ತು.

ನಾಗ್ವಿಬ್ ಅವರಿಗೆ ಕೀರ್ತಿ ತಂದುಕೊಟ್ಟ ಕಾದಂಬರಿತ್ರಯಗಳ ಕೇಂದ್ರ ೧೯೧೦ರ ಕೊನೆಯ ಹಾಗೂ ೧೯೪೦ರವರೆಗಿನ ನಡುವಿನ ಕಾಲದಲ್ಲಿ ಪಲ್ಲಟಗೊಂಡ ಒಂದು ಕುಟುಂಬ. ಆ

ಕಾದಂಬರಿಗಳಲ್ಲಿ ಬಿಂಬಿಸಿರುವ ವ್ಯಕ್ತಿಗಳು ಸ್ಪಷ್ಟವಾಗಿ ಬೌದ್ಧಿಕ, ಸಾಮಾಜಿಕ ಹಾಗೂ ರಾಜಕೀಯ ನಿಯಂತ್ರಣಗಳಿಗೆ ಸಂಬಂಧಪಟ್ಟವರು. ಈ ಕಾದಂಬರಿಗಳಲ್ಲಿ ಆತ್ಮಕಥಾನಕ ರೂಪದ ಅಂಶಗಳಿವೆ. ಒಟ್ಟಾರೆಯಾಗಿ ಈ ಕಾದಂಬರಿಗಳ ಮೂಲಕ ನಾಗ್ವಿಬ್ ತಮ್ಮ ದೇಶದ ಜನರ ಮೇಲೆ ಪರಿಣಾಮಕಾರಿ ಪ್ರಭಾವವನ್ನು ಬೀರಿದ್ದಾರೆ.

ಅವರ ಅಪರೂಪದ ಕಾದಂಬರಿ 'ಚಿಲ್ಡ್ರನ್ ಆಫ್ ಗೆಬೆಲಾವಿ' (೧೯೫೯)ನಲ್ಲಿ ನಾಗ್ವಿಬ್ ಆಧ್ಯಾತ್ಮಿಕ ಮೌಲ್ಯಗಳನ್ನು ಕುರಿತ ಕೊನೆಯಿರದ ಮನುಷ್ಯನ ಹುಡುಕಾಟವನ್ನು ಚಿತ್ರಿಸಿದ್ದಾರೆ. ಆ್ಯಡಂ ಮತ್ತು ಈವ್, ಮೋಸೆಸ್, ಜೀಸಸ್, ಮಹ್ಮದ್ ಮತ್ತಿತರರು, ಜೊತೆಜೊತೆಗೆ ಆಧುನಿಕ ವಿಜ್ಞಾನಿಗಳು ತೆಳುವಾಗಿ ಸೋಗು ಹಾಕಿಕೊಂಡವರಂತೆ ಕಂಡುಬರುತ್ತಾರೆ. ಅನಾದಿಕಾಲದ ಫಾದರ್ ಜಿಬೆಲವೀಸ್ (ದೇವರು) ಸಾವಿಗೆ ಅಂತಿಮವಾಗಿ ಹೊಣೆಗಾರರಾಗುವುದು ವಿಜ್ಞಾನಿಗಳೆ. ಒಳಿತು ಹಾಗೂ ಕೆಡುಕುಗಳ ನಡುವೆ ವಿವಿಧ ಮಾದರಿಗಳನ್ನ, ವ್ಯವಸ್ಥೆಯನ್ನ, ಅವುಗಳೊಳಗಿನ ಸಂಘರ್ಷಗಳನ್ನ, ಒತ್ತಡಗಳನ್ನ ಒಳಗೊಂಡ ಚಿತ್ರಣಗಳನ್ನ ಕೊಡಲಾಗಿದೆ. ಇಂಥ ಉನ್ನತ ವಿಷಯಗಳನ್ನು ಕೃತಿ ಒಳಗೊಂಡಿದ್ದ ಕಾರಣ ಅದು ಈಜಿಪ್ಟ್‌ನಲ್ಲಿ ಪ್ರಕಟವಾಗದೆ ಮತ್ತೆಲ್ಲಿಯೋ ಪ್ರಕಟವಾಗಬೇಕಾಯ್ತು.




ನಾಗ್ವಿಬ್ ಅವರ ಪ್ರಭಾವಯುತ ಬರವಣಿಗೆಗೆ ಅವರ 'ಎ ಹೌಸ್‌ಬೋಟ್ ಆನ್ ದಿ ನೈಲ್' (೧೯೬೬) ಕಾದಂಬರಿ ಸಾಕ್ಷಿಯಾಗಿದೆ. ಅದು ಇನ್ನೂ ಇಂಗ್ಲಿಷ್‌ಗೆ ಅನುವಾದಗೊಂಡಿಲ್ಲ. ವಾಸ್ತವ ಹಾಗೂ ಮಾಯೆ ನಡುವಿನ ಸೂಕ್ಷ್ಮ ಅಂತರಗಳ ಅನುಭಾವಿಕ ಸಂವಾದಗಳು ಇದರಲ್ಲಿ ಅಡಕವಾಗಿವೆ. ಅದೇ ಸಮಯದಲ್ಲಿ ದೇಶದಲ್ಲಿ ನಡೆಯುತ್ತಿದ್ದ ಬೌದ್ಧಿಕ ಚಿಂತನೆಯ ಅಂಶಗಳನ್ನು ಈ ಕೃತಿ ಒಳಗೊಂಡಿದೆ.

ಕಾದಂಬರಿಗಳಲ್ಲಿ ಎಂತೋ ಅಂತೆ ನಾಗ್ವಿಬ್ ಅವರು ತಮ್ಮ ಸಣ್ಣಕಥೆಗಳಲ್ಲಿಯೂ ಆ ಭವ್ಯತೆಯನ್ನು ಮೆರೆದಿದ್ದಾರೆ. ೧೯೭೩ರಲ್ಲಿ ಹೊರಬಂದ ಅವರ ಕಥಾಸಂಕಲನ 'ಗಾಡ್ಸ್ ವರ್ಲ್ಡ್'ನಲ್ಲೂ ಕೂಡ ಈ ದೃಷ್ಟಿಯನ್ನು ನಾವು ಕಾಣಬಹುದು. ಅಸ್ತಿತ್ವವನ್ನು ಕುರಿತ ಪ್ರಶ್ನೆಗಳನ್ನು ಪ್ರಬಲವಾಗಿ ಕಲಾತ್ಮಕವಾಗಿ ನಿರ್ವಹಿಸಿರುವುದನ್ನು ಹಾಗೂ ಔಪಚಾರಿಕ ಪರಿಹಾರಗಳನ್ನು ಕೂಡ ನಾವು ಇದರಲ್ಲಿ ಗುರುತಿಸಬಹುದು.

ನಾಗ್ವಿಬ್ ಅವರ ಬರಹಗಳನ್ನು ಐತಿಹಾಸಿಕ, ವಾಸ್ತವ ಹಾಗೂ ಅನುಭಾವಿಕ ಮತ್ತು ಆಧ್ಯಾತ್ಮಿಕ ವಿಭಾಗಗಳಾಗಿ ವಿಂಗಡಿಸಲಾಗುತ್ತದೆ. ಅವರ ಯಾವ ಬರಹಗಳೂ ಕಾರಣಗಳಿಲ್ಲದೆ ರಚಿತವಾಗಿಲ್ಲ. ಆದಾಗ್ಯೂ ಅವರ ಬರಹದುದ್ದಕ್ಕೂ ಮಾನವ ಜೀವನದ ಭವ್ಯತೆಯನ್ನ ಸಾಮಾನ್ಯವಾಗಿ ಒತ್ತುಕೊಟ್ಟು ವರ್ಣಿಸಲಾಗಿದೆ ಎನ್ನುವ ಅಂಶವನ್ನು ಮರೆಯುವಂತಿಲ್ಲ.

ಕಾಲದ ಸ್ವಭಾವ ಮೂಲಭೂತವಾಗಿ ಪೂರ್ವಕ್ರಮಣವಾದುದು. ೧೯೮೭ರ ನೊಬೆಲ್ ಪ್ರಶಸ್ತಿ ಪುರಸ್ಕೃತರಾದ ರಷಿಯಾದ ಜೋಸೆಫ್ ಬ್ರಾಡ್‌ಸ್ಕಿ ಅವರ ಕಾದಂಬರಿಯಲ್ಲಿ ಅಭಿವ್ಯಕ್ತವಾಗಿರುವ

''ಕಾಲ ಎನ್ನುವುದು ಕತ್ತಿಯಂತೆ ಕತ್ತರಿಸುತ್ತದೆ,
ನೀವು ಅದನ್ನು ಕತ್ತರಿಸದೆ ಹೋದರೆ
ಅದು ನಿಮ್ಮನ್ನು ಕೊಲ್ಲುತ್ತದೆ.''

ಎನ್ನುವ ಮಾತು ಸಾರ್ವಕಾಲಿಕ ಸತ್ಯ. ಇದನ್ನು ಅರಿತ ನಾಗ್ವಿಬ್ ಅವರು ''ಬರವಣಿಗೆಯ ಪ್ರೇರಣೆ ನನ್ನನ್ನು ಕೈಬಿಟ್ಟಂದು ಅದು ನನ್ನ ಬದುಕಿನ ಕೊನೆಯ ದಿನವಾಗುತ್ತದೆ'' ಎನ್ನುವ ಎಚ್ಚರದಿಂದ ಅಡಿ ಇಟ್ಟವರು. ನಿರಂತರ ಕ್ರಿಯಾಶೀಲತೆಯೆ ಜೀವನ, ನಿಷ್ಕ್ರಿಯೆ ಎಂದರೆ ಸಾವು ಎನ್ನುವುದನ್ನ ಅದು ಸಾರುತ್ತದೆ. ಇದನ್ನೇ ಹನ್ನೆರಡನೇ ಶತಮಾನದ ವಚನಕಾರರು 'ಕಾಯಕ' ಎನ್ನುವ ಹೆಸರಿನಲ್ಲಿ ಅಭಿವ್ಯಕ್ತಿಸಿದರು. ಕ್ರಿಯಾಶೀಲರಾದಾಗ ಅಮೃತತ್ವ ಲಭಿಸುತ್ತದೆ. ಆದಕಾರಣವೇ ಅವರು ಕಾಯಕವನ್ನು ಕೈಲಾಸ ಎಂದು ಕರೆದುದು.

ನಾಗ್ವಿಬ್ ಅವರ ಕಾದಂಬರಿಗಳಿಗೆ, ಸಣ್ಣಕಥೆಗಳಿಗೆ ಹಾಗೂ ನಾಟಕಗಳಿಗೆ ಆಗಿಂದಾಗ್ಗೆ ರಾಜಧಾನಿ ಕೈರೋನಗರ ವಸ್ತುಗಳನ್ನು ಒದಗಿಸಿದೆ. ಅವರ ಕಾದಂಬರಿಯ ಒಂದು ಪಾತ್ರ ಕಮಲ್ ಅಸ್ತಿತ್ವದ ಸಮಸ್ಯೆಯನ್ನು ಎದುರಿಸುತ್ತದೆ. 'ಚಿಟ್-ಚಾಟ್ ಆನ್ ದಿ ನೈಲ್' ಎನ್ನುವ ದೋಣಿಮನೆ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚರ್ಚಿಸುವ ವೇದಿಕೆಯಾಗುತ್ತದೆ. ಅಲ್ಲಿ ಯುವ ಪ್ರೇಮಿಗಳು ಪಿರಮಿಡ್ಡುಗಳ ಆವರಣದ ನಡುವೆ ತಮ್ಮ ಹಾಸಿಗೆ ನಿರ್ಮಿಸಿಕೊಳ್ಳುವ ಚಿತ್ರಣ ಮನೋಜ್ಞವಾಗಿ ಮೂಡಿಬರುತ್ತದೆ.

ಬರಹಗಾರನನ್ನು ಗುರುತರವಾಗಿ ಪರಿಗಣಿಸಬೇಕಾದುದು ಒಂದು ಜೀವಂತ ಸಮಾಜದ ಮುಖ್ಯ ಹಾಗೂ ಪ್ರಮುಖ ಲಕ್ಷಣವಾಗಿರಬೇಕು. ಅವರ ಮೂಲನೆಲೆ ಮತ್ತು ಸೆಲೆ ವಿಜ್ಞಾನ ಮತ್ತು ಕಲೆಯಾಗಿರುತ್ತದೆ. ನಾಗ್ವಿಬ್ ಅವರು ಬದುಕಿ ಬರೆದ ಕಾಲದಲ್ಲಿ ಆ ದೇಶದಲ್ಲಿ ತೀವ್ರಗತಿಯಲ್ಲಿ ಆದ ಸಾಮಾಜಿಕ ಬದಲಾವಣೆಗಳು ಗಣನೀಯ ಪರಿಣಾಮ ಬೀರಿವೆ. ಆದಕಾರಣ ಅವರ ಬರಹ ಹಾಗೂ ಚಿಂತನೆಗಳಲ್ಲಿ ಆ ವಿಸ್ತಾರವನ್ನು ನಾವು ಕಾಣಬಹುದು.

ಅರೇಬಿಕ್ ಸಾಹಿತ್ಯ ಲೋಕದಲ್ಲಿ ಕಾದಂಬರಿ ಎನ್ನುವುದು ೨೦ನೇ ಶತಮಾನದಲ್ಲಿ ರೂಪ ಪಡೆದ ಒಂದು ಪ್ರಕಾರ. ಅದು ಹೆಚ್ಚು ಕಡಿಮೆ ನಾಗ್ವಿಬ್ ಅವರ ಸಮಕಾಲೀನವಾದುದು. ಅದಕ್ಕೆ ಒಂದು ಸ್ವರೂಪ ಹಾಗೂ ಸತ್ವವನ್ನ ತಂದುಕೊಟ್ಟ ಕೀರ್ತಿ ನಾಗ್ವಿಬ್ ಅವರಿಗೆ ಸಲ್ಲುತ್ತದೆ.

ನಾಗ್ವಿಬ್ ಅವರ ಕಾದಂಬರಿಗಳು ಮನುಕುಲದ ಆಧ್ಯಾತ್ಮಿಕ ಇತಿಹಾಸವನ್ನು ಕುರಾನಿನಲ್ಲಿ ಬರುವ ಹದಿನಾಲ್ಕು ಸೂರಾಗಳ ರೀತಿ ಚಿತ್ರಿಸುತ್ತದೆ. ಜ್ಯೂಡಯಿಸಂನ, ಕ್ರಿಶ್ಚಿಯಾನಿಟಿಯ ಹಾಗೂ ಇಸ್ಲಾಂನ ಅದ್ಭುತ ಶಕ್ತಿಗಳು ಎದುರಾಗುವ ಹೊಸ ಸವಾಲುಗಳಿಗೆ ಒತ್ತಡಗಳಿಂದ ಒಳಗಾಗಿ ಸೋಗು ಹಾಕಿಕೊಂಡಂತೆ ಕಾಣಿಸಿಕೊಳ್ಳುತ್ತವೆ. ಆಧುನಿಕ ವಿಜ್ಞಾನದಿಂದ ಸಮ್ಮಿಶ್ರಗೊಂಡ ಮನುಷ್ಯ ಅದೇ ಚತುರತೆಯಿಂದ ಪ್ರೀತಿಯ ದಿವ್ಯೌಷಧ ಹಾಗೂ ಸ್ಫೋಟಕದಂತೆ ಬೆರೆತುಹೋಗಿದ್ದಾನೆ. ಸಾವಿನ ಜವಾಬ್ದಾರಿಯನ್ನು ಆತ ಹೊರುವುದಲ್ಲದೆ ತನ್ನ ನಾಶದ ಮೂಲ ಹೇತುವೂ ಆಗಿದ್ದಾನೆ. ಆದಾಗ್ಯೂ ಕಾದಂಬರಿಯ ಅಂತ್ಯದಲ್ಲಿ ಒಂದು ಭರವಸೆಯ ಬೆಳಕಿನ ಕಿರಣ ಮಿನುಗುವುದನ್ನು ಕಾಣಬಹುದು.

ನಾಗ್ವಿಬ್ ಅವರನ್ನು ಒಬ್ಬ ನಿರಾಶಾವಾದಿಯನ್ನಾಗಿ ಬಿಂಬಿಸಲಾಗಿದೆ. ಆದರೆ ನಾಗ್ವಿಬ್ ಅವರು ಹೇಳುವ ''ನಾನೊಬ್ಬ ನಿರಾಶಾವಾದಿಯಾದರೆ ನಾನು ಬರೆಯುವುದೆ ಇಲ್ಲ'' ಎನ್ನುವ ಮಾತು ಅದಕ್ಕೆ ತದ್ವಿರುದ್ಧವಾಗಿದೆ.

ಒಮ್ಮೆ ನಾಗ್ವಿಬ್ ಹೇಳಿದ್ದರು, ''ನಾನು ಬರೆಯುತ್ತೇನೆ. ಏಕೆಂದರೆ ನನ್ನ ಇಬ್ಬರು ಹೆಣ್ಣು ಮಕ್ಕಳಿಗೆ ಹೈಹೀಲ್ಡ್ ಪಾದರಕ್ಷೆಗಳು ಬೇಕಾಗಿವೆ'' ಎಂದು. ಇಂಥ ಅಸಾಂಪ್ರದಾಯಿಕ ಮಾತುಗಳನ್ನು ತಪ್ಪಾಗಿ ಗ್ರಹಿಸಲಾಗಿದೆ. ಇದು ಅವರ ಸಾಹಿತ್ಯಿಕ ಮಹತ್ವವನ್ನು ಗುರುತರವಾಗಿ ಪರಿಗಣಿಸದೆ ಹಾಸ್ಯದ ನೆಲೆಯಲ್ಲಿ ತಮಾಷೆಗಾಗಿ ಹೇಳುವಂಥಾದ್ದು.

ಅರಬ್ ಪ್ರಪಂಚದ ಗದ್ಯ ಬರವಣಿಗೆಗೆ ನಾಗ್ವಿಬ್ ಅವರ ಕೊಡುಗೆ ಅದ್ಭುತವಾದುದು. ಅವರಿಂದಾಗಿ, ಅವರು ಬಂದ ಸಾಂಸ್ಕೃತಿಕ ನೆಲೆಯಿಂದಾಗಿ ಕಾದಂಬರಿ ಹಾಗೂ ಸಣ್ಣಕಥಾ ಲೋಕದ ಕಲಾತ್ಮಕತೆ ಅಂತರರಾಷ್ಟ್ರೀಯ ಮಟ್ಟದ ಸತ್ವವನ್ನು ಪಡೆದುಕೊಂಡಿದೆ. ವೈಯಕ್ತಿಕ ಕಾರಣದಿಂದ ನಾಗ್ವಿಬ್ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಭಾಗವಹಿಸಲು ಆಗಲಿಲ್ಲ. ಅವರ ಪರವಾಗಿ ಅವರ ಇಬ್ಬರು ಹೆಣ್ಣುಮಕ್ಕಳಾದ ಓಂಕಸೌಮ್ ಹಾಗೂ ಫಾತ್ಮ ಅವರು ಸ್ವೀಕರಿಸಿದರು.

ನಾನು ಎರಡು ಮಹಾನ್ ನಾಗರಿಕತೆಗಳ ಸಮ್ಮಿಲನ ಎನ್ನುತ್ತಾರೆ ನಾಗ್ವಿಬ್. ಅವುಗಳೆಂದರೆ ಒಂದು ಏಳು ಸಾವಿರ ವರ್ಷಗಳಷ್ಟು ಪುರಾತನವಾದ ಫೆರಾನಿಕ್ ನಾಗರಿಕತೆ, ಮತ್ತೊಂದು ಸಾವಿರದ ನಾಲ್ಕು ನೂರು ವರ್ಷಗಳಷ್ಟು ಹಳೆಯದಾದ ಇಸ್ಲಾಮಿಕ್ ಸಂಸ್ಕೃತಿ.

ಫೆರಾನಿಕ್ ನಾಗರಿಕತೆ ಕುರಿತು ನಾಗ್ವಿಬ್ ಹೇಳುತ್ತಾರೆ: ''ಪರೋಹ ಎನ್ನುವ ದೊರೆಗೆ ತನ್ನ ಆಸ್ಥಾನದ ವ್ಯಕ್ತಿಯೊಬ್ಬ

**ನಗೆ**

ನಗೆಯ ಬಣ್ಣ
ಬಿಳುಪೆಂದು ಕವಿಸಮಯ
ಬೊಚ್ಚುಬಾಯಿ ನಗೆಗೆ
ಯಾವುದು ಬಣ್ಣ?
ಆದರೂ ಸೆಳೆಯುವುದು ಬಗೆ,
ಮೋಹನದಾಸನಂಥವರ
ನಗೆ!

ಸಿ.ಪಿ.ಕೆ.
ಮೈಸೂರು

ಅನ್ಯ ಹೆಂಗಸಿನೊಂದಿಗೆ ಅಕ್ರಮ ಸಂಬಂಧ ಇಟ್ಟುಕೊಂಡಿರುವುದು ಕಂಡುಬರುತ್ತದೆ. ಅವನನ್ನು ದೊರೆ ಆ ಕಾಲದ ಉಗ್ರದೇವತೆಗಳ ಶಕ್ತಿಯಿಂದ ಸುಟ್ಟು ಭಸ್ಮಮಾಡಬಹುದಿತ್ತು. ಆದರೆ ಆತ ಹಾಗೆ ಮಾಡಲಿಲ್ಲ. ಬದಲಿಗೆ ಆ ದೊರೆ ತನಗೆ ನಂಬಿಕೆ ಇದ್ದ ನಿಷ್ಠರನ್ನು ಕರೆದು, 'ನನಗೆ ಸತ್ಯ ಬೇಕು, ಆಗ ಮಾತ್ರ ನಾನು ನ್ಯಾಯಯುತವಾದ ಶಿಕ್ಷೆ ವಿಧಿಸಲು ಸಾಧ್ಯ' ಎಂದು ಅದರ ಬಗ್ಗೆ ತನಿಖೆ ಮಾಡುವಂತೆ ಆದೇಶಿಸುತ್ತಾನೆ.'' ನಾಗ್ವಿಬ್ ಅವರ ದೃಷ್ಟಿಯಲ್ಲಿ ಸಾಮ್ರಾಜ್ಯವನ್ನ ಅಥವಾ ಅದ್ಭುತ ಪಿರಮಿಡ್‌ಗಳನ್ನ ಕಟ್ಟುವುದಕ್ಕಿಂತ ಸತ್ಯವನ್ನು ಕಂಡುಕೊಳ್ಳುವುದು ಮುಖ್ಯ. ಇದು ಅಲ್ಲಿಯ ವೈಭವಕ್ಕಿಂತ ಅತ್ಯಮೂಲ್ಯವಾದುದು. ಏಕೆಂದರೆ ಸಾಮ್ರಾಜ್ಯ ವೈಭವಗಳು, ಪಿರಮಿಡ್‌ಗಳು ಒಂದು ಕಾಲಕ್ಕೆ ಕಣ್ಮರೆಯಾಗಬಹುದು. ಆದರೆ ಸತ್ಯ ಮತ್ತು ನ್ಯಾಯ ಮನುಕುಲ ಇರುವವರೆಗೆ, ಜಗತ್ತು ಇರುವವರೆಗೆ ಜೀವಂತವಾಗಿ ಇರುತ್ತವೆ. ಈ ದೃಷ್ಟಿಯನ್ನು ಒಳಗೊಳ್ಳುವುದು ಸಾಮ್ರಾಜ್ಯ ಅಥವಾ ಪಿರಮಿಡ್ಡುಗಳನ್ನು ಕಟ್ಟುವುದಕ್ಕಿಂತ ಶ್ರೇಷ್ಠವಾದುದು ಎಂಬುದು ನಾಗ್ವಿಬ್ ಅವರ ನಿಲುವು.

ನಾಗ್ವಿಬ್ ಹೇಳುತ್ತಾರೆ: ''ಇಸ್ಲಾಮಿಕ್ ನಾಗರಿಕತೆಯನ್ನು ಕುರಿತು ಅದರ ಸೃಷ್ಟಿಕರ್ತನ ಸ್ವಾತಂತ್ರ್ಯ, ಸಮಾನತೆ, ಕ್ಷಮಾಗುಣಗಳನ್ನು ಕುರಿತು ನಾನು ಮಾತನಾಡುವುದಿಲ್ಲ; ಅದರ ಪ್ರವಾದಿಯ ಮಹತ್ವದ ಬಗ್ಗೆ ನಾನು ಮಾತನಾಡುವುದಿಲ್ಲ; ಚಿಂತಕರ ದೃಷ್ಟಿಯಲ್ಲಿ ಪ್ರವಾದಿಯವರು ಮಾನವನ ಇತಿಹಾಸದಲ್ಲಿ ಮಹತ್ವದ ವ್ಯಕ್ತಿ ಎಂದು ಪರಿಗಣಿಸಲ್ಪಟ್ಟಿದ್ದಾರೆ. ಅವರ ಅನುಯಾಯಿಗಳು ಆಕ್ರಮಿಸಿಕೊಂಡು ಭಾರತ, ಚೀನಾ ದೇಶಗಳು ಸೇರಿದಂತೆ ಫ್ರಾನ್ಸ್‌ವರೆಗೆ ನಿರ್ಮಿಸಿರುವ ಮಸೀದಿಯ ಗೋಪುರಗಳನ್ನು ಕುರಿತು ನಾನು ಮಾತನಾಡುವುದಿಲ್ಲ. ಆದರೆ ಅದಕ್ಕೆ ಬದಲಾಗಿ ಮಾನವ ಜನಾಂಗದ ನಾಟಕೀಯ ಬದಲಾವಣೆಗಳಲ್ಲಿ ಎದ್ದುಕಾಣುವ ಲಕ್ಷಣವನ್ನು ಕುರಿತು ಹೇಳಲಿಚ್ಛಿಸುತ್ತೇನೆ. ಬೈಸೆಂಟಿಯಂ ಯುದ್ಧದಲ್ಲಿ ವಿಜಯಗಳಿಸಿದ ನಂತರ ಪುರಾತನ ಗ್ರೀಕ್‌ಗೆ ಪಿತ್ರಾರ್ಜಿತವಾಗಿ ಬಂದ ತತ್ವಶಾಸ್ತ್ರ, ವೈದ್ಯಕೀಯ ಹಾಗೂ ಗಣಿತಶಾಸ್ತ್ರ ಗ್ರಂಥಗಳನ್ನು ಪಡೆದುಕೊಂಡು ಸೆರೆಯಾಳುಗಳನ್ನು ಬಿಟ್ಟುಕೊಡಲಾಯ್ತು. ಮೌಲ್ಯಗಳ ಪರೀಕ್ಷೆ ಇರುವುದು ಇಲ್ಲಿ. ಜ್ಞಾನಕ್ಕಾಗಿ ಒತ್ತಾಯಿಸುವ ಈ ಮೌಲ್ಯ – ಅದೂ ವಿಗ್ರಹಾರಾಧಕ ನಾಗರಿಕತೆಯಿಂದ ಕೂಡಿದ ದೇಶದಿಂದ – ಮಾನವ ಘನತೆಯ ದ್ಯೋತಕ.'' ನಾಗ್ವಿಬ್ ಅವರ ಮುಕ್ತಮನದ ಈ ಚಿಂತನೆ ಇಂದಿನ ಈ ವಿಕೃತ ಧಾರ್ಮಿಕ ವಿಕಲ್ಪತೆಗೆ ಹಿಡಿದ ಕನ್ನಡಿಯಾಗಿದೆ.

ತಮ್ಮ ಸಾಹಿತ್ಯಕ್ಕೆ ಸ್ಫೂರ್ತಿಯಾಗಿ ನೊಬೆಲ್ ಬಹುಮಾನವ ಪಡೆವ ಎತ್ತರಕ್ಕೆ ಏರಲು ಕಾರಣವಾದ ಹಾಗೂ ಪ್ರೇರಣೆ ನೀಡಿದ ಎರಡು ನಾಗರಿಕತೆಗಳನ್ನು ಕುರಿತು ನಾಗ್ವಿಬ್ ''ಈ ಎರಡೂ ನಾಗರಿಕತೆಗಳ ಮಡಿಲಲ್ಲಿ ಜನ್ಮ ತಾಳಿದ್ದು, ಅವುಗಳ ಹಾಲನ್ನು ಹೀರಿ ಅದನ್ನು ಕಲಾತ್ಮಕವಾಗಿ ಸಾಹಿತ್ಯದಲ್ಲಿ ನೀಡಿದ್ದು ನನ್ನ ವಿಧಿ. ಅಲ್ಲದೆ ನಾನು ವಿಶ್ವದ ವೈವಿಧ್ಯಮಯ ಸಂಸ್ಕೃತಿಯ ಸಾರವನ್ನು ಹೀರಿಕೊಂಡಿದ್ದೇನೆ. ಈ ಎಲ್ಲದರ ಸ್ಫೂರ್ತಿಯಿಂದ ಹಾಗೂ ನನ್ನ ಕುತೂಹಲದಿಂದ ಪದಗಳು ಆರ್ದ್ರತೆಯಿಂದ ಅರಳಿವೆ. ಈ ಪದಗಳ ಅದೃಷ್ಟದಿಂದಾಗಿ ನನಗಿಂದು ಈ


> ತಮ್ಮ ೯೩ನೇ ಇಳಿವಯಸ್ಸಿನಲ್ಲಿ ಆಳವಾದ ಚಿಂತನೆಗಳಿಂದ ಓದುಗರ ಹೃದಯವನ್ನು ಕಡೆದು ಅನುಕಂಪದ ಅಲೆಗಳನ್ನು ಉಕ್ಕಿಸುವ ವಿಶ್ವದ ಶ್ರೇಷ್ಠ ಬರಹಗಾರರಾದ ನಾಗ್ವಿಬ್ ಮಹಫೌಜ್ ಅವರು ಚಿರಾಯುವಾಗಲಿ ಎಂದು ಹಾರೈಸೋಣ.


ನೊಬೆಲ್ ಬಹುಮಾನ ಸಂದಿದೆ. ಈ ಕೀರ್ತಿ ಗೌರವ ಆ ಎರಡೂ ಮಹಾನ್ ನಾಗರಿಕತೆಗಳಿಗೆ ಸಲ್ಲುತ್ತದೆ'' ಎನ್ನುವ ನಾಗ್ವಿಬ್ ಅವರ ವಿಶ್ವವ್ಯಾಪಕ ದೃಷ್ಟಿ, ಸೌಜನ್ಯಗಳು ಹೃದಯದ ಕಣ್ಣೆವೆಗಳನ್ನು ತೆರೆಸುವ ದಿವ್ಯ ಬೆಳಕು.

ನೊಬೆಲ್ ಉಪನ್ಯಾಸದಲ್ಲಿ ನಾಗ್ವಿಬ್ ಅವರು ಹೇಳಿರುವ ಈ ಕೆಳಗಿನ ಮಾತುಗಳು ಅತ್ಯಂತ ಮಹತ್ವದಿಂದ ಕೂಡಿವೆ. ಮೂರನೇ ಜಗತ್ತಿನ ಹೃದಯವಂತಿಕೆಗೆ ಅವರ ಈ ಮಾತುಗಳು ಸಾಕ್ಷಿಯಾಗಿವೆ. ನಾಗ್ವಿಬ್ ಅವರ ಹೃದಯದಾಳದಿಂದ ಹೊಮ್ಮಿರುವ ಆ ಮಾತುಗಳೆಂದರೆ :

''ಮೂರನೇ ಜಗತ್ತಿನಿಂದ ಬಂದ ಈತನಿಗೆ ಕಥೆಯನ್ನು ಬರೆಯುವ ಶಾಂತಮನಸ್ಸು ಹೇಗೆ ಸಾಧ್ಯ ಎಂದು ನಿಮಗೆ ಆಶ್ಚರ್ಯವಾಗಬಹುದು. ನಿಮಗೆ ಆ ಭಾವನೆ ಬಂದರೆ ಅದು ಸಹಜ. ನಾನು ಹಸಿವಿನಿಂದ ನರಳುತ್ತಿರುವ ನಾಡಿನಿಂದ ಬಂದಿದ್ದೇನೆ. ಏಷ್ಯಾದಲ್ಲಿ ಕೆಲವರು ಪ್ರವಾಹದಿಂದ ಕೊಚ್ಚಿಹೋಗುತ್ತಾರೆ. ಆಫ್ರಿಕಾದಲ್ಲಿ ಭೀಕರ ಬರಗಾಲದಿಂದ ಸಾಯುತ್ತಾರೆ. ಮಾನವ ಹಕ್ಕುಗಳ ಈ ಯುಗದಲ್ಲಿ ತಮ್ಮ ಹಕ್ಕುಗಳಿಂದ ಕೋಟ್ಯಂತರ ಜನ ವಂಚಿತರಾಗಿದ್ದಾರೆ. ಅವರು ಅವರ ಭೂಮಿಯಲ್ಲೇ ವಾಸಿಸುತ್ತಿದ್ದರೂ ಅವರು ಅದರಿಂದ ವಂಚಿತರಾಗಿದ್ದಾರೆ. ಬುಲೆಟ್ ಏಟುಗಳಿಂದ ಸಾವನ್ನಪ್ಪಿದ್ದಾರೆ. ಮುಂದುವರೆದ ರಾಷ್ಟ್ರಗಳ ಕ್ರೌರ್ಯದಿಂದಾಗಿ ಮನೆಮಠಗಳನ್ನು ಕಳೆದುಕೊಂಡು ನಿರ್ಗತಿಕರಾಗಿದ್ದಾರೆ.

''ಹೌದು, ಇಂಥ ಮೂರನೇ ಜಗತ್ತಿನಿಂದ ಬಂದ ಮನುಷ್ಯ ಹೇಗೆ ಬರೆಯಬಹುದು ? ಅದೃಷ್ಟವಶಾತ್ ಕಲೆ ಉದಾರವಾದುದು. ಅದು ಹರ್ಷಿತರೊಂದಿಗೆ ಹೇಗೆ ವರ್ತಿಸುತ್ತದೆಯೋ ಹಾಗೆ ದುಃಖಿತರೊಂದಿಗೂ ವರ್ತಿಸುತ್ತದೆ. ಈ ಈರ್ವರ ಹೃದಯದಿಂದ ಹೊಮ್ಮುವ ಭಾವನೆಗಳಿಗೆ ಅದು ಅನುವು ಮಾಡಿಕೊಡುತ್ತದೆ. ಎಲ್ಲ ರೀತಿಯ ನಾಶ ಪ್ರವೃತ್ತಿಯನ್ನು ಅದು ತಿರಸ್ಕರಿಸುತ್ತದೆ. ಆ ನಿಟ್ಟಿನಲ್ಲಿ ಪ್ರಬಲ ರಾಷ್ಟ್ರಗಳ ಒಲವು ಮೂಡಬೇಕು. ಕೈಗಾರಿಕಾ ಮಲಿನತೆಯಿಂದ ಬಿಡುಗಡೆಯನ್ನು ನಿರೀಕ್ಷಿಸುವಂತೆ ಬುದ್ಧಿವಂತ ವರ್ಗದವರು ನೈತಿಕ ಮಲಿನತೆಯಿಂದ ಪಾರಾಗಿ ಮನುಕುಲವನ್ನು ರಕ್ಷಿಸಬೇಕಾಗಿದೆ. ಮುಂದುವರಿದ ರಾಷ್ಟ್ರಗಳು ಹಾಗೂ ಮುಂದುವರಿಯುತ್ತಿರುವ ಅಭಿವೃದ್ಧಿಶೀಲ ರಾಷ್ಟ್ರಗಳು ಒಂದೇ ಕುಟುಂಬಕ್ಕೆ ಸೇರಿದವುಗಳು.

''ಒಂದು ರಾಷ್ಟ್ರದ ನಾಗರಿಕತೆಯಿಂದ, ಜ್ಞಾನದಿಂದ, ವಿವೇಕದಿಂದ ಪಡೆದುಕೊಳ್ಳಬಲ್ಲ ಪ್ರತಿಯೊಬ್ಬ ಮನುಷ್ಯನ ಹೆಗಲ ಮೇಲೆ ಗುರುತರ ಜವಾಬ್ದಾರಿ ಇದೆ. ನಾನು ಮೂರನೇ ಜಗತ್ತಿನ ಪರವಾಗಿ ಈ ಮಾತುಗಳನ್ನಾಡಿದರೆ ನನ್ನ ಮಿತಿಯನ್ನು ನಾನು ಮೀರುತ್ತಿಲ್ಲ ಎಂದು ಭಾವಿಸುತ್ತೇನೆ. ನಮ್ಮ ನೋವು ಸಂಕಟಗಳಿಗೆ ನೀವು ಪ್ರೇಕ್ಷಕರಾಗಬೇಡಿ, ನಿಮ್ಮ ಘನತೆಗೆ ತಕ್ಕಂತೆ ನೀವು ನಿರ್ವಹಿಸಬೇಕಾದ ಹೊಣೆಗಾರಿಕೆ ನಿಮ್ಮ ಹೆಗಲಮೇಲಿದೆ. ಮನುಷ್ಯನ ಬಗ್ಗೆ ಏನೂ ಯೋಚಿಸದೆ ಪ್ರಾಣಿಗಳ ಬಗ್ಗೆ, ಸಸ್ಯಗಳ ಬಗ್ಗೆ ಹಾದಿ ತಪ್ಪಿಸುತ್ತಿರುವುದು ನಿಮ್ಮ ಶ್ರೇಷ್ಠಸ್ಥಾನದ ವಿಕಲ್ಪತೆಯಾಗಿದೆ. ನಿಮಗೆ ಸಾಕಷ್ಟು ಪದಗಳಿವೆ, ಆದರೆ ಕ್ರಿಯೆ ಇಲ್ಲ. ಕ್ರಿಯೆಗೆ ತೊಡಗಲು ಇದು ಸಕಾಲವಾಗಿದೆ. ಬಡ್ಡಿಯ ಮೂಲಕ ರಕ್ತ ಹೀರುವವರ ಹಾಗೂ ದರೋಡೆಕೋರರ ಪ್ರಾಬಲ್ಯಕ್ಕೆ ಕಡಿವಾಣ ಹಾಕುವ ಕಾಲ ಇದಾಗಿದೆ. ಇಡೀ ವಿಶ್ವಕ್ಕೆ ಜವಾಬ್ದಾರಿಯುತ ನಾಯಕತ್ವ ವಹಿಸುವ ಕಾಲ ಇದಾಗಿದೆ. ಆಫ್ರಿಕಾದ ದಕ್ಷಿಣ ವಲಯದ ಬಂಧಿಗಳನ್ನ ಬಿಡುಗಡೆಗೊಳಿಸಿ, ಬರಗಾಲದಿಂದ ಬಸವಳಿದವರನ್ನು ಬದುಕಿಸಿ, ಗುಂಡಿನ ಸುರಿಮಳೆಯಿಂದ ಸಾಯುತ್ತಿರುವ ಪ್ಯಾಲೆಸ್ಟೀನಿಯನ್ನರನ್ನು ರಕ್ಷಿಸಿ, ಆದಾಗ್ಯೂ, ತಮ್ಮ ಮಹತ್ವದ ಆಧ್ಯಾತ್ಮಿಕ ಪರಂಪರೆಯನ್ನು ನಾಶಗೊಳಿಸುತ್ತಿರುವ ಇಸ್ರೇಲಿಯರನ್ನೂ ಕಾಪಾಡಿ. ಜಟಿಲವಾದ ಆರ್ಥಿಕ ನಿಯಮಗಳಿಂದ ಸಾಲದಲ್ಲಿ ಮುಳುಗಿ ಸಾಯುತ್ತಿರುವವರ ಜೀವಗಳನ್ನು ಮನ್ನಿಸಿ, ಮನುಕುಲದ ಮುನ್ನಡೆಗಾಗಿ ಅವರನ್ನು ಅನುವುಗೊಳಿಸಿ.

''ಇಷ್ಟು ಹೇಳಿದ ನನಗೆ ಕ್ಷಮೆ ಇರಲಿ. ಒಳಿತಿಗೆ ವಿಜಯ ಇರುವುದು ಸ್ವರ್ಗದಲ್ಲಿ ಎನ್ನುವ ಕಾಂಟನೊಂದಿಗೆ ನನ್ನ ಸಹಮತವಿಲ್ಲ. ಒಳಿತು ದಿನನಿತ್ಯ ತನ್ನ ವಿಜಯ ಸಾಧಿಸುತ್ತಿದೆ. ದುಷ್ಟತೆ ಎನ್ನುವುದು ನಾವು ತಿಳಿದಷ್ಟು ಶಕ್ತವಾದುದಲ್ಲ. ರಾಷ್ಟ್ರ ನಿರ್ಮಾಣ, ಕ್ರಿಯಾತ್ಮಕತೆಯ ಭವ್ಯತೆ, ಖಗಯಾನ, ಮಾನವ ಹಕ್ಕುಗಳ ಘೋಷಣೆ ಒಳಿತಿನಿಂದ ಮಾತ್ರ ಆಗಿರುವುದು, ದುಷ್ಟಶಕ್ತಿಯಿಂದಲ್ಲ. ಮನುಷ್ಯನ ಮನಸ್ಸಿನಲ್ಲಿ ಬಹುಕಾಲ ನೆಲೆ ನಿಲ್ಲುವುದು ಸಿಹಿಯಲ್ಲ, ಕಹಿ. ಆದರೆ ಅದು ಚಿರಾಯುವಲ್ಲ.

''ನಮ್ಮ ಶ್ರೇಷ್ಠಕವಿ ಅಬುಲ್-ಅಲಾ-ಅಲ್-ಮಾ ಹೇಳುವಂತೆ 'ಸಾವಿನ ಸಂದರ್ಭದ ದುಃಖ ಹುಟ್ಟಿನ ಸಮಯದ ಸಂತಸಕ್ಕಿಂತ ನೂರುಪಟ್ಟು ಹೆಚ್ಚಿನದು'.

''ಅಂತಿಮವಾಗಿ ಮತ್ತೊಮ್ಮೆ ನನ್ನ ಧನ್ಯವಾದಗಳನ್ನು ಸಲ್ಲಿಸಿ ನಿಮ್ಮ ಕ್ಷಮೆ ಯಾಚಿಸುತ್ತೇನೆ.''

ತಮ್ಮ ೯೩ನೇ ಇಳಿವಯಸ್ಸಿನಲ್ಲಿ ಆಳವಾದ ಚಿಂತನೆಗಳಿಂದ ಓದುಗರ ಹೃದಯವನ್ನು ಕಡೆದು ಅನುಕಂಪದ ಅಲೆಗಳನ್ನು ಉಕ್ಕಿಸುವ ವಿಶ್ವದ ಶ್ರೇಷ್ಠ ಬರಹಗಾರರಾದ ನಾಗ್ವಿಬ್ ಮಹಫೌಜ್ ಅವರು ಚಿರಾಯುವಾಗಲಿ ಎಂದು ಹಾರೈಸೋಣ.


ಜ. ಹೊ. ನಾರಾಯಣಸ್ವಾಮಿ
೨೦೬೪/ಅ, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩೨೦೧

HOSATHU Kannada Monthly / April 2005 Rs. 10 RNI Regn. No. KARKAN/1999/614 REGD. CPMG / KA / BGE - 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna